# ಗೌರ್ಮೆಂಟ್ ಬ್ರಾಹ್ಮಣ

(ಆತ್ಮ ಕಥನ)

**ಅರವಿಂದ ಮಾಲಗತ್ತಿ**



ಕರ್ನಾಟಕ ಸರ್ಕಾರ

**ಕನ್ನಡ ಮತ್ತು ಸಂಸ್ಕೃತಿ ಇಲಾಖೆ**

ಕನ್ನಡ ಭವನ, ಜೆ.ಸಿ.ರಸ್ತೆ

ಬೆಂಗಳೂರು – ೫೬೦ ೦೦೨

**GOVERNMENT BRAHMANA -** An autobiography by **Dr. Aravinda Malagatti**; Published by **Manu Baligar**, Director, Department of Kannada and Culture, Kannada Bhavana, J.C.Road, Bengaluru - 560 002.



ಮೊದಲ ಮುದ್ರಣ : ೧೯೯೪

ಏಳನೆ ಮುದ್ರಣ : ೨೦೧೧

ಪ್ರತಿಗಳು : ೧೦೦೦

ಪುಟಗಳು : xviii + ೧೩೪

ಬೆಲೆ : ರೂ. ೪೫.೦೦

ರಕ್ಷಾಪುಟ ವಿನ್ಯಾಸ : **ಕೆ. ಚಂದ್ರನಾಥ ಆಚಾರ್ಯ**

ಮುದ್ರಕರು :

**ಮೆ|| ಮಯೂರ ಪ್ರಿಂಟ್ ಆ್ಯಡ್ಸ್**

ನಂ. ೬೯, ಸುಬೇದಾರ್ ಛತ್ರಂ ರೋಡ್

ಬೆಂಗಳೂರು – ೫೬೦ ೦೨೦ ದೂ : ೨೩೩೪೨೭೨೪

**ಬಿ.ಎಸ್. ಯಡಿಯೂರಪ್ಪ**
ಮುಖ್ಯಮಂತ್ರಿಗಳು


ಕರ್ನಾಟಕ ಸರ್ಕಾರ

ವಿಧಾನಸೌಧ
ಬೆಂಗಳೂರು ೫೬೦ ೦೦೧

ಸಿಎಂ/ಪಿಎಸ್/೨೬/೧೧

# ಶುಭ ಸಂದೇಶ

ವಿಶ್ವ ಕನ್ನಡ ಸಮ್ಮೇಳನದ ಸಂಭ್ರಮಾಚರಣೆಯ ಸಂದರ್ಭದಲ್ಲಿ ಕನ್ನಡ ನಾಡು ಏಕೀಕರಣಗೊಂಡು ೫೫ನೇ ವರ್ಷಕ್ಕೆ ಹೆಜ್ಜೆಯನ್ನಿಟ್ಟಿದೆ. ಈ ಸಂದರ್ಭವನ್ನು ರಚನಾತ್ಮಕವಾಗಿ ದಾಖಲಿಸಿ ಸ್ಮರಣೀಯಗೊಳಿಸಬೇಕೆಂಬುದು ಸರ್ಕಾರದ ಮಹದಾಶಯ. ಅದಕ್ಕಾಗಿ ಬೆಳಗಾವಿಯಲ್ಲಿ **"ವಿಶ್ವ ಕನ್ನಡ ಸಮ್ಮೇಳನ"** ವನ್ನು ಇದೇ ಮಾರ್ಚ್ ತಿಂಗಳಿನಲ್ಲಿ ಆಯೋಜಿಸಲಾಗಿದೆ. ಇದನ್ನು ಅತ್ಯಂತ ಅರ್ಥಪೂರ್ಣವಾಗಿ ಆಚರಿಸುವುದು ಕರ್ನಾಟಕ ಸರ್ಕಾರದ ಆಶಯವಾಗಿದೆ. ಇದರ ಅಂಗವಾಗಿ ನಾಡಿನ ವಿವಿಧ ಕ್ಷೇತ್ರಗಳಲ್ಲಾಗಿರುವ ಪ್ರಗತಿಯ ಆತ್ಮಾವಲೋಕನದ ಜೊತೆಗೆ ಕನ್ನಡ ಸಾಹಿತ್ಯದ ಸೃಜನಶೀಲ ಮತ್ತು ಸೃಜನೇತರ ಪ್ರಕಾರಗಳ ೧೦೦ ಕೃತಿಗಳನ್ನು ಕನ್ನಡದ ಮೇರುಕೃತಿಗಳ ಮರುಮುದ್ರಣ ಯೋಜನೆಯಡಿ ಪ್ರಕಟಿಸಲಾಗುತ್ತಿದೆ. ಕನ್ನಡದ ಖ್ಯಾತ ಲೇಖಕರ ಮಹತ್ವದ ಕೃತಿಗಳನ್ನು ಪ್ರಕಟಿಸಿ, ಸುಲಭ ಬೆಲೆಯಲ್ಲಿ ಸಾಹಿತ್ಯಾಸಕ್ತರಿಗೆ ಒದಗಿಸುವ ಹಂಬಲ ನಮ್ಮದು.

ಈ ಸಾಹಿತ್ಯ ಮಾಲಿಕೆಯಲ್ಲಿನ ಕೃತಿರತ್ನಗಳನ್ನು ಕನ್ನಡಿಗರು ಸಹೃದಯತೆಯಿಂದ ಸ್ವಾಗತಿಸುವ ಮೂಲಕ ಇವುಗಳ ಪ್ರಯೋಜನವನ್ನು ಪಡೆದುಕೊಂಡರೆ ಸರ್ಕಾರದ ಈ ಯೋಜನೆ ಸಾರ್ಥಕವಾಗುತ್ತದೆ ಎಂದು ಭಾವಿಸುತ್ತೇನೆ.

ದಿನಾಂಕ ೨೪.೦೧.೨೦೧೧

**(ಬಿ.ಎಸ್. ಯಡಿಯೂರಪ್ಪ)**



ಕರ್ನಾಟಕ ಸರ್ಕಾರ

**ಗೋವಿಂದ ಎಂ. ಕಾರಜೋಳ**
ಕನ್ನಡ ಮತ್ತು ಸಂಸ್ಕೃತಿ,
ಸಣ್ಣ ನೀರಾವರಿ ಹಾಗೂ ಜವಳಿ ಸಚಿವರು

ವಿಧಾನಸೌಧ
ಬೆಂಗಳೂರು – ೦೧

# ಚೆನ್ನುಡಿ

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ವಿಶ್ವ ಕನ್ನಡ ಸಮ್ಮೇಳನದ ಅಂಗವಾಗಿ ಸುಮಾರು ೧೦೦ ಕನ್ನಡದ ಮೇರುಕೃತಿಗಳನ್ನು ಮರುಮುದ್ರಿಸಲು ಉದ್ದೇಶಿಸಿರುತ್ತದೆ.

ಈ ಯೋಜನೆಯಡಿ ಕನ್ನಡ ಸಾಹಿತ್ಯದ ಬೇರೆ ಬೇರೆ ಕಾಲಘಟ್ಟಗಳಲ್ಲಿ ರಚನೆಗೊಂಡ ಕಥೆ, ಕಾದಂಬರಿ, ವಿಚಾರ ಸಾಹಿತ್ಯ, ಪ್ರಬಂಧ, ವಿಮರ್ಶೆ, ನಾಟಕ, ಕವನಸಂಕಲನ – ಹೀಗೆ ಸಾಹಿತ್ಯದ ವಿವಿಧ ಪ್ರಕಾರಗಳ ಕೆಲವು ಪ್ರಾತಿನಿಧಿಕ ಕೃತಿಗಳನ್ನು ಪ್ರಕಟಿಸಲಾಗುತ್ತಿದೆ. ಈ ಪ್ರಾತಿನಿಧಿಕ ಕೃತಿಗಳನ್ನು ಸರ್ಕಾರದಿಂದ ರಚಿತವಾದ ಆಯ್ಕೆ ಸಮಿತಿಯು ಮುದ್ರಣಕ್ಕೆ ಆಯ್ಕೆ ಮಾಡಿರುತ್ತದೆ. ಈ ಕೃತಿಗಳನ್ನು ಮುದ್ರಣಕ್ಕೆ ಆಯ್ಕೆ ಮಾಡಿದ ಆಯ್ಕೆ ಸಮಿತಿಯ ಎಲ್ಲಾ ವಿದ್ವಾಂಸರಿಗೂ ನನ್ನ ಧನ್ಯವಾದಗಳು. ಈ ಮಹತ್ವದ ಕೃತಿಗಳನ್ನು ಸಹೃದಯ ಕನ್ನಡಿಗರಿಗೆ ಸುಲಭ ಬೆಲೆಯಲ್ಲಿ ತಲುಪಿಸಬೇಕೆಂಬುದು ನಮ್ಮ ಹೆಗ್ಗುರಿಯಾಗಿರುತ್ತದೆ. ಕನ್ನಡ ಸಾಹಿತ್ಯದ ಮೈಲಿಗಲ್ಲುಗಳಾಗಿರುವ ಈ ಪುಸ್ತಕಗಳು ಭಾವಿ ಪೀಳಿಗೆಯವರಿಗೆ ದಾರಿದೀಪಗಳಾಗಿವೆ. ಈ ಕೃತಿಗಳ ಪ್ರಯೋಜನವನ್ನು ಕನ್ನಡ ಜನತೆ ಹಾಗೂ ವಿದ್ಯಾರ್ಥಿಗಳು ಪಡೆದರೆ ನಮ್ಮ ಶ್ರಮ ಸಾರ್ಥಕವೆಂದು ಭಾವಿಸುತ್ತೇನೆ.

ದಿನಾಂಕ ೧೮.೧.೨೦೧೧

**(ಗೋವಿಂದ ಎಂ. ಕಾರಜೋಳ)**

# ಎರಡು ನುಡಿ

ಕರ್ನಾಟಕ ಸರ್ಕಾರವು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವತಿಯಿಂದ 'ವಿಶ್ವ ಕನ್ನಡ ಸಮ್ಮೇಳನ'ದ ಅಂಗವಾಗಿ ಕನ್ನಡದ ಮೇರುಕೃತಿಗಳ ಮರುಮುದ್ರಣ ಯೋಜನೆಯಡಿ ಕನ್ನಡ ಸಾರಸ್ವತ ಲೋಕವನ್ನು ಶ್ರೀಮಂತಗೊಳಿಸಿರುವ ಸಾಹಿತಿಗಳ ಮಹತ್ವದ ಕೃತಿಗಳನ್ನು ಓದುಗರಿಗೆ ಒದಗಿಸಬೇಕೆಂಬ ಸದಾಶಯ ಹೊಂದಿರುತ್ತದೆ. ಈ ಯೋಜನೆಯಡಿ ಸುಮಾರು ೧೦೦ ಕೃತಿಗಳನ್ನು ಪ್ರಕಟಿಸಲು ಉದ್ದೇಶಿಸಿದೆ.

ಈ ಕೃತಿಗಳನ್ನು ಆಯ್ಕೆಮಾಡಲು ಖ್ಯಾತ ವಿದ್ವಾಂಸರಾದ ಪ್ರೊ. ಎಲ್.ಎಸ್. ಶೇಷಗಿರಿರಾವ್‌ರವರ ಅಧ್ಯಕ್ಷತೆಯಲ್ಲಿ ನಾಡಿನ ಹೆಸರಾಂತ ಸಾಹಿತಿ / ವಿದ್ವಾಂಸರುಗಳನ್ನೊಳಗೊಂಡ ಆಯ್ಕೆ ಸಮಿತಿಯನ್ನು ರಚಿಸಿದೆ. ಈ ಆಯ್ಕೆ ಸಮಿತಿಯು ಕನ್ನಡದ ಮೇರುಕೃತಿಗಳ ಮರುಮುದ್ರಣ ಯೋಜನೆಗೆ ಕನ್ನಡ ಸಾಹಿತ್ಯದ ವಿವಿಧ ಕಾಲಘಟ್ಟಗಳಲ್ಲಿ ಬಂದ ಪ್ರಾತಿನಿಧಿಕ ಕೃತಿಗಳನ್ನು ಆಯ್ಕೆ ಮಾಡಿರುತ್ತದೆ. ಆಯ್ಕೆ ಸಮಿತಿಯ ಅಧ್ಯಕ್ಷರು ಹಾಗೂ ಸದಸ್ಯರಿಗೆ ಸರ್ಕಾರದ ಪರವಾಗಿ ವಂದನೆಗಳು ಸಲ್ಲುತ್ತವೆ. ಈ ಪುಸ್ತಕಗಳನ್ನು ಹೊರತರಲು ಅನುಮತಿ ನೀಡಿ ಸಹಕರಿಸಿದ ಎಲ್ಲಾ ಲೇಖಕರು ಹಾಗೂ ಹಕ್ಕುದಾರರುಗಳಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ. ಕನ್ನಡದ ಮೇರುಕೃತಿ ಸಾಹಿತ್ಯ ಮಾಲಿಕೆಯನ್ನು ಓದುಗರು ಸ್ವಾಗತಿಸುತ್ತಾರೆಂದು ನಂಬಿದ್ದೇನೆ.

ದಿನಾಂಕ ೧೭.೦೧.೨೦೧೧

**(ರಮೇಶ್ ಬಿ.ಝಳಕಿ)**
ಸರ್ಕಾರದ ಕಾರ್ಯದರ್ಶಿಗಳು
ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ

# ಅಧ್ಯಕ್ಷರ ಮಾತು

ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಕನ್ನಡದ ಮೇರುಕೃತಿಗಳನ್ನು ಪುನರ್‌ಮುದ್ರಣ ಮಾಡಲು ಒಂದು ಯೋಜನೆಯನ್ನು ಕೈಗೊಂಡಿತು. ಕೃತಿಗಳ ಆಯ್ಕೆಗಾಗಿ ಸರ್ಕಾರವು ಒಂದು ಸಮಿತಿಯನ್ನು ರಚಿಸಿತು. ಈ ಮಹತ್ವದ ಯೋಜನೆಯ ಸಮಿತಿಯ ಅಧ್ಯಕ್ಷನಾಗಿ ಕಾರ್ಯನಿರ್ವಹಿಸುವ ಸುಯೋಗ ನನ್ನದಾಯಿತು.

ಈ ಯೋಜನೆಯ ಮಹತ್ವವನ್ನು ನಾನು ವಿವರಿಸುವ ಅಗತ್ಯವಿಲ್ಲ. ಕನ್ನಡದ ಶ್ರೇಷ್ಠ ಕೃತಿಗಳನ್ನು ಸುಲಭ ಬೆಲೆಗೆ ಕನ್ನಡಿಗರ ಕೈಗಳಲ್ಲಿರಿಸಲು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಹಲವು ಯೋಜನೆಗಳನ್ನು ಕೈಗೊಂಡಿರುವುದಕ್ಕಾಗಿ ಸರ್ಕಾರವನ್ನೂ ಇಲಾಖೆಯನ್ನೂ ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಕನ್ನಡ ಸಂಸ್ಕೃತಿಗೆ ಈ ಯೋಜನೆಗಳು ಮಹತ್ವದ ಕೊಡುಗೆಯನ್ನು ನೀಡುತ್ತವೆ.

ಕನ್ನಡದ ಮೇರುಕೃತಿಗಳನ್ನು ಆರಿಸುವುದು ಸುಲಭದ ಕೆಲಸವಲ್ಲ. ಇಂತಹ ಆಯ್ಕೆಯಲ್ಲಿ ಬೇರೆ ಬೇರೆ ಅಭಿಪ್ರಾಯಗಳಿಗೆ ಸಾಧಾರವಾಗಿಯೇ ಅವಕಾಶವಿರುತ್ತದೆ. ಕನ್ನಡ ನಾಡಿನ ಶ್ರೇಷ್ಠ ಸಾಹಿತಿಗಳು ಈ ಸಮಿತಿಯ ಸದಸ್ಯರಾಗಿದ್ದದ್ದು ಸುದೈವದ ಸಂಗತಿ. ಕೃತಿಗಳನ್ನು ಚರ್ಚಿಸಿ ಮಹತ್ವದ ನಿರ್ಧಾರಕ್ಕೆ ಬಂದ ಸಮಿತಿಯು ಸಾಧ್ಯವಾದ ಕಾರ್ಯವನ್ನು ಸಾಧಿಸಿದೆ. ಇದಕ್ಕಾಗಿ ನಾನು ಸಮಿತಿಯ ಎಲ್ಲ ಸದಸ್ಯರಿಗೂ ಕೃತಜ್ಞನಾಗಿದ್ದೇನೆ.

ಈ ಕಾರ್ಯದ ನಿರ್ವಹಣೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರಾದ ಶ್ರೀ ಮನು ಬಳಿಗಾರ್ ಅವರು ನೆರವಾಗಿದ್ದಾರೆ. ಅವರ ಮತ್ತು ಅವರ ಸಿಬ್ಬಂದಿಯವರ ಅಮೂಲ್ಯ ಸಹಕಾರಕ್ಕೆ ನಾನು ಕೃತಜ್ಞ.

ಕನ್ನಡ ನಾಡಿನ ಮನೆಮನೆಗಳಲ್ಲಿ ಸಾಹಿತ್ಯದ ಮಂಗಳ ದೀಪದ ಬೆಳಕನ್ನು ಹರಡುವ ಈ ಯೋಜನೆಯ ಪೂರ್ಣಪ್ರಯೋಜನವನ್ನು ಕನ್ನಡಿಗರು ಪಡೆದುಕೊಳ್ಳಲಿ ಎಂದು ಹಾರೈಸುತ್ತೇನೆ.

ಸಿರಿಗನ್ನಡಂ ಗೆಲ್ಗೆ!

**ಎಲ್.ಎಸ್. ಶೇಷಗಿರಿ ರಾವ್**

ಅಧ್ಯಕ್ಷ

ಕನ್ನಡದ ಮೇರುಕೃತಿಗಳ ಆಯ್ಕೆ ಸಮಿತಿ

ದಿನಾಂಕ ೧೬.೧೨.೨೦೧೦

# ಪ್ರಕಾಶಕರ ಮಾತು

ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಕನ್ನಡದ ಮೇರುಕೃತಿಗಳ ಮರುಮುದ್ರಣ ಯೋಜನೆಯಡಿ 'ವಿಶ್ವ ಕನ್ನಡ ಸಮ್ಮೇಳನ'ದ ಅಂಗವಾಗಿ ಸುಮಾರು ನೂರು ಪುಸ್ತಕಗಳನ್ನು ಪ್ರಕಟಿಸಲು ಉದ್ದೇಶಿಸಿರುತ್ತದೆ. ಈ ಯೋಜನೆಯಡಿ ಹಳಗನ್ನಡ, ನಡುಗನ್ನಡ ಮತ್ತು ಹೊಸಗನ್ನಡ ಈ ಮೂರೂ ಕಾಲಘಟ್ಟಗಳಲ್ಲಿ ರಚನೆಗೊಂಡ, ಕನ್ನಡದಲ್ಲಿ ಮಹತ್ವದ ಕೃತಿಗಳೆಂದು ಪರಿಗಣಿತವಾಗಿರುವ ಪುಸ್ತಕಗಳನ್ನು ಸರ್ಕಾರವು ನೇಮಿಸಿರುವ ಆಯ್ಕೆ ಸಮಿತಿಯು ಮರುಮುದ್ರಣಕ್ಕೆ ಆಯ್ಕೆ ಮಾಡಿರುತ್ತದೆ. ಈ ಸಾಹಿತ್ಯ ಮಾಲೆಯಲ್ಲಿ ಈಗಾಗಲೇ ಇಲಾಖೆಯು ಸಮಗ್ರ ಸಾಹಿತ್ಯ ಪ್ರಕಟಣೆಯಡಿ ಪ್ರಕಟಿಸಿರುವ ಲೇಖಕರ ಕೃತಿಗಳನ್ನು ಪರಿಗಣಿಸಿರುವುದಿಲ್ಲ.

ಕನ್ನಡದ ಮೇರುಕೃತಿಗಳ ಮರುಮುದ್ರಣಕ್ಕೆ ಪುಸ್ತಕಗಳನ್ನು ಆಯ್ಕೆ ಮಾಡಿದ ಆಯ್ಕೆ ಸಮಿತಿಯ ಅಧ್ಯಕ್ಷರಾದ ಪ್ರೊ. ಎಲ್.ಎಸ್. ಶೇಷಗಿರಿ ರಾವ್‌ರವರಿಗೆ ಹಾಗೂ ಸಮಿತಿಯ ಸದಸ್ಯರುಗಳಾದ ಡಾ. ಚಂದ್ರಶೇಖರ ಕಂಬಾರ, ಡಾ. ಹಂಪ ನಾಗರಾಜಯ್ಯ, ಡಾ. ಎಂ.ಎಂ.ಕಲಬುರ್ಗಿ, ಡಾ. ದೊಡ್ಡರಂಗೇಗೌಡ, ಡಾ. ಎಚ್.ಜೆ. ಲಕ್ಕಪ್ಪಗೌಡ, ಡಾ. ಅರವಿಂದ ಮಾಲಗತ್ತಿ, ಡಾ. ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ, ಡಾ. ಪಿ.ಎಸ್. ಶಂಕರ್, ಶ್ರೀಮತಿ ಸಾರಾ ಅಬೂಬಕರ್, ಡಾ. ಪ್ರಧಾನ್ ಗುರುದತ್ತ ಇವರುಗಳಿಗೆ ನನ್ನ ಕೃತಜ್ಞತೆಗಳು. ಈ ಯೋಜನೆಯಡಿ ಮರುಮುದ್ರಣಕ್ಕೆ ಆಯ್ಕೆಯಾಗಿರುವ ಪುಸ್ತಕಗಳ ಮುದ್ರಣಕ್ಕೆ ಅನುಮತಿ ನೀಡಿದ ಎಲ್ಲ ಲೇಖಕರಿಗೂ, ಹಕ್ಕುದಾರರಿಗೂ ಮತ್ತು ಕರಡಚ್ಚು ತಿದ್ದಿದವರಿಗೂ ನನ್ನ ವಂದನೆಗಳು.

ಸದರಿ ಪ್ರಕಟಣಾ ಯೋಜನೆಯ ಪುಸ್ತಕಗಳನ್ನು ಹೊರತರಲು ಸಹಕರಿಸಿದ ಶ್ರೀ ಎಚ್. ಶಂಕರಪ್ಪ, ಜಂಟಿ ನಿರ್ದೇಶಕರು, (ಸು.ಕ.), ಶ್ರೀಮತಿ ವೈ.ಎಸ್.ವಿಜಯಲಕ್ಷ್ಮಿ, ಸಹಾಯಕ ನಿರ್ದೇಶಕರು ಹಾಗೂ ಪ್ರಕಟಣಾ ಶಾಖೆಯ ಸಿಬ್ಬಂದಿಗೆ ನನ್ನ ನೆನಕೆಗಳು. ವಿಶ್ವ ಕನ್ನಡ ಸಮ್ಮೇಳನದ ಲಾಂಛನವನ್ನು ಸಿದ್ಧಪಡಿಸಿಕೊಟ್ಟ ಹಿರಿಯಕಲಾವಿದರಾದ ಶ್ರೀ ಸಿ. ಚಂದ್ರಶೇಖರ ಅವರಿಗೂ ನನ್ನ ನೆನಕೆಗಳು ಹಾಗೂ ಈ ಪುಸ್ತಕಗಳನ್ನು ಸುಂದರವಾಗಿ ಮುದ್ರಿಸಿಕೊಟ್ಟಿರುವ ಮಯೂರ ಪ್ರಿಂಟ್ ಆ್ಯಡ್ಸ್‌ನ ಮಾಲೀಕರಾದ

ಶ್ರೀ ಬಿ.ಎಲ್. ಶ್ರೀನಿವಾಸ್ ಮತ್ತು ಸಿಬ್ಬಂದಿ ವರ್ಗದವರಿಗೂ ನನ್ನ ನೆನಕೆಗಳು.

ಕನ್ನಡದ ಮೇರುಕೃತಿಗಳ ಮರುಮುದ್ರಣ ಯೋಜನೆಯಡಿ ಕನ್ನಡ ಓದುಗರಿಗೆ ಹಲವಾರು ವರ್ಷಗಳಿಂದ ದೊರಕದೇ ಇದ್ದ ಎಷ್ಟೋ ಪುಸ್ತಕಗಳು ಲಭ್ಯವಾಗುತ್ತಿರುವುದು ಹೆಮ್ಮೆಯ ಸಂಗತಿ. ಕನ್ನಡದ ಮೇರುಕೃತಿಗಳ ಮರುಮುದ್ರಣ ಯೋಜನೆಯಡಿ ಸಾಹಿತ್ಯಾಭಿಮಾನಿಗಳಿಗೆ ಅಕ್ಷರದಾಸೋಹ ನಡೆಸುವ ಆಶಯ ನಮ್ಮದು. ಈ ಕೃತಿಗಳನ್ನು ಕನ್ನಡಿಗರು ಸ್ವಾಗತಿಸುತ್ತಾರೆಂದು ನಂಬಿದ್ದೇನೆ.

ಮನು ಬಳಿಗಾರ್

ದಿನಾಂಕ ೧೧.೦೧.೨೦೧೧

ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ

# ಕನ್ನಡದ ಮೇರುಕೃತಿಗಳ ಆಯ್ಕೆ ಸಮಿತಿ

**ಅಧ್ಯಕ್ಷರು**
ಪ್ರೊ. ಎಲ್.ಎಸ್. ಶೇಷಗಿರಿರಾವ್

**ಸದಸ್ಯರು**
ಡಾ॥ ಚಂದ್ರಶೇಖರ ಕಂಬಾರ
ಡಾ॥ ಎಂ.ಎಂ. ಕಲಬುರ್ಗಿ
ಡಾ॥ ದೊಡ್ಡರಂಗೇಗೌಡ
ಡಾ॥ ಅರವಿಂದ ಮಾಲಗತ್ತಿ
ಡಾ॥ ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ
ಡಾ॥ ಪ್ರಧಾನ್ ಗುರುದತ್ತ
ಡಾ॥ ಹಂಪ ನಾಗರಾಜಯ್ಯ
ಡಾ॥ ಎಚ್.ಜೆ. ಲಕ್ಕಪ್ಪಗೌಡ
ಶ್ರೀಮತಿ ಸಾರಾ ಅಬೂಬಕರ್
ಡಾ॥ ಪಿ.ಎಸ್. ಶಂಕರ್

**ಸದಸ್ಯ ಕಾರ್ಯದರ್ಶಿ**
ಶ್ರೀ ಮನು ಬಳಿಗಾರ್, ಕ.ಆ.ಸೇ.
ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ

ಪಕ್ವಂ ಚೂತಫಲಂ ಭುಕ್ತ್ವಾ ಗರ್ವಂನಯಾತಿ ಕೋಕಿಲಾ|
ಪಿತ್ವಾಂ ಕರ್ದಮ ಪಾನೀಯಂ ಭೇಕೋ ರಟರಟಾಯತೇ||

ಪಕ್ವವಾದ ಮಾವು ತಿಂದರೂ ಕೋಗಿಲೆಯು ಗರ್ವಿಸದು
ಕೊಳಕು ನೀರು ಕುಡಿದರೂ ಕಪ್ಪೆಗಳು ಒಟಗುಟ್ಟುತ್ತವೆ.

ಮ್ಯಾಗಿನ ಮನಿ ಎಲ್ಲವ್ವ
ಎಂದೆ ಹೆಸರಾದ
ಸದಾಕಾಲ ಮೊಮ್ಮಕ್ಕಳನ್ನು
ಕೋಳಿಯಂತೆ ಹಿಂಡುಕಟ್ಟಿಕೊಂಡು ಬೆಳೆಸಿದ
"ಆಯಿ"ಯ ನೆನಪಿಗೆ.

# ಮೊದಲ ಮುದ್ರಣದ ಮಾತು

ಕೃತಜ್ಞತೆಗಳು

ಈ ಕೃತಿಯಲ್ಲಿಯ ಹೆಚ್ಚಿನ ಭಾಗಗಳು ಪತ್ರಿಕೆಯಲ್ಲಿ ಪ್ರಕಟವಾಗಿವೆ. ಅನ್ಯ ಭಾಷೆಗೆ ಅನುವಾದಗೊಂಡಿವೆ. ಕೆಲ ಭಾಗಗಳು ಪಠ್ಯ ಪುಸ್ತಕದಲ್ಲೂ ಸೇರಿವೆ; ಈಗ ಹೀಗೆ ಕೃತಿ ರೂಪದಲ್ಲಿ ಹೊರಬರುವ ಮುನ್ನವೇ ವಿಭಿನ್ನ ನೆಲೆಯಲ್ಲಿ ಪ್ರಕಟಗೊಳ್ಳಲು ಸಹಕರಿಸಿದ ಎಲ್ಲರನ್ನೂ ಈ ಸಂದರ್ಭದಲ್ಲಿ ಸ್ಮರಿಸುವೆ.

ಇದು ಕೃತಿ ರೂಪದಲ್ಲಿ ಬೇಗನೇ ಹೊರಬರಬೇಕೆಂದು ಆಸಕ್ತಿ ವಹಿಸಿ ಬರವಣಿಗೆಯ ಬಗ್ಗೆ ಆಗಾಗ ವಿಚಾರಿಸಿ ಚರ್ಚೆಗೆಳೆಯುವ ಸ್ನೇಹಿತ ಪಟ್ಟಾಭಿರಾಮ ಸೋಮಯಾಜಿ ಇವರಿಗೆ, ಮತ್ತು ಈ ಕೃತಿಯನ್ನು ಹೊರತರಲು ಸಂತೋಷದಿಂದ ಮುಂದಾಗಿರುವ ಅಕ್ಷರ ಪ್ರಕಾಶನಕ್ಕೆ ತುಂಬು ಮನದ ನೆನಹುಗಳು ಸಲ್ಲುತ್ತವೆ.

ಮುದ್ರಣದ ಬಳಗದವರಿಗೂ ನನ್ನ ಕೃತಜ್ಞತೆಗಳು.

### ದ್ವಿತೀಯ ಮುದ್ರಣಕ್ಕೆ ಕೆಲ ಮಾತು

'ಕನ್ನಡದ ಮೊದಲ ದಲಿತ ಆತ್ಮಕತೆ' ಎಂಬ ಪಟ್ಟವನ್ನು ಕಟ್ಟಿಸಿಕೊಂಡಿರುವ ಈ ಕೃತಿ, ಈಗ ಎರಡನೆಯ ಮುದ್ರಣದಲ್ಲಿ ಹೊರಬರುತ್ತಿರುವುದು ಸಂತಸದ ಸಂಗತಿ. ಈ ಕೃತಿಯ ಬೇಡಿಕೆಯನ್ನು ಗಮನಿಸಿದರೆ, ತುಂಬ ತಡವಾಗಿಯೇ ದ್ವಿತೀಯ ಮುದ್ರಣಕ್ಕೆ ಮುಂದಾದೆ ಎನಿಸುತ್ತದೆ. ಈಗ ಅಭಿರುಚಿ ಪ್ರಕಾಶನದ ವತಿಯಿಂದ ಹೊರ ಬರುತ್ತಿರುವುದಕ್ಕೆ ಆರಂಭದಲ್ಲಿಯೇ ಪ್ರಕಾಶಕರಾದ ಶ್ರೀಯುತ ಗಣೇಶ್ ಇವರಿಗೆ ಸ್ಮರಿಸಬೇಕು.

ಇತ್ತೀಚಿನ ದಿನಗಳಲ್ಲಿ 'ಆತ್ಮಕಥೆ ಸಾಹಿತ್ಯ ಕೃತಿಗಳಲ್ಲ' ಎಂಬ ಮಾತು ಅಬ್ಬರದಿ ಬರುತ್ತಿದೆ. ಮೊದಲನೆಯದಾಗಿ, ಆತ್ಮಕಥೆ ಸಾಹಿತ್ಯ ಕೃತಿ ಹೌದು ಅಥವಾ ಅಲ್ಲ ಎನ್ನುವುದಕ್ಕಿಂತ, ಈ ಪ್ರಶ್ನೆ ಈಗ ಯಾಕೆ ತಲೆ ಎತ್ತಿದೆ ಎನ್ನುವುದು ಮುಖ್ಯ. ಕನ್ನಡದಲ್ಲಿ ಬಂದಿರುವಂಥ ದಲಿತ ಆತ್ಮಕಥೆಗಳೇ ಎರಡು. ಈ ಎರಡು ಆತ್ಮಕಥೆಗಳಿಗೆ ಪ್ರತಿಕ್ರಿಯೆಯಾಗಿ ಈ ಪ್ರಶ್ನೆ ಎದ್ದಿದೆ ಎನ್ನುವುದರಲ್ಲಿ ಸಂದೇಹವಿಲ್ಲ. ಆರಂಭದಲ್ಲಿ ದಲಿತ ಕಾವ್ಯಕ್ಕೆ 'ಇದು ಕಾವ್ಯವೇ ಅಲ್ಲಾ' ಎಂದಂತೆ ಈಗ 'ಆತ್ಮಕಥೆ ಸಾಹಿತ್ಯವಲ್ಲ' ಎಂಬುದರ ಸರದಿ! ಇಂಥವರಿಗೆ ಕಾದಂಬರಿ ಕೂಡ ಒಂದು ಸಂಶೋಧನೆಯ ಕೃತಿಯಾಗಬಹುದು ಎಂಬ ವಿಚಾರ ಆಘಾತವನ್ನುಂಟು ಮಾಡಬಹುದು.

'ಸಂಶೋಧನೆಯೂ ಸೃಜನಾತ್ಮಕವಾದುದು' ಎಂಬ ವಾದ ಇಂಥವರಿಗೆ ಅರಗಿಸಿಕೊಳ್ಳಲಾಗದ ಮಾತು. ಇಂಥ ಸಂದರ್ಭದಲ್ಲಿ 'ಆತ್ಮಕಥೆ ಸೃಜನಾತ್ಮಕವಾದುದು' 'ಅದು ಸಾಹಿತ್ಯ ಕೃತಿ' ಎಂದು ವಾದಿಸುವುದಕ್ಕಾಗಿ ನಾನು ಇದನ್ನಿಲ್ಲಿ ಪ್ರಸ್ತಾಪಿಸುತ್ತಿಲ್ಲ. ಆದರೆ ನಾನಂದುಕೊಳ್ಳುವುದು. ಸಾಹಿತ್ಯದ ಕಾರ್ಯಗಳನ್ನು ನಿರ್ವಹಿಸುವ ಕೃತಿಗಳೆಲ್ಲ ಸಾಹಿತ್ಯ ಕೃತಿಗಳೇ ಆಗಿರುತ್ತವೆ ಎನ್ನುವುದನ್ನು ಮನಗಾಣಬೇಕಿದೆ. 'ಸಾಹಿತ್ಯ ಎಂದರೆ ಯಾವುದು ಎನ್ನುವುದನ್ನು ವ್ಯಕ್ತಿಗತ ಆಲೋಚನಾ ಕ್ರಮ ಮೊದಲು ವ್ಯಾಖ್ಯಾನ ಮಾಡುತ್ತದೆ. ಆನಂತರ ಸಾಹಿತ್ಯ ಕೃತಿ ಯಾವುದು? ಅಥವಾ ಇದು ಸಾಹಿತ್ಯ ಕೃತಿ ಹೌದು-ಅಲ್ಲ ಎನ್ನುವುದನ್ನು ನಿರ್ಧರಿಸುತ್ತದೆ. ಸಾಹಿತ್ಯಕ್ಕೆ ಸಂಬಂಧಿಸಿದಂತೆ ನಮ್ಮಲ್ಲಿ ಹಲವು ಆಲೋಚನ ಕ್ರಮಗಳಿವೆ. ನಾವಿದ್ದಂತೆ ನಮ್ಮ ಆಲೋಚನಾ ಕ್ರಮ. ನಮ್ಮ ಸಾಹಿತ್ಯ, ನಮ್ಮ ಸಾಹಿತ್ಯ ಕೃತಿ ಎಲ್ಲವೂ. ಹೀಗಾಗಿ ಇಲ್ಲಿ ಸಮಷ್ಟೀಯ ಪರಿಕಲ್ಪನೆಯನ್ನು ತಿದ್ದುವ ತೀಡುವ ಪ್ರಶ್ನೆಯೇ ಉದ್ಭವಿಸುವುದಿಲ್ಲ. ನಾವು ತಿದ್ದುವುದಕ್ಕೆ ಹೊರಟರೆ ಅಲ್ಲಿ ನಮ್ಮ ಬುದ್ಧಿ ಮತ್ತೆಯನ್ನು ಪ್ರದರ್ಶನಕ್ಕಿಟ್ಟಂತಾಗುತ್ತದೆ.

ಪ್ರಸ್ತುತ ಕೃತಿ ಹೊರತರುವ ಮುನ್ನ ಓದುಗರಲ್ಲಿ ಎಂಥ ಮನೋಭಾವ ರೂಪಗೊಳ್ಳಬೇಕು ಎನ್ನುವ ಉದ್ದೇಶವನ್ನಿಟ್ಟುಕೊಂಡು ಕೃತಿಗೆ ರೂಪವನ್ನು ಕೊಡಲಾಗಿತ್ತೋ ಪರಿಣಾಮದಲ್ಲಿ ಅದಕ್ಕೂ ಮಿಗಿಲಾಗಿ ಅದು ಪ್ರಭಾವ ಬೀರಿದೆ ಎನ್ನುವುದನ್ನು ಅದಕ್ಕೆ ಬಂದ ಪ್ರತಿಕ್ರಿಯೆಗಳೇ ದಾಖಲಿಸುತ್ತವೆ. (ಓದುಗರ ಅವಗಾಹನೆಗಾಗಿ ಕೆಲವು ಪತ್ರ-ವಿಮರ್ಶೆಗಳ ಆಯ್ದ ಭಾಗಗಳನ್ನು ಕೊನೆಗೆ ಕೊಡಲಾಗಿದೆ.) ಒಂದು ಕೃತಿಗೆ ಇದಕ್ಕಿಂತಲೂ ಬೃಹತ್ತಾದ ಮಹತ್ವಾಕಾಂಕ್ಷೆ ಇರಲಾರದ್ದೆಂದು ಭಾವಿಸಿದ್ದೇನೆ.

ಈ ಕೃತಿಯ ಕೆಲ ಭಾಗಗಳು ಬೆಂಗಾಳಿ, ಓರಿಯಾ, ಮರಾಠಿ ಭಾಷೆಗಳಿಗೆ ಅನುವಾದಗೊಂಡರೆ ತಮಿಳಿನಲ್ಲಿ ಈ ಕೃತಿ ಅನುವಾದಗೊಂಡು ಧಾರವಾಹಿಯಾಗಿ ಪ್ರಕಟಗೊಂಡದ್ದಲ್ಲದೆ ಕೃತಿಯಾಗಿ ಹೊರಬಂದಿದೆ. ಇಂಗ್ಲೀಷ್‌ನಲ್ಲಿಯೂ ಇದರ ಕೆಲ ಭಾಗಗಳು ಅನುವಾದಗೊಂಡು ಪ್ರಕಟವಾಗಿದ್ದು ಈಗ ಪೂರ್ಣ ಕೃತಿಯೇ ಇಂಗ್ಲೀಷ್‌ನಲ್ಲಿ ಬರುತ್ತಿರುವುದು ಕೃತಿಯ ಅಂತರ್ ಸತ್ತ್ವವನ್ನು ಹೇಳುತ್ತದೆ ಎಂದು ಭಾವಿಸಿದ್ದೇನೆ.

ಈ ಕೃತಿಯನ್ನು ಓದಿ ನಿಷ್ಠುರವಾದ ಅಭಿಪ್ರಾಯಗಳನ್ನು ಕೊಟ್ಟ ಹಾಗೂ ಅದರ ಸತ್ತ್ವದ ಕುರಿತು ವಿಮರ್ಶಿಸಿದ ಮತ್ತು ಈ ಕೃತಿಯ ಅಂಶಿಕ ಹಾಗೂ ಪೂರ್ಣ ಅನುವಾದದೊಂದಿಗೆ ಭಿನ್ನ ಭಾಷೆಗಳಲ್ಲಿ ಪ್ರಕಟಿಸಲು ಸಹಕರಿಸಿದ ಎಲ್ಲ ಸ್ನೇಹಿತರಿಗೂ, ಹಿತೈಷಿಗಳಿಗೂ ತುಂಬು ಮನದಿಂದ ಸ್ಮರಿಸುವೆ.

**- ಅರವಿಂದ ಮಾಲಗತ್ತಿ**

# ಪರಿವಿಡಿ

# ಓದುವ ಮುನ್ನ ಓದುಗರೊಂದಿಗೆ

ನಾನು ಮೊದಲೇ ಸ್ಪಷ್ಟ ಮಾಡ ಬಯಸುವ ವಿಷಯವೆಂದರೆ ನನ್ನ ಆತ್ಮ ಕಥೆಯ ಕೆಲವು ಪುಟಗಳನ್ನು ನಿಮ್ಮ ಮುಂದಿಟ್ಟು ನಾನೊಬ್ಬ ಮಹಾತ್ಮ ಎಂದು ಕರೆಯಿಸಿಕೊಳ್ಳುವ ಭ್ರಮೆ ನನಗಿಲ್ಲ. ನಾನೊಬ್ಬ ಸಾಮಾನ್ಯ ಮನುಷ್ಯ. ಹೀಗೆಂದ ಮಾತ್ರಕ್ಕೆ ಇಲ್ಲಿಯ ಅನುಭವಗಳೂ ಒಬ್ಬ ಸಾಮಾನ್ಯ ಮನುಷ್ಯನ ಅನುಭವಗಳೇ ಆಗಿವೆ ಎನ್ನುವ ಮಾತನ್ನು ಹೇಳಲಾರೆ. ಆದರೆ ಸಾಮಾನ್ಯ ದಲಿತನೊಬ್ಬನ ಅನುಭವಗಳಾಗಿವೆ ಎನ್ನುವುದನ್ನು ಹೇಳದಿರಲಾರೆ. ಒಬ್ಬ ದಲಿತನಿಗೆ ಇರಬಹುದಾದ ಎಲ್ಲ ಆಸೆ ಆಕಾಂಕ್ಷೆಗಳು, ಅರೆಕೊರೆಗಳು ನನ್ನಲ್ಲಿವೆ. ಹಾಗೆಯೇ ಒಬ್ಬ ಸಾಮಾನ್ಯ ಮನುಷ್ಯನಿಗೆ ಇರಬಹುದಾದವೂ ಕೂಡ ನನ್ನಲ್ಲಿವೆ. ಆದರೆ ಅಳೆದು ಹೇಳಲು ಯಾವ ಮಾನದಂಡವೂ ಸಾಲದು. ಹೀಗೇಂದು ಕೈ ಚೆಲ್ಲಿ ಕೂಡುವುದು ನನ್ನ ಉದ್ದೇಶವಲ್ಲ. ಆದ್ದರಿಂದ ನನ್ನ ಬದುಕನ್ನು ನಾನೇ ಓದಬಯಸುತ್ತೇನೆ ಮತ್ತು ಮೊದಲ ಓದುಗನೂ ನಾನೇ ಆಗಬಯಸುತ್ತೇನೆ.

ಬಿಳಿ ಬಟ್ಟೆಯನ್ನು ಹಾಕಿರುವ ಅರವಿಂದ ಮಾಲಗತ್ತಿಯನ್ನು ನೀವು ನೋಡಿರಬಹುದು. ಹೀಗೆ ನೋಡಿದವರಿಗೆ ಮತ್ತು ನೋಡುವವರಿಗೆ ಇಲ್ಲಿಯ ಬರವಣಿಗೆ ಆಶ್ಚರ್ಯ ಹುಟ್ಟಿಸಿದರೆ ತಪ್ಪೇನಿಲ್ಲ. ಕೆಲವರು ಹುಬ್ಬೇರಿಸಬಹುದು, ಹುಬ್ಬು, ಗಂಟಿಕ್ಕಬಹುದು. ಕೆಲವರು ಸಂದೇಹದ ಸುಳಿಯಲ್ಲೂ ಇರಬಹುದು. ಅದಕ್ಕೆ ನಿಮ್ಮೆದುರಿಗಿರುವ ಅರವಿಂದ ಮಾಲಗತ್ತಿಯೇ ಕಾರಣ ಎನ್ನುವುದನ್ನೂ ನಾನು ಬಲ್ಲೆ. ಆದರೆ ಆ ಬಾಲ್ಯದ "ಮಾಳಿ" (ನನ್ನ ಮನೆಯವರು ಮತ್ತು ನನ್ನ ಪಕ್ಕದ ಮನೆಯವರು ನನ್ನನ್ನು ರೇಗಿಸಲು ಬಳಸುವ ಹೆಸರು)ಯನ್ನು ನೀವು ನೋಡಿಲ್ಲ. ಮಾಳಿಯೊಂದಿಗೆ ಕಲಿತ ಕೆಲವು ಸ್ನೇಹಿತರೇ, ಈಗ ಅವನಿಂದ ದೂರ ನಿಂತು "ರೀ" ಎಂದು ಸಂಭೋದಿಸುತ್ತಾರೆ. ಅವನೆಷ್ಟೇ ಹತ್ತಿರ ಹೋಗಲು ಪ್ರಯತ್ನಿಸಿದರೂ, ಅವರು ಅವನನ್ನು ದೂರವಿಡುತ್ತಾರೆ. ಮೊದಲಿನ ಮಾಳಿಯನ್ನು ಮಾತನಾಡಿಸಿದಂತೆ ಅವರು ಮಾತನಾಡಿಸುವುದಿಲ್ಲ, ಛೇಡಿಸುವುದಿಲ್ಲ, ದೂರ ದೂರಕ್ಕೆ ಸರಿದು ನಿಲ್ಲುತ್ತಾರೆ. ಕಾರಣ, ಅವನೀಗ "ದೊಡ್ಡ ಮನುಷ್ಯ" ಎನ್ನುವ ಭ್ರಮೆ ಅವರಿಗೆ.

ನನ್ನೂರಿನಲ್ಲಿ, ನನ್ನ ಕೇರಿಯಲ್ಲಿ ಈಗ ನಾನೇ ಪರಕೀಯನಾಗಿ ಬಿಟ್ಟಿದ್ದೇನೆ. ಹಾಗೆಯೇ ನಗರದ ನಡುವೆ ಬದುಕುವ ಸ್ನೇಹಿತರ ಸಂಬಂಧ ಇದಕ್ಕಿಂತಲೂ ಭಿನ್ನವಾಗೇನಿಲ್ಲ,

ಆಗ ಗ್ರಾಮೀಣ ವ್ಯವಸ್ಥೆಯ ಸ್ನೇಹಿತರ ಮತ್ತೊಂದು ಮುಖ. ಈ ನಗರದ ಪ್ರಜ್ಞಾವಂತ ಸ್ನೇಹಿತರ ನಡುವೆಯೂ ಅನಾಮಿಕನಾಗಿ ಬದುಕುವ ಬಗೆ ಬರುತ್ತದೆಂದು ನಾನಂದುಕೊಂಡಿರಲಿಲ್ಲ. ಈ ಮಾತುಗಳನ್ನು ಇಲ್ಲಿ ಹೇಳಿಕೊಳ್ಳಲು ಕಾರಣವಿಷ್ಟೇ: ಈ ಕೃತಿಯ ಕೆಲವು ಬಿಡಿ ಭಾಗಗಳು ಪತ್ರಿಕೆಗಳಲ್ಲಿ ಪ್ರಕಟಗೊಂಡಾಗ, ಓದಿ ಆಶ್ಚರ್ಯ ವ್ಯಕ್ತಪಡಿಸಿದವರೂ ಇದ್ದಾರೆ. ಕೆಲವು ಸ್ನೇಹಿತರು ಇದು ಸಾಧ್ಯವೇ? ಎಂದು ತಮ್ಮ ತಮ್ಮಲ್ಲಿಯೇ ಚರ್ಚಿಸಿದ್ದಾರೆ! ಇಂಥ ವಿಚಾರಗಳು ಬಾಯಿಂದ ಬಾಯಿಗೆ ಹರಿದು ಬಂದು ನನ್ನ ಕಿವಿಗೆ ಬಿದ್ದಾಗ ಉತ್ತರವಾಗಿ ಮಂದಹಾಸದ ನಗೆಯನ್ನು ನಕ್ಕಿದ್ದೇನೆ, ಜೊತೆಗೆ ಆಶ್ಚರ್ಯವೂ ಪಟ್ಟಿದ್ದೇನೆ. ಏಕೆಂದರೆ, ಬಿಳಿ ಬಟ್ಟೆಯವನಾಗಿ ಹಳೆಯ ಸ್ನೇಹಿತರಲ್ಲಿ ಹೋದರೆ ಅವರು ಮೊದಲಿನಂತೆ ಯಥಾವತ್ತಾಗಿ ಸ್ವೀಕರಿಸುವುದಿಲ್ಲ. ಬಿಳಿ ಬಟ್ಟೆಯ ಸ್ನೇಹಿತರಲ್ಲಿ ನನ್ನ "ಮಾಳಿತನ"ದ ಬಗೆ ಪ್ರಸ್ತಾಪ ಮಾಡಿದರೆ ಅವರೇನೋ ಅಚ್ಚರಿಯ ಸಂಗತಿಯಂತೆ ನೋಡುತ್ತಾರೆ. ಈ ವೈಪರೀತ್ಯ ನನ್ನನ್ನೇ ಅಣಕಿಸುತ್ತದೆ. ಇಂಥ ವಿಚಾರಗಳ ಅಲೆ ಎದ್ದಾಗ ನೋವಿನಲ್ಲಿಯೂ ಫಕ್ಕನೆ ನಕ್ಕು ಬಿಡುತ್ತೇನೆ.

"ಈ ಅಸಲಿ ಅನುಭವಗಳನ್ನು ದಯಮಾಡಿ ನಂಬಿ" ಎಂದು ಹೇಳಿಕೊಂಡು, ಯಾರನ್ನೂ ನಾನು ನಂಬಿಸಲು ಹೊರಟಿಲ್ಲ. ಅದು ನನ್ನ ಉದ್ದೇಶವೂ ಅಲ್ಲ. "ದಲಿತರ ಬರವಣಿಗೆಯಲ್ಲಿ ದಲಿತ ಕಾಣೆಯಾಗಿದ್ದಾನೆ" ಎಂದು ಹೇಳಲಾಗುತ್ತಿದೆ. ಯಾವುದೇ ವಿಷಯಕ್ಕಾಗಲಿ, ಚಿಂತನದ ಅಥವಾ ಸಂಪೂರ್ಣ ಸಾಹಿತ್ಯಿಕ ಲೇಪನ ದೊರೆತಾಗ, ಅನುಭವ ತನ್ನ ಮೂಲದ ಸ್ವರೂಪವನ್ನು ಕಳೆದುಕೊಳ್ಳುತ್ತದೆ. ಆಶಯದಲ್ಲಿಯೂ ಬದಲಾವಣೆಗಳು ಬಂದು ಬಿಡುತ್ತವೆ. ಅನುಭವಗಳನ್ನು ನೇರವಾಗಿ ಹೇಳಿಕೊಳ್ಳುವುದರಿಂದ ದಲಿತ "ದಲಿತತನ"ವನ್ನು ಸರಳವಾಗಿ ಹಿಡಿದಿಡಬಹುದು ಎನ್ನುವ ಅರಿವು ಖಚಿತತೆಗೆ ತಂದಾಗ, ಈ ಮಾರ್ಗವನ್ನು ಹಿಡಿದಿದ್ದೇನೆ. ಈ ಶೈಲಿಯಲ್ಲಿ ನಾನು ಬರವಣಿಗೆ ಆರಂಭಿಸುತ್ತಿದ್ದಂತೆ ಎದುರಿಸಿದ ಪ್ರಶ್ನೆಗಳು ಹಲವು.

ಆತ್ಮ ಕಥೆ ಬರೆಯುವುದು ನನ್ನ ಚಿಕ್ಕ ವಯಸ್ಸಿಗೆ ಬೇಕೇ? ಎನ್ನುವ ಪ್ರಶ್ನೆ ನನ್ನನ್ನು ಕಾಡಿದೆ. ಏಕೆಂದರೆ, ಕನ್ನಡ ಸಾಹಿತ್ಯದಲ್ಲಿ ಆತ್ಮಕಥೆಯನ್ನು ಬರೆಯುವುದು ಸಾಮಾನ್ಯವಾಗಿ, ಕೂದಲು ನೆರೆತು ತಲೆ ಅಲುಗಾಡುವಾಗ. ಅನುಭವಗಳನ್ನು ಹೇಳಿಕೊಳ್ಳಬೇಕಾದರೆ ಕೂದಲು ನೆರೆಯುವವರೆಗೆ ಕಾಯಬೇಕೆ? ಕಾಯುವುದಾದರೆ ಯಾವ ಕಾರಣಕ್ಕಾಗಿ? ಇನ್ನಷ್ಟು ಅನುಭವಗಳು ಸಂಗ್ರಹವಾಗಲಿ ಎಂದೆ? ಅಥವಾ ಅಪಕ್ವ ವಯಸ್ಸು ಎಂದು ನಿರಾಕರಿಸುವುದೇ? ಇಲ್ಲವೇ ಎಲ್ಲವೂ ಏಕಕಾಲಕ್ಕೆ ಬರೆಯಬಹುದು ಎನ್ನುವ ವಿಚಾರವೇ? ಇಂಥ ಹಲವಾರು ಪ್ರಶ್ನೆಗಳು ನನ್ನೆದುರು ಕುಣಿದಿವೆ. ಅನುಭವಗಳನ್ನು ಹೇಳಿಕೊಳ್ಳಲು ಕೂದಲು ನೆರೆಯಬೇಕಾಗಿಲ್ಲ, ಮುಖದ ಮೇಲೆ ಎಷ್ಟು ಗೆರೆಗಳು ಮೂಡಿರುತ್ತವೆಯೋ ಅಷ್ಟು

ಅನುಭವಗಳು ಮಾಗಿರುತ್ತವೆ ಎನ್ನುವುದೇನೋ ನಿಜ. ಹೀಗೆಂದ ಮಾತ್ರಕ್ಕೆ ಜವ್ವನಿಗರ ಮುಖದ ಮೇಲೆ ಗೆರೆಗಳೇ ಇಲ್ಲ, ಅವರ ಅನುಭವಗಳು ಅನುಭವಗಳೇ ಅಲ್ಲ ಎನ್ನುವ ವಿಚಾರವೂ ಸಲ್ಲ. ನಾವು ಇಂಥ ಮನೋಭಾವನೆಯಿಂದ ಹೊರಬರುವ ಅವಶ್ಯಕತೆಯೂ ಇದೆ. ಹೀಗಾಗಿಯೇ ಅನುಭವಗಳನ್ನು ಹೇಳಿಕೊಳ್ಳಲು ಕೂದಲು ನೆರೆಯಬೇಕಾಗಿಲ್ಲ, ಬಾಯೊಳಗಿನ ಹಲ್ಲುಗಳು ಉದುರಬೇಕಾಗಿಲ್ಲ. ಬದುಕಿನ ವಾಸ್ತವದ ಸಂಗತಿಗಳನ್ನು ಯಥಾವತ್ತಾಗಿ ಕೊಡುವುದೆಂದರೆ, ಬದುಕಿರುವಾಗಲೇ ಜನತೆಯ ಬಾಯಿಗೆ ಎಲೆ-ಅಡಿಕೆಯಾಗುವುದು ಎಂದರ್ಥ. ಆದರೆ ಹಿರಿಯರು ತಮ್ಮ ಆತ್ಮಕಥೆಯನ್ನು ತಮ್ಮ ಆತ್ಮತೃಪ್ತಿಗಾಗಿ ಬರೆದುಕೊಂಡದ್ದೇ ಹೆಚ್ಚು. ಆದರೆ, ಇಲ್ಲಿಯ ಆಶಯ ಅದನ್ನು ಹೊರತುಪಡಿಸಿ ಬಂದಿದೆ ಎನ್ನುವುದನ್ನು ಓದಿದವರಿಗೆ ಬಿಡಿಸಿ ಹೇಳುವ ಅಗತ್ಯವಿಲ್ಲ ಎಂದುಕೊಂಡಿರುವೆ.

ನಮ್ಮದು ಅವಿಭಕ್ತ ಕುಟುಂಬ. ನಾಲ್ಕು ತಲೆಮಾರಿನವರು ಈಗಲೂ ಒಟ್ಟಿಗೆ ಬದುಕುತ್ತಿದ್ದೇವೆ! ಭೂಮಿ ಇದೆ. ಮನೆ ಇದೆ. ನಾನೇನು ತೀರ ನಿಕೃಷ್ಟ ಮಟ್ಟದ, ಹೇಳಿಕೊಳ್ಳಲಿಕ್ಕೂ ಆಗದ ರೀತಿಯಲ್ಲಿ ಜೀವನವನ್ನು ಕಳೆದಿದ್ದೇನೆ ಎಂದು ಹೇಳಲಾರೆ. "ಹೊಟ್ಟೆ ಬಟ್ಟೆ ಕಟ್ಟಿದರ ಏನರ ಗಳಸಾಕ ಆಕೈತಿ ಇಲ್ಲಾಂದ್ರ ತಲಿಮ್ಯಾಲಿ ಚಾಪಿ ಹಾಕ್ಕೊಂಡು ಹೋಗುದ" ಎನ್ನುವ ನನ್ನಜ್ಜಿಯ ತಾತ್ತ್ವಿಕ ಧೋರಣೆಯಂತೆ ಮನೆಯವರು ಹೊಲ-ಮನೆ ಮಾಡಿದ್ದಾರೆ. ನಮ್ಮ ಅವಿಭಕ್ತ ಕುಟುಂಬದ ಈ ಆಸ್ತಿಯನ್ನು ಒಡೆದು ಹಂಚಿದರೆ ಒಬ್ಬೊಬ್ಬರಿಗೆ ಅಂಗೈ ಊರುವಷ್ಟು ನೆಲ ಸಿಕ್ಕುವುದಿಲ್ಲ! "ನಿನಗೆ ಇಂತಹದೆಲ್ಲ ಹೇಳಿಕೊಳ್ಳಲು ಮನಸ್ಸಾದರೂ ಹೇಗೆ ಬರುತ್ತೆ?" ಎಂದು ಪ್ರಶ್ನಿಸಿದವರೂ ಇದ್ದಾರೆ. ಅಷ್ಟೇ ಏಕೆ ಸ್ವತಃ ನಮ್ಮ ತಂದೆ (ಚಿಕ್ಕಪ್ಪ), ನಾನು ಬರೆದ "ಕಾರ್ಯ" ಕಾದಂಬರಿ ವಸ್ತು ವಿಸ್ತಾರ ತಿಳಿದ ನಂತರ "ನೀನು ನಮ್ಮ ಹೆಂಗ್ಸರು ಕುಡಿತಾರ, ನಮ್ಮಲ್ಲಿ ಹಂಗ ಮಾಡ್ತಾರ, ಹೀಂಗ ಮಾಡ್ತಾರಂತ ಯಾಕ ಬರೀಬೇಕು? ಹಂಗ ಬರ್ಯೋದರಿಂದ ನಮ್ಮ ಮಾನ ಮರ್ಯಾದಿ ನಾವ ಕಳಕೊಂಡ್ಹಂಗ ಆಗಂಗಿಲ್ಲೇನು? ನಾವು ಎಂಥ ದೊಡ್ಡ ಮನಸೇರ ಜೋಡಿ ಕುಂದ್ರತೀವಿ, ನಿಂದ್ರತೀವಿ, ನಮ್ಮ ಕೀರ್ತಿ ಎಂಥಾದ್ದು? ಅನ್ನೋದು ಬರೀಬೇಕು. ಎಲ್ಲಾ ಬಿಟ್ಟು ಕೆಲ್ಸಕ್ಕ ಬಾರ್ದ ಬರೀತಿ" ಎಂದು ಪ್ರಶ್ನಿಸಿ "ಕ್ಲಾಸ್" ತೆಗೆದುಕೊಂಡದ್ದು ಇದೆ. ಆ ಸಂದರ್ಭದಲ್ಲಿ ನಾನು ಯಾವುದನ್ನೂ ಮಾತನಾಡಲಿಲ್ಲ, ಮೌನವಾಗಿದ್ದೆ. ಆದರೆ ಅವರು ಹೇಳುವ ಮಾತಿನಲ್ಲಿ ಅರ್ಥವಿತ್ತು. ಹೀಗಾಗಿ ಅದನ್ನು ತೆಗೆದು ಹಾಕುವ ಮನಸ್ಸೂ ಇರಲಿಲ್ಲ. ಅವರ ವಿಚಾರಗಳು ಸಾಂಪ್ರದಾಯಿಕ ಎನಿಸಿದರೂ ಸಾಂಪ್ರದಾಯಿಕವಾದ ಎಲ್ಲ ವಿಚಾರಗಳನ್ನೂ ದೂರಲಾಗುವುದಿಲ್ಲ. ನಾಲ್ಕು ತಲೆಮಾರಿನ ಅವಿಭಕ್ತ ಕುಟುಂಬ ಅಖಂಡವಾಗಿ ಈವರೆಗೆ ನಡೆದುಬರಬೇಕಾಗಿದ್ದರೆ ನಮ್ಮ ಚಿಕ್ಕಪ್ಪನೇ ಕಾರಣ. ಅವಿಭಕ್ತ

ಕುಟುಂಬಕ್ಕಾಗಿ ತನ್ನನ್ನು ತಾನು ಸವೆಸಿಕೊಂಡ ವ್ಯಕ್ತಿ. ಚೇಳು ಕಡಿಸಿಕೊಂಡು ನನ್ನ ತಂದೆ ಮರಣ ಹೊಂದಿದ ನಂತರ ನಮ್ಮನ್ನೆಲ್ಲ ಓದಿಸಿ ನೆಲೆ ನಿಲ್ಲುವಂತೆ ಮಾಡಿದವರು ಚಿಕ್ಕಪ್ಪನಾದರೂ, ನಾವು "ಅಪ್ಪಾ" ಎಂದೇ ಕರೆಯುತ್ತಿದ್ದೇವೆ. ನಾವು ಅಣ್ಣನ ಮಕ್ಕಳಾಗಿದ್ದಾಗಲೂ ಭಾವನಾತ್ಮಕ ಕರುಳ ಸಂಬಂಧದಿಂದ ನಾವು ತಂದೆಯನ್ನು ಕಳೆದುಕೊಂಡಿದ್ದೇವೆ ಎನ್ನುವುದನ್ನೇ ಮರೆಸಿದವರು. ಇಂಥ ವಲಯದಲ್ಲಿರುವ ಅವರು, ಅಂದು ಹೇಳಿದ ಮಾತುಗಳು ಕಾದಂಬರಿಯ ಕುರಿತಾದವು. ಈಗ ನೇರವಾಗಿ ಈ ಕೃತಿಯಲ್ಲಿ ಅನುಭವಗಳನ್ನೇ ತೋಡಿಕೊಳ್ಳುತ್ತಿದ್ದೇನೆ. ಆಡಿಕೊಳ್ಳುವವರ ಬಾಯಿಗೆ ಎಲೆ-ಅಡಿಕೆಯಾಗುತ್ತೇನೆ ಎನ್ನುವ ಅರಿವಿದ್ದು ಬರೆದಿರುವುದರಿಂದ, ಸ್ನೇಹಿತರು ಇಂಥ ವಿಷಯದ ಬಗ್ಗೆ ಕೇಳಿದಾಗೆಲ್ಲಾ "ಇಂಥದ್ದನ್ನು ಹೇಳಿಕೊಳ್ಳುವುದಕ್ಕೂ ಗಂಡೆದೆ ಬೇಕು" ಎಂದು ಉತ್ತರಿಸಿದ್ದೇನೆ.

"ಡಾ. ಮಾಲಗತ್ತಿಯವರಿಗೆ ಈಗ ಯಾರು ದಲಿತ ಅಂತ ಕರೀಬೇಕು? "ಎಂದು ನೆರೆದ ಸಭೆಯಲ್ಲಿಯೇ ಪ್ರಶ್ನೆ ಎತ್ತಿ ಚರ್ಚಿಸಿದವರೂ ಇದ್ದಾರೆ. ಅವರ ಚರ್ಚೆಯನ್ನು ಕೇಳಿ ನಾನು ಒಳಗೊಳಗೆ ಸಂತೋಷಪಟ್ಟಿದ್ದೇನೆ. ಏಕೆಂದರೆ, ಇಂಥಾ ಪ್ರಶ್ನೆಗಳು ಏಳಬೇಕು ಎನ್ನುವಂತೆ ನನ್ನ ಇರುವಿಕೆಯನ್ನು ನಾನು ರೂಢಿಸಿಕೊಂಡಿದ್ದೇನೆ. ಒಂದು ಕಾಲ ಘಟ್ಟದಲ್ಲಿ "ನಾನು ಮಾರ್ಕ್ಸ್‌ವಾದ ಓದಿದ್ದೇನೆ" ಎಂದು ತಿಳಿಸಲು ಕೊರಚಲು ಗಡ್ಡ, ಖಾದಿ ಜುಬ್ಬ ಹಾಕಿಕೊಂಡು ಸದಾ ಮಾರ್ಕ್ಸ್‌ವಾದದ ಪುಸ್ತಕಗಳನ್ನು ಬ್ಯಾಗಿನಲ್ಲಿ ಸೇರಿಸಿಕೊಂಡು ಬಗಲಿಗೆ ಚೀಲ ಜೋತಾಡಿಸುತ್ತ ತಿರುಗುತ್ತಿದ್ದೆ. ಇಂಥ ಸಂದರ್ಭದಲ್ಲಿ "ಸೊಂಟದ ಕೆಳಗಿನ ಜನಕ್ಕೆ ಏನು ಸೌಲತ್ತು ಕೊಟ್ರೂ ಏನಿದೆ? ತಮ್ಮದನ್ನ ಬಿಡೋದಿಲ್ಲ" ಎಂದು ಹಂಗಿಸಿದ ಮಾತುಗಳು ನನ್ನ ಕಿವಿಯಲ್ಲಿ ಕಾದ ಸೀಸವನ್ನು ಸುರುವಿದಂತೆ ಗಡಚಿಕ್ಕಿವೆ. ಎದೆಯಲ್ಲಿ ಮುಳ್ಳು ಮುರಿದಂತೆ ಉಳಿದುಬಿಟ್ಟಿವೆ. ಕಾಲೇಜಿನ ಚುನಾವಣೆಗೆ ಸ್ಪರ್ಧಿಸುವ ಸಂದರ್ಭದಲ್ಲಿ "ಕಾಲಾಗ ಹಾಕ್ಕೊಳ್ಳಾಕ ಸರಿಯಾಗಿ ಚಪ್ಪಲಿ ಇಲ್ಲ ಜನರಲ್ ಸೆಕ್ರೇಟ್ರಿ ಆಗ್ತಾನಂತೆ" ಎಂದು ಅವಮಾನಿಸಿದ ಪ್ರಸಂಗಗಳು ಸ್ವಾಭಿಮಾನವನ್ನು ಕೆದಕಿವೆ. ಇಂಥ ಹಲವಾರು ಸಂದರ್ಭಗಳು, ಈಗ ನಾನೇನಿದ್ದರೂ ಅವು ನನ್ನ ಇರುವಿಕೆಯನ್ನು ರೂಪಿಸಿವೆ. ಅವಕಾಶ ಸಿಕ್ಕರೆ "ಒಬ್ಬ ದಲಿತನೂ ಹಂಗಿಸುವವರ ಎದೆಯ ಮೇಲೆ ಮೆಟ್ಟಿದಂತೆ ಬದುಕಬಲ್ಲ" ಎನ್ನುವುದನ್ನು ಸ್ಪಷ್ಟಪಡಿಸುವುದಕ್ಕಾಗಿ ನನ್ನ ಹಲವಾರು ವೈಯಕ್ತಿಕ ಆಸೆಗಳನ್ನು ಹತ್ತಿಕ್ಕಿ ನನ್ನ ಇರುವಿಕೆಯನ್ನು ಕರಗತ ಮಾಡಿಕೊಂಡಿದ್ದೇನೆ. ವಿಚಾರ ಸಂಕಿರಣದಲ್ಲಿ ಇಂಥ ಪ್ರಶ್ನೆಗಳು ಎದ್ದಾಗ ನಾನು "ಗೆದ್ದ ನಗೆ"ಯನ್ನು ನಕ್ಕಿದ್ದೇನೆ.

ದೇವನೂರು ಮಹಾದೇವ, ಸಿದ್ಧಲಿಂಗಯ್ಯನವರ ಕಡೆಗೆ ಬೆರಳು ಮಾಡಿ ತೋರಿಸುತ್ತ-ನಿವ್ಯಾಕೆ ಅವರ ಹಾಗೆ ಇರಬಾರದು? ಎಂದು ತೊಡುವ ಬಟ್ಟೆಗಳನ್ನೂ

ಗಮನದಲ್ಲಿಟ್ಟುಕೊಂಡು ಪ್ರಶ್ನಿಸುತ್ತಾರೆ. ಈ ಪ್ರಶ್ನೆಗೂ ಮೇಲೆ ಹೇಳಿದ ಉತ್ತರವೇ ಅನ್ವಯವಾಗುತ್ತದೆ. ಒಬ್ಬೊಬ್ಬರ ಅನುಭವಗಳೂ ವಿಶಿಷ್ಟವಾದವು. ತಮ್ಮ ತಮ್ಮ ಅನುಭವಗಳ ಹಿನ್ನಲೆಯಲ್ಲಿ ಬದುಕಿನ ಮಾರ್ಗವನ್ನು ರೂಪಿಸಿಕೊಳ್ಳುತ್ತಾರೆ. ಹಾಗೆಯೇ ನನ್ನದೂ ಕೂಡ. ಅವರ ಪ್ರಶ್ನೆ ಕೇವಲ ಪ್ರಶ್ನೆಯಾಗಿ ಹೊರಬಂದಿದ್ದರೆ ದುಡುಕಿನ ಮಾತಿಗೆ ಅವಕಾಶವೇ ಇರುವುದಿಲ್ಲ. ಆದರೆ ವ್ಯಂಗ್ಯ ನಗೆ ಮತ್ತು ವಕ್ರ ನೋಟದೊಂದಿಗೆ ಪ್ರಶ್ನೆ ಎದುರಾದಾಗ ನಾನೂ ಅಷ್ಟೇ ನಿಷ್ಠುರವಾಗಿ ಅವರಿಗೆ ಮರುಪ್ರಶ್ನೆ ಹಾಕಿದ್ದೇನೆ. "ನಿವ್ಯಾಕ್ರಿ ಹಾಗಿಲ್ಲ? ಅವರ ಹಾಗೆ ನೀವೂ ಇರಬಹುದಲ್ಲ..... ಇವತ್ತು ಹೀಂಗ ಕೇಳ್ತೀರಿ, ನಾಳೆ ಗಾಂಧೀಜಿಯ್ಹಂಗ ನೀವು ಯಾಕ ಒಂದು ಲಂಗಟಾ ಹಾಕ್ಕೊಂಡು ಇರಬಾರದು? ಅಂಥ ಕೇಳವ್ರು ನೀವು. ನನಗ ಲಂಗಟಾ ಹಾಕ್ಕೊಂಡು 'ಮಹಾತ್ಮ' ಅನಿಸಿಕೊಳ್ಳೊ ಹಂಬಲ ಇಲ್ಲ. ನಾನೊಬ್ಬ ಸಾಮಾನ್ಯ ಮನುಷ್ಯ. ಒಬ್ಬ ಸಾಮಾನ್ಯ ಮನುಷ್ಯನಲ್ಲಿ ಇರಬೇಕಾದ ಗುಣಾಯಲ್ಲಾ ನನ್ನಲದಾವು ಅಂತ ತಿಳಕೊಳ್ಳಿ. ಆದರೆ ಉಪದೇಶ ಮಾಡೋದು ಬೇಡ" ಎಂದಾಗ, ಉಗುಳು ನುಂಗಿದವರು ಮತ್ತೆ ಕೆದಕುವ ಗೊಡವೆಗೆ ಬಂದಿಲ್ಲ. ಬೆನ್ನ ಹಿಂದೆ ಧಾರಾಳವಾಗಿ ಮಾತನಾಡಿಕೊಳ್ಳುತ್ತಿರಬಹುದು.

ಬಾಲ್ಯದಲ್ಲಿ ಒಡನಾಡಿಯಾಗಿ ಮಾಗದರ್ಶಕಿಯಾಗಿ, ರಕ್ಷಕಳಾಗಿ ಹೆಜ್ಜೆ ಹೆಜ್ಜೆಗೂ ನನ್ನೊಂದಿಗೆ, ನಮ್ಮ ಸಹೋದರರೊಂದಿಗೆ "ಆಯಿ" (ಅಜ್ಜಿ)ಯೇ ಬಂದಿದ್ದಾಳೆ. "ಅವಳಿಲ್ಲದಿದ್ದರೆ ನಮ್ಮ ಬಾಲ್ಯದ ದಿನಗಳಿಗೆ ಅಸ್ತಿತ್ವವೇ ಇಲ್ಲ" ಎನ್ನುವಂತೆ ಬಾಲ್ಯದ ಬದುಕಿನಲ್ಲಿ ಹಾಸು ಹೊಕ್ಕಿದ್ದಾಳೆ. ನಮಗೆ ಉಣಿಸುವ ತಿನಿಸುವ ಬೆಳೆಸುವ ಎಲ್ಲ ಹೊಣೆಗಾರಿಕೆಯಲ್ಲೂ, ತಂದೆ ತಾಯಿಗಳಿಗಿಂತ ಆಯಿಯ ಸ್ಥಾನ ಹಿರಿದು. ನಾನು ಉದ್ಯೋಗಕ್ಕೆ ಸೇರಿದಾಗಲೂ ಅವಳ ತೊಡೆಗಳನ್ನು ತಲೆದಿಂಬಾಗಿಸಿಕೊಂಡು ಮಲಗಿ, ಅವಳ ಅನುಭವಗಳನ್ನು ಕೆದಕಿ ಕೆದಕಿ ಕೇಳಿದ್ದೇನೆ. ಮುದುಕಿಯಾದರೂ ಹೆಣ್ತನದ ಸಹಜ ಸ್ವಭಾವ ಮರೆಯದೆ ಒಮ್ಮೆ ನಾಚುತ್ತ, ಮತ್ತೊಮ್ಮೆ ಸಿಡುಕಿನಿಂದ, ಇನ್ನೊಮ್ಮೆ ಅಷ್ಟೇ ಸಿಟ್ಟಿನಿಂದ ಅನುಭವದ ಸವಿಯೊಂದಿಗೆ ಬೆರೆತು ಹೇಳುತ್ತ, ನನ್ನನ್ನೂ ಮೂಗನಾಗಿಸಿ ಬಿಡುತ್ತಿದ್ದಳು. ಅವಳ ಬಹುಮುಖ ವ್ಯಕ್ತಿತ್ವ, ನನ್ನನ್ನು ಚಿಂದಿಯಾಗಿಸಿದೆ. ಅವಳನ್ನು ಕಂಡಾಗಲೆಲ್ಲ ಅವಳ ಮೇಲಿದ್ದ ಗೌರವ ಇಮ್ಮಡಿಯಾಗುತ್ತಿತ್ತು. "ಅವಳನ್ನು ನಾನು ಕಳೆದುಕೊಳ್ಳುತ್ತೇನೆ" ಎನ್ನುವ ದಿನಗಳು ಬರುವ ಮುನ್ನವೇ ಅವಳನ್ನು ಕಳೆದುಕೊಂಡಿದ್ದು ನನಗೆ ತುಂಬಲಾರದ ನಷ್ಟವೆನಿಸಿತು. ಏನೆಲ್ಲ ಕೇಳಬೇಕೆಂದಿದ್ದೆ, ಹೇಳಬೇಕೆಂದಿದ್ದೆ, ಅವೆಲ್ಲ ಒಗಟಾಗಿಯೇ, ನನ್ನ ಮತ್ತು ಅವಳ ಎದೆಯಲ್ಲಿಯೇ ಉಳಿದುಬಿಟ್ಟವು. ಅವಳ ಕಠೋರವಾದ ಅನುಭವಗಳ ಎದುರಿಗೆ ನಾನು ಹೇಳ ಹೆಸರಿಲ್ಲದೆ ತರಗೆಲೆಯಾಗಿ ಹಾರಿ ಹೋಗುವವ. "ನನಗೆ ನಾಕಿಪ್ಪತ್ತ ವರ್ಸ ಆಯ್ತು. ಇನ್ನಾ ಇಪ್ಪತ್ತ ವರ್ಸ ಬದಕ್ತೀನಿ" ಎಂದು ಹೇಳುತ್ತಿದ್ದಳು.

ಆದರೆ ಗಕ್ಕನೆ ಮಾಯವಾದಳು. ಅವಳ ಆತ್ಮ ಕತೆಯಲ್ಲಿ ನಾನೊಂದು ಪಾತ್ರವಾಗಿದ್ದುಕೊಂಡು ಬರೆಯಬೇಕೆಂದಿದ್ದೆ. ಆದರೆ ಈಗ ನನ್ನ ಅನುಭವದ ಕಥನದಲ್ಲಿ ಅವಳೊಂದು ಪಾತ್ರವಾಗಿ ಬಂದಿದ್ದಾಳೆ ಎಂದು ಹೇಳಲು ಸಂಕಟವೆನಿಸುತ್ತದೆ.

l

l

# ಹೆಣದ ಮೇಲಿನ ದುಡ್ಡು ಮತ್ತು ಮದುವೆಯ ಊಟ

ನಮ್ಮೂರಲ್ಲಿ ಶ್ರೀಮಂತಿಕೆಗೆ ಹೆಸರಾದ ಮನೆತನಗಳೆಂದರೆ ಒಂದು ಶೇಠಜಿ, ಎರಡು ಮರಾಠಿಗರದು, ಮೂರನೆಯದು ವೀರಶೈವರ ಮನೆತನ. ಶೇಠಜಿಯವರ ಮನೆಗಳ ಕೆಲಸದಲ್ಲೆಲ್ಲ ಸಾಮಾನ್ಯ ವೀರಶೈವರದೇ ಕಾರುಬಾರು. ಮರಾಠಿಗರ ಮನೆಗಳಲ್ಲಿ ಇಸ್ಲಾಮಿಯರದೇ ಕಾರುಬಾರು. ಈ ಮೂರು ಮನೆತನಗಳಲ್ಲಿ, ಅವರವರ ನಡುವೆಯೇ ಸ್ಪರ್ಧೆ ಇತ್ತೆಂದು ತೋರುತ್ತದೆ. ದೇಣಿಗೆ ಕೊಡುವಲ್ಲಿ, ಮನೆ ಕಟ್ಟಿಸುವಲ್ಲಿ ಇದು ನಮಗೆ ಎದ್ದು ಕಾಣುತ್ತಿತ್ತು. ಇದಕ್ಕಿಂತ ಅವರು ನಮಗೆ ಶ್ರೀಮಂತರಾಗಿ ಕಾಣುವುದು ಅವರ ಮನೆಯಲ್ಲಿ ಯಾರಾದರೂ ಸತ್ತರೆ ಇಲ್ಲವೇ ಯಾರಾದರೂ ಹುಟ್ಟಿದರೆ. ಬೇರೆ ಮನೆತನಗಳೂ ಇವರಂತೆ ಸಂಪ್ರದಾಯ ಉಳ್ಳವರಾಗಿದ್ದರೂ ಅವರ ಹಾಗೆ ಎದ್ದು ಕಾಣುತ್ತಿರಲಿಲ್ಲ. ಹೀಗಿದ್ದಾಗ ಊರಲ್ಲಿ ಯಾರು ಸತ್ತರೂ ನಮಗೆ ಸಂತೋಷವೇ ಆಗುತ್ತಿತ್ತು.

ಆವತ್ತು ವೀರಶೈವರ ಮನೆಯಲ್ಲಿ ಯಾರೋ ಸತ್ತಿದ್ದರು. ಹೆಣ ಬ್ಯಾಂಡ್ ಬಾಜಾದೊಂದಿಗೆ ಸ್ಮಶಾನಕ್ಕೆ ತೆಗೆದುಕೊಂಡು ಹೋಗುವಾಗ ಹೆಣದ ಮೇಲೆ ಹಣ ತೂರುವುದೊಂದು ಸಂಪ್ರದಾಯ. ಅದು ಅವರಿಗೆ ಪ್ರತಿಷ್ಠೆಯ ಹೆಗ್ಗುರುತು ಆಗಿರಬೇಕು. ಯಾರ ಮನೆಯಲ್ಲಿ ಸತ್ತಿದ್ದಾರೆ, ಯಾರು ಸಂಪ್ರದಾಯವನ್ನು ಪಾಲಿಸುತ್ತಾರೆ ಎನ್ನುವುದನ್ನು ನನ್ನಜ್ಜಿ ಯಾವ ಮೂಲಗಳಿಂದ ತಿಳಿದುಕೊಳ್ಳುತ್ತಿದ್ದಳೋ ನಾನರಿಯೆ. ಇಂಥ ಆದಾಯ ಬರುವ ಮೂಲಗಳನ್ನು ನಮಗೆ ಹುಡುಕಿಕೊಡುತ್ತಿದ್ದಳು. ಹೆಣ ತೆಗೆದುಕೊಂಡು ಹೋಗುವಾಗ ಅವರು ನಮ್ಮನ್ನು ಅಷ್ಟೇ ಜಾಗರೂಕತೆಯಿಂದ ಗಮನಿಸುತ್ತಿದ್ದರೆಂದು ತೋರುತ್ತದೆ. ನಾವು ಬಂದಿರುವುದನ್ನು ಖಚಿತ ಪಡಿಸಿಕೊಂಡೇ ಹೆಣವನ್ನು ಮೇಲಕ್ಕೆ ಎತ್ತುತ್ತಿದ್ದರು. ಹೆಣದ ಮೇಲೆ ಅವರು ತೂರಿರುವ ಹಣ ನೆಲಕ್ಕೆ ಬಿದ್ದ ಮೇಲೆ ಕಚ್ಚಾಡಿ ಎತ್ತಿಕೊಳ್ಳುವುದು ದಲಿತರ ಕೆಲಸ. ದಲಿತರು ಇರದೆ ಹೋದರೆ ಅವರು ತೂರುವ ಹಣಕ್ಕೆ ಬೆಲೆಯಾದರೂ ಏನು? ಅವರು ಹಣ ತೂರಬೇಕು, ತೂರಿದ ಹಣ ಉರುಳುತ್ತ (ಹಾಸುಗಲ್ಲಿನ ರಸ್ತೆ ಇದ್ದಾಗ), ಹೆಣ ಹೊತ್ತವರ ಕಾಲಲ್ಲಿ, ಹಿಂದೆ ಅಳುತ್ತ ಬರುವವರ ಕಾಲಲ್ಲಿ ಹೋಗಬೇಕು. ಅವರು ಅದನ್ನು ದಾಟಿ ಪಾಪ ಕಳೆದುಕೊಳ್ಳಬೇಕು. ಅವರೆಲ್ಲ ತುಳಿದು ಹೋದ ಮೇಲೆ ನಾವು ಅದನ್ನು ಎತ್ತಿಕೊಳ್ಳಬೇಕು.

ವಯಸ್ಸಾದ ನಮ್ಮ ಜನ ಅವರೆಲ್ಲ ದಾಟಿ ಹೋಗುವುದೇ ತಡ, ಸ್ಪರ್ಧೆಗಿಳಿದು

ಆ ಪುಡಿಗಾಸನ್ನು ಆಯ್ದುಕೊಳ್ಳುತ್ತಿದ್ದರು. ಚಿಕ್ಕವರಾದ ನಾವು ಅವರ ನಿಯಮಗಳನ್ನು ಮುರಿದು, ನಮ್ಮ ಹಿರಿಯರಿಗಿಂತ ಮುಂದೆ ಹೋಗಿ ತೂರಿದ ಹಣ ನೆಲಕ್ಕೆ ಬೀಳುವುದಕ್ಕಿಂತ ಮುಂಚಿತವಾಗಿಯೇ ಹಿಡಿಯಲು ಪ್ರಯತ್ನಿಸಿ ಸೋಲುತ್ತಿದ್ದೆವು. ಕಾಸು ನೆಲಕ್ಕೆ ಬಿದ್ದಾಗ ಅವರು ದಾಟುವ ಮುನ್ನವೇ ಅವರ ಕಾಲಲ್ಲಿ ಹೋಗಿ ಆ ನಾಣ್ಯವನ್ನು ಎತ್ತಿಕೊಳ್ಳುತ್ತಿದ್ದೆವು.

ಸತ್ತವರ ಮನೆಗೆ ಸಂಬಂಧಪಟ್ಟವರಲ್ಲವೇ ಅವರು? ಅವರ ಮುಖ ತುಂಬ ಗಂಭೀರವಾಗಿರುತ್ತಿತ್ತು. ಅವರಿಗೆ ನಮ್ಮನ್ನು ಬೆದರಿಸಲು ಸ್ವಾತಂತ್ರ್ಯವಿರಲಿಲ್ಲವೆಂದು ತೋರುತ್ತದೆ. ಹಾಗಾಗಿ ನಾವೇ ಎಷ್ಟೋ ಬಾರಿ ಅವರ ಗಂಟು ಮುಖಕ್ಕೆ ಹೆದರಿ ಹಿಂದಕ್ಕೆ ಸರಿಯುತ್ತಿದ್ದೆವು. ಸಿಗದ ನಾಣ್ಯಕ್ಕೆ ಕೈ ಮುಗುಚುತ್ತಿದ್ದೆವು. ಅವರ ಕೆಂಗಣ್ಣು ಕಂಡಾಗ ದೇಶಾವರಿ ನಗೆ ಬೀರಿ, ಲಜ್ಜೆ ತುಂಬಿ ನೀರಾಗುತ್ತಿದ್ದೆವು. ಅವರ ಕಾಲಡಿಯಲ್ಲಿ ಹೋಗಿ ಅವರಿಗೆ ತೊಡಕಾಲು ಬಿದ್ದಾಗ ಅವರು ನೆಲಕ್ಕೆ ಬೀಳುವ ಸಂದರ್ಭ. ಆಗ ಅವರ ಗಾಂಭೀರ್ಯ ಅಲ್ಲಿಂದ ಓಡಿ ಹೋಗುತ್ತಿತ್ತು. ಕೆಲ ಸಲ ನಮ್ಮನ್ನು ಕಾಯುವುದಕ್ಕಾಗಿಯೇ ಕೋಲು ಹಿಡಿದ ಆಳುಗಳನ್ನು ನಿಲ್ಲಿಸುತ್ತಿದ್ದರು. ನಮಗೆ ಅದು ಸ್ಪರ್ಧೆಯ ಕ್ರೀಡಾಂಗಣವಾಗಿತ್ತು. ಆ ನಾಣ್ಯಕ್ಕಾಗಿ ನಮ್ಮ ನಮ್ಮಲ್ಲಿಯೇ ಕಚ್ಚಾಟಗಳಾಗುತ್ತಿದ್ದವು. ಈ ಕಚ್ಚಾಟ ಮೂಗು, ಕಣ್ಣು, ಬಾಯಿ, ಹಲ್ಲುಗಳಲ್ಲಿಯೇ ಸೀಮಿತವಾಗಿರುತ್ತಿತ್ತು. ಕೆಲವು ಬಾರಿ ಹೋರಿ ಕಾಲಿನಿಂದ ನೆಲ ಕೆದರಿದ ಹಾಗೆ ಹೆಣದ ಸವಾರಿಯೊಂದಿಗೆ ಮುಂದುವರೆಯುತ್ತ ಸಂಗ್ರಹವಾಗುತ್ತ ಹೋಗುತ್ತಿತ್ತು. ಸವಾರಿದಾರರೆಲ್ಲ ಮುಂದಕ್ಕೆ ಹೋದಾಗ ಹಿಂದೆ ಉಳಿದ ನಾವು ನಮ್ಮಲ್ಲಿಯೇ ಜಗಳ ಕುಸ್ತಿಗೆ ನಿಲ್ಲುತ್ತಿದ್ದೇವು. ನಮ್ಮ ಹಿಂದಿನಿಂದ ಹಣ ಆಯ್ದುಕೊಂಡು ಬರುವ ನಮ್ಮ ಹಿರಿಯರು ನಮ್ಮನ್ನು ದೂರೀಕರಿಸುತ್ತಿದ್ದರು. ಆಯ್ದ ಹಣದಲ್ಲಿ ಕೆಲವಷ್ಟು ಕದ್ದು ಚೊಣ್ಣದ ಕಳ್ಳ ಜೇಬಿನಲ್ಲಿ ಎಂದರೆ ಮಡಿಸಿ ಹೊಲಿದ ಚೊಣ್ಣದ ನಡಪಟ್ಟಿ ಅಥವಾ ಕೆಳಗಿನ ಭಾಗದಲ್ಲಿ ಮಡಿಸಿ ಹೊಲಿದ ಅರಿವೆಗೆ ನಾಣ್ಯ ಹೋಗುವಷ್ಟೇ ಚಿಕ್ಕದೊಂದು ರಂಧ್ರ ಮಾಡಿ ಅದರಲ್ಲಿ ತುರುಕಿಬಿಡುತ್ತಿದ್ದೆವು ಮತ್ತು ಸಿಕ್ಕಿದ್ದು ಇಷ್ಟೇ ಎಂದು ಸುಳ್ಳು ಹೇಳಿ ಅಜ್ಜಿಯ ಎದುರು ಖಾಲಿ ಕೈ ಅಲ್ಲಾಡಿಸುತ್ತಿದ್ದೆವು. ಕದ್ದ ಹಣದಿಂದ ಸಂತೆಯಲ್ಲಿ ಬಾಯಿ ಚಪಲವನ್ನು ತೀರಿಸಿಕೊಳ್ಳುತ್ತಿದ್ದೆವು.

ಹೆಣದ ಮೇಲೆ ಅವರು ಹಾರಿಸುವ ಪುಡಿಕಾಸೆಂದರೆ, ಐದು ಪೈಸೆಯ ನಾಣ್ಯವೇ ಕೊನೆಯದ್ದಾಗಿರುತ್ತಿತ್ತು. ತೂತಿನ ದುಡ್ಡು, ಒಂದು ಪೈಸೆ, ಎರಡು ಪೈಸೆ ಹೆಚ್ಚಿರುತ್ತಿದ್ದವು. ಹೆಚ್ಚು ಶ್ರೀಮಂತರಿದ್ದರೆ ಹತ್ತು ಪೈಸೆಯ ನಾಣ್ಯ ಕೊನೆಯದಾಗಿರುತ್ತಿತ್ತು. ನಾಣ್ಯದ ಮೌಲ್ಯ ಹೆಚ್ಚಿದ ಹಾಗೆ ಅವುಗಳನ್ನು ಕಡಿಮೆ ಪ್ರಮಾಣದಲ್ಲಿ ಬಳಸುತ್ತಿದ್ದರು. ಹೆಚ್ಚಿನ ಮೌಲ್ಯದ ನಾಣ್ಯ ಸಿಕ್ಕಾಗ ನಮಗಾಗುವ ಸಂತೋಷಕ್ಕೆ ಎಣೆಯೇ ಇರುತ್ತಿರಲಿಲ್ಲ. ಅದಕ್ಕಾಗಿಯೇ ಹೆಚ್ಚಿನ ಜಗಳಗಳೂ ಕೂಡ.

ಸತ್ತವರ ತಿಥಿಯ ಊಟ ಬಿಟ್ಟು, ಜಾತ್ರೆ ಮದುವೆ ಈ ಸಂದರ್ಭಗಳಲ್ಲಿ ಸಿಗುವ ಊಟಕ್ಕೆ ಹಾಜರಿ ಹಾಕುವುದು ಮತ್ತೊಂದು ಕೆಲಸ. ಮದುವೆಯ ಊಟವೇ ಆಗಲಿ, ಜಾತ್ರೆಯ ಊಟವೇ ಆಗಲಿ, ಎರಡು ಮೂರು ವಾರಗಳ ಮುಂಚಿತವಾಗಿಯೇ ಜನಜನಿತವಾಗುತ್ತಿತ್ತು. ಅಂತಹದೇ ಒಂದು ಸಂದರ್ಭ, ಅದು ಶೇಠಜಿಯವರ ಏಕೈಕ ಪುತ್ರಿಯ ಮದುವೆ.

"ಇಡೀ ಊರಿಗೆ ಊಟ ಹಾಕ್ತಾರಂತೆ!"

"ಬೂಂದೆ ಊಟ"

"ಮೈಸೂರು ಪಾಕ್, ಅನ್ನ ಸಾರು!"

ನುಚ್ಚು ರೊಟ್ಟಿ ನಮಗೆ (ನಮ್ಮ ಕೇರಿಯಲ್ಲಿ ನಮ್ಮ ಮನೆಯೇ ದೊಡ್ಡದು. ಸ್ವಲ್ಪ ಘನತೆ ಗೌರವಕ್ಕಾಗಿ ಹಾತೊರೆಯುವವರೆಂದರೆ ನಮ್ಮ ಮನೆಯವರೇ ಆಗಿದ್ದರು) ಅನ್ನ ಸಾರು ಎಂದರೂ ಅದು ನಮಗೆ ಆಗ ಹಬ್ಬದ ಊಟವೇ ಆಗಿತ್ತು. ನಮ್ಮ ಮನೆಯಲ್ಲಿ ಅದು ದೀಪಾವಳಿಗೋ, ನಾಗರಪಂಚಮಿಗೋ ವರ್ಷಕ್ಕೆ ಒಂದೆರಡು ಬಾರಿ ಮಾತ್ರ ಸಿಗುತ್ತಿತ್ತು.

ಶೇಠಜಿಯವರ ಮಗಳ ಮದುವೆಗೆ ಊರಿನ ಸುತ್ತಮುತ್ತಲಿನ ದಲಿತರೂ ಬಂದಿದ್ದರು. ಅಂದ್ರೆ ಊಟಕ್ಕೆ. ಹೀಗಾಗಿ ದಲಿತರ ಸಂಖ್ಯೆ ಅಂದು ಹೆಚ್ಚೇ ಹಾಗಿ ಬಿಟ್ಟಿತ್ತು. ಶೇಠಜಿಯವರ ಅಡ್ಡೆ (ವಠಾರ) ತುಂಬಾ ದೊಡ್ಡದು. ಅದಕ್ಕೆ ಎರಡು ಗೇಟು. ಒಂದು ಹಿಂದಿದ್ದರೆ ಮತ್ತೊಂದು ಮುಂದಿತ್ತು. ಮುಂದಿನ ಗೇಟಿನಲ್ಲಿ ನಮಗೆ ಪ್ರವೇಶವಿರಲಿಲ್ಲ. ನನ್ನಜ್ಜಿ ಸ್ವಲ್ಪ ಬಾಯಿಬಡಕಿ. ಶಕ್ತಿವಾನಳು ಕೂಡ. ಮೊಮ್ಮಕ್ಕಳನ್ನೆಲ್ಲ ಕೋಳಿಯಂತೆ ಕರೆಯುತ್ತ, ಎಳೆದೆಳೆದು ರೆಕ್ಕೆಯೊಳಗಿಟ್ಟುಕೊಂಡಂತೆ ನಮ್ಮನ್ನು ಪಕ್ಕದಲ್ಲಿಯೇ ಇಟ್ಟುಕೊಳ್ಳುತ್ತಿದ್ದಳು.

ಶೇಠಜಿಯವರ ದರ್ಶನವೆಂದರೆ ನಮಗೆ ದೇವರ ದರ್ಶನವಿದ್ದಂತೆ. ಅಲ್ಲಿ ವೀರಶೈವರದೇ ದರ್ಬಾರು ಎಂದು ಹೇಳಿದೆನ್ನಲ್ಲವೇ? ಅವರ ಮನೆಯಲ್ಲಿ ದುಡಿಯುವ ಇವರು ಕೈಯಲ್ಲಿ ಕೋಲು ಹಿಡಿದು ನಿಂತಿರುತ್ತಿದ್ದರು. ನಾಯಿ ಹಂದಿಗಳಿಗೆ ಹೊಡೆಯಲು ಬಳಸುವುದೂ ಅದೇ ಕೋಲು, ನಮಗೆ ಹೊಡೆಯಲು ಬಳಸುವುದೂ ಅದೇ ಕೋಲು. ಊರ ಜನರೆಲ್ಲರ ಊಟ ಮುಗಿದ ಮೇಲೆ ಕೊನೆಯಲ್ಲಿ ದಲಿತರನ್ನು ಬಿಡಲಾಗುತ್ತಿತ್ತು. ಎಷ್ಟು ದಲಿತರು ಅಲ್ಲಿ ಸೇರಿದ್ದರೆಂದರೆ ಅಜ್ಜಿ ಹೇಳುತ್ತಿದ್ದಳು:

"ಇವತ್ತು ಕಂಡಾಪಟಿ ಮಂದಿ

ಏನಿಲ್ಲಂದ್ರ, ಮೂರ ಪಂಕ್ತೆರ ಅಕ್ಕದ......."

ಎನ್ನುತ್ತಿದ್ದಳು. ನಮಗಿಂತಲೂ ಕೆಳದರ್ಜೆಯವರೆಂದು ಭಾವಿಸಲಾಗುವ ಇನ್ನೊಂದು ತಂಡವೂ ಅಲ್ಲಿತ್ತು. ಅವರು ಈ ಮೂರು ಪಂಕ್ತಿಗೆ ಸಂಬಂಧಪಟ್ಟವರಲ್ಲ. ಹೀಗಾಗಿ ಅವರಿಗೆ ನಮಗಿಂತಲೂ ಕೊನೆಗೆ ಊಟ. ಅವರಲ್ಲಿ ಅಡ್ವಿ, ಚೊಂಚರು,

ಲೋಲ್ಯಾರು, ಕುಂಚಿಕೊರವರು ಇರುತ್ತಿದ್ದರು. ಇವರನ್ನು ಕಂಡು ನಾವು ಹೇಸುತ್ತಿದ್ದೆವು. ಇವರು ಬೇಡಿ ತಿನ್ನುವುದನ್ನೇ ವೃತ್ತಿಯನ್ನಾಗಿ ಮಾಡಿಕೊಂಡವರು.

ಈ ಬಗೆಯ ಊಟದ ವ್ಯವಸ್ಥೆಯಲ್ಲಿ ಕೆಲವೊಂದು ನಿಯಮಗಳನ್ನು ಪಾಲಿಸಲಾಗುತ್ತಿತ್ತು. ಈ ನಿಯಮಗಳನ್ನು ಗೇಟು ಕಾಯುವ ದಂಡನಾಯಕ ನಮಗೆ ಹೇಳಿ ಒಳಗೆ ಬಿಡುತ್ತಿದ್ದ.

* ತಟ್ಟೆಗೆ ಹೆಚ್ಚಿಗೆ ಹಾಕಿಸಿಕೊಳ್ಳಬಾರದು
* ನಿಮಗೆ ತಿನ್ನಲು ಎಷ್ಟು ಸಾಧ್ಯವೋ ಅಷ್ಟನ್ನೇ ನೀಡಿಸಿಕೊಳ್ಳಬೇಕು.
* ಮನೆಗೆ ಕಟ್ಟಿಕೊಂಡು ಹೋಗಬಾರದು.
* ಊಟ ಮುಗಿಸಿ ಹೋಗುವಾಗ ಪಾತ್ರೆಯಲ್ಲಿಟ್ಟ ಬಣ್ಣದಲ್ಲಿ ಕೈ ಅದ್ದಿ ಹೋಗಬೇಕು.

ಈ ನಿಯಮಗಳು ಊರ ಜನಗಳಿಗೆ ಅನ್ವಯಿಸದು. ಅವರಿಗೆ ಬಾಳೆಲೆಯಲ್ಲಿ ಬಡಿಸಿ ಊಟ ಮಾಡಿಸುತ್ತಿದ್ದರು. ಒಮ್ಮೆ ಊಟ ಮಾಡಿ ಹೋದ ದಲಿತರು ಮತ್ತೊಮ್ಮೆ ಬಾರದಿರಲಿ ಎನ್ನುವ ವಿಚಾರದ ತಂತ್ರಕ್ಕೆ ಬಣ್ಣದಲ್ಲಿ ಕೈ ಅದ್ದಿಸಿ ಕಳುಹಿಸುತ್ತಿದ್ದರು. ಚುನಾವಣೆಯ ಸಂದರ್ಭದಲ್ಲಿ ಓಟು ಹಾಕಿದ ವ್ಯಕ್ತಿಯ ಬೆರಳಿಗೆ ಗುರುತು ಬೊಟ್ಟು ಹಾಕಿದಂತೆ.

ಇಂಥ ನಿಯಮಗಳನ್ನು ಮುರಿಯುವುದರಲ್ಲಿ ದಲಿತರು ನಿಸ್ಸೀಮರು. ಬಣ್ಣದಲ್ಲಿ ಕೈ ಅದ್ದುವ ಸಂದರ್ಭ ಬಂದಾಗ ಅದರಿಂದ ತಪ್ಪಿಸಿಕೊಳ್ಳಲು ಅಜ್ಜಿ ಬೇರೆ ಬೇರೆ ತಂತ್ರಗಳನ್ನು ಹುಡುಕಿದ್ದಳು. ಎಂದೋ ಒಮ್ಮೆ ಎಣ್ಣೆ ಕಾಣುವ ತಲೆ ಅಂದು ಅವಶ್ಯವಾಗಿ ಎಣ್ಣೆ ಕಾಣುತ್ತಿತ್ತು. ಊಟ ಮುಗಿದಾದ ಮೇಲೆ ಬಣ್ಣದಲ್ಲಿ ಕೈ ಅದ್ದು ಸಮಯ ಬಂದಾಗ ಕೈ, ಎಣ್ಣೆ ಹತ್ತಿದ ತಲೆಗೆ ತಿಕ್ಕಿ ಬಣ್ಣದ ಪಾತ್ರೆಯಲ್ಲಿ ಅದ್ದುವಂತೆ ಅಜ್ಜಿ ಮೊದಲೇ ಹೇಳಿರುತ್ತಿದ್ದಳು. ಮೊದಲು ಹಾಗೆಯೇ ತಪ್ಪಿಸಿಕೊಂಡು ಹೊರಬರಲು ಪ್ರಯತ್ನಿಸುವುದು, ಯಾರಾದರೂ ಹಿಡಿದರೆ ಆ ತಂತ್ರವನ್ನು ಬಳಸುತ್ತಿದ್ದೆವು. ಹೊರಗೆ ಬಂದಾಕ್ಷಣ ಕೈ ಚೊಣ್ಣಕ್ಕೆ ಒರೆಸಿಕೊಂಡಾಗ ಬಣ್ಣ ಹೊರಟು ಹೋಗುತ್ತಿತ್ತು. ಅನಂತರ ಕೊನೆಯ ಪಂಕ್ತಿಯ ಊಟಕ್ಕೆ ಹಾಜರಾಗುತ್ತಿದ್ದೆವು. ಕೆಲ ಬಾರಿ ಸಿಕ್ಕಿ ಬಿದ್ದಾಗ ಕತ್ತು ಹಿಡಿದು ಹೊರಕ್ಕೆ ದಬ್ಬುತ್ತಿದ್ದರು. ಆಗ ದೇಶಾವರಿ ನಗೆ ಬೀರುತ್ತ, ಕೆಲಬಾರಿ ಅಳುತ್ತ ಹೊರಗೆ ಬರುತ್ತಿದ್ದೆವು.

ಸರತಿಯಲ್ಲಿ ಊಟಕ್ಕೆ ಕುಳಿತಾಗ ನೀಡುವವನಿಗೆ ಅಜ್ಜಿ:

"ಅಯ್ಯ....ಪ್ಪ
ನನ್ನ ಮೊಮ್ಮಕ್ಕಳು ಸಣ್ಣು ಅದಾವು
ಸವುಕಾಸ ತಿಂತಾವು ಇನ್ನ ಸ್ವಲ್ಪ ಹಾಕ್ಯಪ್ಪ......"

ಎಂದು ಹೇಳಿ ಹಾಕಿಸಿಕೊಳ್ಳುತ್ತಿದ್ದಳು. ಊಟ ಮುಗಿಸಿ ಗೇಟು ದಾಟುತ್ತಿರಬೇಕಾದರೆ ಅನ್ನ ಕದ್ದು ವಯ್ಯುವ ಕಳ್ಳರನ್ನು ಹಿಡಿಯಲು ನಿಂತ ದಂಡನಾಯಕ ಬಂದ. ಬಂದವನೇ ನಮ್ಮನ್ನೆಲ್ಲ ತಡೆದ. ಅಜ್ಜಿಯ ಹೊಟ್ಟೆಯ ಭಾಗದಲ್ಲಿ ಸೀರೆ ಉಬ್ಬಿತ್ತು. ಅದನ್ನು ನೋಡಿದ ಆತ:

"ಏ ಮುದುಕಿ, ಏನದು ಕಟಗೊಂಡ ಹೊಂಟಿ ಏನ?" ಎಂದ

"ಐಯ್ಯ ಇಲ್ಲ ಬಿಡಪ್ಪ....." ಎಂದು ಅಜ್ಜಿ ನಗುತ್ತಲೇ ಹೇಳಿದಳು.

ನಮ್ಮನ್ನೆಲ್ಲ ಮುಂದಕ್ಕೆ ಹೋಗಲು ಹೇಳಿದಳು. ಅವನು ಸೀರೆ ಮುಟ್ಟಲು ಬಂದಾಗ ಸ್ವಲ್ಪ ಧ್ವನಿ ಏರಿಸಿ-

"ಏ ನಿಂದೇನು?

ಏನಿಲ್ಲಂತ ಹೇಳತೀನಿ ಅಲ್ಲೇನು?

ಬಾಳಿ ಗಂಟ ಹಾಕಿ ಸೀರಿ ಉಟ್ಟೇನಿ ಹಂಗ ಕಾಣ್ತದ........" ಎಂದಳು.

"ತಗಿ ನೋಡೋನ"

ಎಂದು ಆತ ಅಜ್ಜಿಯ ಸೀರೆಯ ನೆರಿಗೆಗೆ ಕೈ ಹಾಕುವ ಮುನ್ನವೇ ಸರಗು ಸರಿಸಿ ತೋರಿಸಿದಳು. ಅಷ್ಟರಲ್ಲಿಯೇ ಊಟ ಮುಗಿಸಿದವರು ಗೇಟಿನ ಬಳಿ ಸೇರತೊಡಗಿದರು. ಆಗ ಅಜ್ಜಿ ಬಾಳೆಗಂಟಿನಿಂದ ಒಂದು ಸಣ್ಣ ಗಂಟನ್ನು ತಗೆದೊಗೆದಳೇ -

"ಲಟ್ಟು ಏನು ತಾನಃ ಸೌಕಾರಾಗ್ಯಾನ

ಊಟಾ ಹಾಕದವ್ರು ದೌಳವರು ಎಲ್ಲೈದಾರೋ, ಏನೋ

ಇವನದೇಷ್ಟು ನೋಡು....."

ಎಂದು ಬೈಯುತ್ತ ಬಂದಳು. ಗೇಟು ದಾಟಿ ಹೊರಗೆ ಬಂದಾಗ ಅಜ್ಜಿಯ ಮುಖ ನಗು ಮುಖವಾಗಿತ್ತು. 'ನಾನು ಗೆದ್ದೆ' ಎನ್ನುವ ಗೆಲುವಿತ್ತು ಅವಳ ಮುಖದಲ್ಲಿ. ಅಜ್ಜಿ ತಾನಷ್ಟೇ ತೆಗೆದಿಟ್ಟುಕೊಳ್ಳದೆ, ನಮ್ಮ ತಲೆಯ ಮೇಲಿರುವ ಟೋಪಿಯ ಅಡಿಯಲ್ಲೂ ಅಡಗಿಸಿಟ್ಟಿದ್ದಳು. ಅದನ್ನೆಲ್ಲ ಒಟ್ಟುಗೂಡಿಸುತ್ತ:

"ಹುಡುಕಾಕ ಬರ್‍ತಾನ ಐನೋರಾ

ತಿನ್ನನ್ನು ಚಳ್ಳ ಹಣ್ಣು" - ಎಂದು ಒಟಗುಡುತ್ತಿದ್ದಳು.

ನುಣುಪಾಗಿ ಬೋಳಿಸಿಕೊಳ್ಳುವ ನಮ್ಮ ತಲೆ, ಎಣ್ಣೆ ಮತ್ತು ಟೋಪಿ ಎಂದೂ ಮರೆಯುತ್ತಿರಲಿಲ್ಲ.....

1

1

# ನಾಳಿನ ಕಸದ ಪಾಳಿ : ಮಾಲಕತ್ತಿ

ನಮಸ್ಕರಿಸಿದಂತೆ ನಿಮ್ಮ ಹಿಂಗೈಗಳನ್ನು ಪರಸ್ಪರ ಒಂದಕ್ಕೊಂದು ಮುಟ್ಟಿಸಿ, ಆಮೇಲೆ ಒಂದರಿನ್ನೊಂದರ ಮಧ್ಯೆ ಬೆರಳುಗಳನ್ನು ಸೇರಿಸಿ. ಆಯಿತೆ? ಈಗ ನಿಮ್ಮ ಬಲಗೈ ಬೆರಳುಗಳು ಎಡಗೈ ಅಂಗೈಯಲ್ಲಿ. ಎಡಗೈ ಬೆರಳುಗಳು ಬಲಗೈ ಅಂಗೈಯಲ್ಲಿ ಬಂದಿವೆ ತಾನೇ? ಸರಿ. ಈಗ ಭೂಮಿಗೂ ನಿಮ್ಮ ಕಾಲುಗಳಿಗೂ ಸಾಕಷ್ಟು ಅಂತರವಿರುವಂತೆ ಎತ್ತರದ ಗೋಡೆಯ ಗೂಟಕ್ಕೆ ತೂಗು ಹಾಕಿಸಿಕೊಳ್ಳಿ. ಹಾಕಿಸಿಕೊಂಡಿರಾ? ಊ ಹು, ಹಾಗಲ್ಲ, ನಿಮ್ಮ ಬಿಡಿಸದ ಕೈಗಳ ಬೆರಳಿನ ಮಧ್ಯ ಗೂಟ ಬರಬೇಕು. ಹುಂ ಹಾಗೆ. ಸರಿ. ಹೀಗೆ ತೂಗಿದರೆ ಎಷ್ಟು ಕಾಲ ನೀವು ಕಣ್ಣುಗಳಲ್ಲಿ ನೀರು ತಾರದೆ ತೂಗಬಹುದು?

ಪ್ರಾಥಮಿಕ ಶಾಲೆ ಓದುವಾಗ ನನಗೆ ಸಿಕ್ಕ ಶಿಕ್ಷೆ ಇದು. ಅಲ್ಲಲ್ಲ..... ನನ್ನಂತೆ ನನ್ನ ಕೇರಿಯ ಸ್ನೇಹಿತರೂ ಉಂಡಿದ್ದಾರೆ. ಹೀಗೆ ತೂಗು ಹಾಕಿದಾಗ ಕೈಗಳನ್ನು ಜಾರಿಸಿ ನೆಲಕ್ಕೆ ಬೀಳಲೂ ಬರುತ್ತಿರಲಿಲ್ಲ. ಅಳಬೇಕು, ಗೋಗರೆಯಬೇಕು. ಕಾಡಿ ಬೇಡಿದರೂ ಪ್ರಯೋಜನವಿರುತ್ತಿರಲಿಲ್ಲ. ನಾವು ಗೋಗರೆದಷ್ಟು ನಮ್ಮ ಗುರೂತ್ತಮರಿಗೆ ಹಲ್ಲು ಕಡಿಯುವಷ್ಟು ಕೋಪ ಬರುತ್ತಿತ್ತು. ಕೈಯಲ್ಲಿ ನುಣುಪಿಲ್ಲದ ಉದ್ದನೆಯ ಬಡಿಗೆ. ಗೋಡೆಗೆ ಮುಖ ಮಾಡಿ ಗೂಟಕ್ಕೆ ತೂಗು ಹಾಕಿದ ಮೇಲೆ ಅವರಿಗೆ ಹೊಡೆಯಲು ಸಿಕ್ಕುವುದು ಉಬ್ಬಿನಿಂತ ನಮ್ಮ ಕುಂಡೆಯ ದಡಗಳು.

"ಸೂಳೆ ಮಗನ ಕುಂಡೆಂದರ ತಬಲಾ ಆಗ್ಯಾವ ನೋಡ

ಸಾಲಿ ಉಪ್ಪಿಟ್ಟು ತಿಂದು ತಿಂದು........" ಎನ್ನುವುದು, ಬಾರಿಸುವುದು

ಕೆಲವೊಮ್ಮೆ ಕುಂಡೆಯ ದಡಗಳನ್ನು ಬಿಜಾಪುರದ ಜೋಡು ಗುಮ್ಮಟಕ್ಕೆ ಹೋಲಿಸುತ್ತಿದ್ದರು. ಅವರು ನಮಗೆ ತಿನ್ನಲು ಹಾಕುವ ಉಪ್ಪಿಟ್ಟಿಗಿಂತ ಮನೆಗೊಯ್ಯುವುದೇ ಹೆಚ್ಚಿರುತ್ತಿತ್ತು.

ನಾವು ತೊಡುವ ಚೊಣ್ಣಗಳಿಗೆ ಗುಂಡಿಯೇ ಇರುತ್ತಿರಲಿಲ್ಲ. ಇದ್ದರೂ ಪ್ರಯೋಜನವಿರುತ್ತಿರಲಿಲ್ಲ. ಒಂದು ಚೊಣ್ಣದ ನಡದ ಸುತ್ತಳತೆಯಲ್ಲಿ, ನನ್ನಂಥ ನಾಯಿ ಸೊಂಟದವರು ಸಲೀಸಾಗಿ ನಾಲ್ಕು ಜನ ಇಳಿಯಬಹುದಿತ್ತು. ಅವು ಪೊಲೀಸರ ಅರ್ಧ ತೊಡೆ ಕಾಣುವ ಚೊಣ್ಣಗಳು. ಅದಕ್ಕಾಗಿ ಆ ಚೊಣ್ಣ ಉಡುದಾರದ (ನಡುದಾರದ) ಆಸರೆಯನ್ನು ಪಡೆಯುತ್ತಿತ್ತು. ಇಲ್ಲವೇ ಸಣಬಿನಿಂದಲೋ, ಸೀರೆಯ ದಡಿಯಿಂದಲೋ ಬಿಗಿಯಲಾಗಿರುತ್ತಿತ್ತು.

ಗುರೂತ್ತಮರು ಜೋಡು ಗುಮ್ಮಟದ ನಗಾರಿಯನ್ನು ಬಾರಿಸುತ್ತಿರಬೇಕಾದರೆ ವಿಲವಿಲನೆ ಒದ್ದಾಡುತ್ತಿದ್ದೆ. ಗೋಡೆಯ ಗೂಟಕ್ಕೆ ತೂಗು ಹಾಕಿದ್ದರಿಂದ ಮೂಗು, ತರಕು ಬರಕಾದ ಗೋಡೆಗೆ ಉಜ್ಜಿ ಉರಿಯುತ್ತಿತ್ತು. ಗೂಟಕ್ಕೆ ಜೋತು ಬಿದ್ದಿರುವುದರಿಂದ ಹೊಟ್ಟೆ ತೆಳ್ಳಗಾಗಿ ನಡಕ್ಕೆ ಕಟ್ಟಿದ ಆ ದಗಲಂ ಬೊಗಲಂ ಪೊಲೀಸ್ ಚೊಣ್ಣ ಹೊಡೆತ ಬಿದ್ದಂತೆ ನಿಧಾನವಾಗಿ ಕೆಳಗಿಳಿಯುತ್ತಿತ್ತು. ತರಗತಿಯಲ್ಲಿರುವ ವಿದ್ಯಾರ್ಥಿಗಳಿಗೆ ನೋಡಲು ಅದೊಂದು ಸಿನಿಮಾ ಆಗಿತ್ತು. ಅವರು ಬಿದ್ದು ಬಿದ್ದು ನಕ್ಕಂತೆ, ನನ್ನ ಅಳುವು ಹೆಚ್ಚಿದಂತೆ ಹೊಡೆತ ಇನ್ನೂ ಜೋರಾಗುತ್ತಿದ್ದವು. ಕುಂಡೆ ತುಂಬಾ ಬಾಸುಂಡೆ. ಕೊನೆಗೆ ಕರಿಕುಂಡೆ ನೋಡಲಾಗದೆ "ಥೂ" ಎಂದು ನೆಲಕ್ಕುಗಿದು ದೂರ ಸರಿದಾಗ ಅವರ ದೃಷ್ಟಿ ಹೊರಳುವುದು ನನ್ನ ಕೇರಿಯ ಸ್ನೇಹಿತರ ಮೇಲೆ. ಅದರ ಅರ್ಥ ಅವರಿಗೆ ತಕ್ಷಣವೇ ಆಗುತ್ತಿತ್ತು. ಓಡಿ ಬಂದವರೇ ಗೂಟದಿಂದ ನನ್ನನ್ನು ಕೆಳಗಿಳಿಸುತ್ತಿದ್ದರು. ಆಗ ನೆಲದ ಮೇಲೆ ಕುಳಿತುಕೊಳ್ಳುವುದೂ ದುಸ್ತರವಾಗುತ್ತಿತ್ತು. ಹೀಗೆ ನಾನೂ ನನ್ನ ಕೇರಿಯ ಸ್ನೇಹಿತರನ್ನು ಕೆಳಗಿಳಿಸಿದ ಸಂದರ್ಭಗಳಿವೆ.

ಇದಕ್ಕಿಂತ ಕಠಿಣ ಶಿಕ್ಷೆ ಮತ್ತೊಂದು:

ಅದು, ಕುರ್ಚಿಯ ಹಾಗೆ ಮೊಣಕಾಲು ಅರ್ಧ ಮಡಿಸಿ ನಿಂತುಕೊಳ್ಳಬೇಕು. ಹೀಗೆ ಬಹಳ ಹೊತ್ತು ನಿಲ್ಲಲಾಗದು. ಸ್ವಲ್ಪ ಸಮಯದ ನಂತರ ಮೊಣಕಾಲು ಮಡಿಸಿ ಕುಳಿತು ಬಿಡಬೇಕಾಗುತ್ತದೆ. ಹೀಗೆ ಕುಳಿತುಕೊಳ್ಳಬಾರದೆಂದು ಮೊಣಕಾಲ ಭಾಗದ ಹಿಂದಿನ ಸಂದಿಯಲ್ಲಿ ದಪ್ಪಾದ ಮತ್ತು ಸ್ವಲ್ಪು ಚೂಪಾದ ಕಟ್ಟಿಗೆಯ ತುಂಡನ್ನು ಇಡಲಾಗುತ್ತಿತ್ತು. ಅವರು ತಿಳಿಸಿದ ಪ್ರಮಾಣಕ್ಕಿಂತ ಹೆಚ್ಚಿಗೆ ಕಾಲು ಮಡಿಸಿದರೆ ಕಟ್ಟಿಗೆ ನಟ್ಟು ರಕ್ತವೇ ಬರುತ್ತಿತ್ತು.

ಪಟ್ಟಿಕೊಡುತ್ತ ಹೋದರೆ ಇನ್ನೂ ಇವೆ. ಈ ಪರಿಯ ಶಿಕ್ಷೆಯಿಂಡ ನಮ್ಮ ದೇಹ ಕೊರಡಾಗಿ ಹೋಗಿತ್ತು. ಶಿಕ್ಷೆಯ ಕಾಲ ಬಂದಾಗ ಅವರು ಹೇಳುವುದಕ್ಕಿಂತ ಮುಂಚಿತವಾಗಿಯೇ ನಾವು ಆಸನ ಹಾಕುತ್ತಿದ್ದೆವು. ಆಸನ ಹಾಕುವುದರಲ್ಲಿ ತಡವಾದರೂ ಹೊಡೆತ, ಬೇಗನೆ ಹಾಕಿದರೆ "ಎಷ್ಟು ಹುರುಪು ನೋಡು ಮಗನಿಗೆ' ಎನ್ನುವುದು, ಹೊಡೆತ. ಆದರೆ ಆ ಗುರೂತ್ತಮರ ಕೈ ಹೊಡೆತ ತಿನ್ನುವ ಭಾಗ್ಯ ನಮಗೆ ಬರಲೇ ಇಲ್ಲ.

ಇವೆಲ್ಲ ಶಿಕ್ಷೆಗಳು ಯಾವ ಕಾರಣಕ್ಕಾಗಿ ಗೊತ್ತೇ? ನಾವು ಮನೆಯಲ್ಲಿ, ಹೇಳಿದ ಪಾಠ ಓದಿಕೊಂಡು ಬರಲಿಲ್ಲ ಎಂದಲ್ಲ. ನಮ್ಮ ಕೊಳಕುತನಕ್ಕಾಗಿಯಲ್ಲ. ಶಾಲೆಯಲ್ಲಿ ಪ್ರಾರ್ಥನೆಯಾಗುವುದಕ್ಕಿಂತ ಮುಂಚೆಯೇ, ನಾವು ಬಂದು ತರಗತಿಯ ಕಸ ಗುಡಿಸಬೇಕು. ಬೇಗನೆ ಬಂದು ಕಸ ಗುಡಿಸದಿದ್ದರೆ ಈ ಪರಿಯ ಶಿಕ್ಷೆ.

ನಮ್ಮ ಕೇರಿಯವರು ಒಟ್ಟು ತರಗತಿಯಲ್ಲಿ ನಾಲ್ಕು ಜನ. ದೇವಪ್ಪ, ಮಲ್ಲಪ್ಪ,

ಬಸವಂತಪ್ಪ ಮತ್ತು ನಾನು. ನಾಳೆ ಕಸದ ಪಾಳಿ ಯಾರದಿದೆ ಎನ್ನುವುದನ್ನು ಕರಿಹಲಗೆಯ ಮೇಲೆ ಬರೆಯಲಾಗುತ್ತಿತ್ತು. ನಮ್ಮ ಹೆಸರುಗಳನ್ನು ಕರಿಹಲಗೆಯ ಮೇಲೆ ಯಥಾ ಸ್ಥಿತಿಯಲ್ಲಿ ಬರೆಯಲು ಅವರು ಹೇಸುತ್ತಿದ್ದರೆಂದು ತೋರುತ್ತದೆ. ಹೀಗಾಗಿ ದೇವ್ಯಾ, ಮಲ್ಯಾ, ಬಸ್ಯಾ ಎಂದು ಹೆಸರನ್ನು ಮುಗುಚಿ ಬರೆಯುತ್ತಿದ್ದರು. ಹೆಸರು ಬರೆಯುವ ಕೆಲಸ ಮೊದಲು ಗುರೂತ್ತಮರೇ ಮಾಡುತ್ತಿದ್ದರು. ಆನಂತರ ಆ ಕೆಲಸ ತರಗತಿಯ ಮಂತ್ರಿವರ್ಯರಿಗೆ ವರ್ಗಾವಣೆ ಮಾಡಲಾಯಿತು. ಕಸಗುಡಿಸುವ ಕೆಲಸ ದಲಿತರಾದ ನಮ್ಮ ನಾಲ್ಕು ಜನಗಳಿಗೆ ಮಾತ್ರ ಸೀಮಿತವಾಗಿತ್ತು.

ನಾಲ್ಕು ಐದು ಜನ ಒಟ್ಟಿಗೆ ಕುಳಿತುಕೊಳ್ಳಬಹುದಾದ ಉದ್ದನೆಯ ಕಟ್ಟಿಗೆಯ ಹಾಸುಮಣೆಗಳಿದ್ದವು. ಇವುಗಳನ್ನು ಎತ್ತಿ ಕಸಗುಡಿಸುವುದೆಂದರೆ ತೊಂದರೆಯಾಗುತ್ತಿತ್ತು. ಜೊತೆಗೆ ಸಿಟ್ಟೂ ಬರುತ್ತಿತ್ತು. ಯಾಕೆಂದರೆ, ಈ ಮಣೆಗಳು ಕುಳಿತುಕೊಳ್ಳಲು ನಮಗಿರಲಿಲ್ಲ. ನಾವು ನಾಲ್ಕು ಜನ ಕೊನೆಯಲ್ಲಿ ನೆಲದ ಮೇಲೆ ಕುಳಿತುಕೊಳ್ಳುತ್ತಿದ್ದೆವು. ಹೀಗಾಗಿ ಕುಳಿತುಕೊಳ್ಳಲು ನಮಗಿಲ್ಲದ ಆ ಮಣೆಗಳನ್ನು ಕಸ ಗುಡಿಸುವಾಗ ಎತ್ತಿ ನೆಲಕ್ಕೆ ಕುಕ್ಕುತ್ತಿದ್ದೆವು. ಯಾರಾದರೂ ನೋಡಿದರೆ, ಕೈ ಜಾರಿದವರಂತೆ ನಟಿಸುತ್ತಿದ್ದೆವು.

ಒಂದು ಬಾರಿ ನಾನು ಶಾಲೆಗೆ ಹೋಗಲಾರೆ ಎಂದು ಹಟ ಮಾಡಿದೆ. ಯಾಕೆ? ಎಂದು ಅಜ್ಜಿ ಪ್ರಶ್ನಿಸಿದಾಗ, ನಾ ಕೊಟ್ಟ ಕಾರಣ:

ಅವ್ರೆಲ್ಲ ಮಣಿಮ್ಯಾಗ ಕುಂದ್ರಸಾರ
ನಮಗ ನೆಲದ ಮ್ಯಾಲಿ ಕುಂದ್ರಸ್ತಾರ
ನಾ ವಲ್ಲ್ಯಾ ಹೋಗುದಿಲ್ಲ.... ಎಂದಿದ್ದೆ
ಅದಕ್ಕೆ ನನ್ನ ಅಜ್ಜಿ
ಕಟಗಿ ಮಣಿ ಏನ ಮಾಡುದು?
ಕುಂತ್ರ ಅದು ನಡತೈತಿ, ನಿನಗೆ ಸಣ್ಣ ಕೌದಿ ಹೊಲ್ದ ಕೊಡ್ತಿನಿ, ಎಂದಳು
ಅದು ನನಗೆ ಕೀಳಾಗಿ ಕಂಡದ್ದರಿಂದ ನಿರಾಕರಿಸಿದೆ.
ಹೊಸಾ ತಟ್ಟ ಕೊಡ್ತಿನಿ ತಗೊಂಡ ಹೋಗು, ಎಂದಳು
(ತಟ್ಟು = ಕತ್ತರಿಸಿದ ಸೆಣಬಿನ ಚೀಲ)

ಒಪ್ಪಿಕೊಂಡು, ಮರುದಿನ ತಟ್ಟು ತೆಗೆದುಕೊಂಡು ಠೀವಿಯಿಂದ ಹೋಗಿ ಹಾಸಿಕೊಂಡು ಗೆಲುವಿನ ಮುಖದಲ್ಲಿ ಕುಳಿತಿದ್ದೆ. ಹಾಸುಮಣೆಯ ಮೇಲೆ ಕುಳಿತುಕೊಳ್ಳುವ ಜನ ಇದನ್ನು ನೋಡಿ ಅವಕ್ಕಾಗುತ್ತಾರೆಂದು ಭಾವಿಸಿದ್ದೆ. ಆದರೆ ಆದದ್ದು ತದ್ವಿರುದ್ದ. ಅವರೆಲ್ಲ ನನ್ನನ್ನು ನೋಡಿ ಅಪಹಾಸ್ಯ ಮಾಡಿ ಚಪ್ಪಾಳೆ ತಟ್ಟಿ ನಗತೊಡಗಿದರು.

ಅವ್ನ ಚೊಣ್ಣ ಹೊಲ್ಸ ಆಗತದಂತಲೇ, ಭಾರಿ ಚೊಣ್ಣ!

ಎಂದು ಹೇಳುತ್ತಿದ್ದರು. ಆಗ ನನ್ನ "ದೊಗಲಂ ಬೊಗಲಂ ಕೊಳಕು ಚೊಣ್ಣ", ತಟ್ಟು ಎಲ್ಲದರ ಮೇಲೂ ಸಿಟ್ಟು ಬಂತು. ಏನೂ ಮಾಡಲಾಗದೆ ಕಣ್ಣಲ್ಲಿ ನೀರು ತರಿಸಿತಷ್ಟೆ.

ಕರಿಹಲಗೆಯ ಮೇಲೆ ನನ್ನ ಹೆಸರನ್ನು ಮುಗುಚಿ ಬರೆಯುತ್ತಿರಲಿಲ್ಲ. ಹೆಸರು ಅರವಿಂದ ಎಂದಿರುವುದರಿಂದ ಅದು ಹೇಗೆ ಮುಗುಚಿ ಹೇಳಿದರೂ ಅವರಿಗೆ ತೃಪ್ತಿಯಾಗಿ ಕಂಡಿರಲಿಕ್ಕಿಲ್ಲ. ಅದಕ್ಕಾಗಿ ಅವರು ನನ್ನ ಅಡ್ಡ ಹೆಸರನ್ನು ಬಳಸಿಕೊಳ್ಳುತ್ತಿದ್ದರು.

"ನಾಳಿನ ಕಸದ ಪಾಳಿ - ಮಾಲಕತ್ತಿ'

ಎಂದು ಬರೆಯುತ್ತಿದ್ದರು. ಕೆಲವೊಮ್ಮೆ "ಕತ್ತಿ" ಎಂದಷ್ಟೇ ಬರೆಯುವ ಮನಸ್ಸು ಮಾಡುತ್ತಿದ್ದರು.

ಹಾಗೆ ಬರೆದ ಹೆಸರನ್ನು ಒಮ್ಮೆ ತಿದ್ದುವ ಸಾಹಸವೂ ಮಾಡಿದ್ದೆ. ಆದರೆ ಅಂದಿನ ಅವತಾರವೇ ಬೇರೆಯಾಗಿತ್ತು. ನಮ್ಮೂರ ಪಕ್ಕದಲ್ಲಿಯೇ ಬಸರಕೊಡ ಜಾತ್ರೆ ಹೆಸರುವಾಸಿ. ನಮ್ಮ ಮನೆಯವರು ಅಲ್ಲಿಗೆ ಹೋಗುತ್ತಿದ್ದರು. ಅಂದು ನಾನು ಹೋಗಬೇಕಾಗಿತ್ತು. ಅದಕ್ಕಾಗಿ ಮಂತ್ರಿವರ್ಯರಿಗೆ ಹೇಳಿದ್ದೆ - "ನಾಳೆ ನಾನು ಜಾತ್ರೆಗಿ ಹೋಗ್ತೀನಿ, ಅದ್ಕ ಇವತ್ತೊಂದು ದಿನ ಸಾಲಿ ಬಿಡಣ ಕಸಾ ಹೊಡಿತೀನಿ" ಎಂದೆ.

ಮುಂಚಿತವಾಗಿ ಕಸಗುಡಿಸುವ ವ್ಯವಸ್ಥೆ ಹೊದರೂ ಅಂದು ಗುರುಗಳ ಅನುಮತಿ ಪಡೆದು ಮಂತ್ರಿವರ್ಯ ಅವಕಾಶ ಕೊಟ್ಟಿದ್ದ. ಶಾಲೆ ಬಿಟ್ಟದ್ದರಿಂದ ತರಗತಿಯಲ್ಲಿ ಯಾರೂ ಇರಲಿಲ್ಲ. ನಾನೊಬ್ಬನೇ ಇದ್ದೆ. ಆಗ ಕರಿಹಲಗೆಯ ಮೇಲೆ ಹೆಸರು ಕಂಡದ್ದು. ಎದೆ ಹೊಡೆದುಕೊಳ್ಳುತ್ತಿದ್ದರೂ, ಗುರುಗಳ ಕುರ್ಚಿಯನ್ನು ಸರಿಸಿ, ಅದರ ಮೇಲೆ ನಿಂತು "ಮಾಲಕತ್ತಿ" ಎಂದು ಬರೆದುದನ್ನು ಅಲ್ಲಿಯ "ಕ" ಕಾರ ತೆಗೆದು "ಗ"ಕಾರ ಬರೆಯಲು ಹವಣಿಸುತ್ತಿದ್ದೆ. ಎಲ್ಲಿದ್ದರೋ, ಗುರೂತ್ತಮರು ತರಗತಿಯ ಒಳಗೆ ಬಂದರು. ನೋಡಿದವರೇ ಗೂಟದ ಮೇಲಿರುವ ಕಟ್ಟಿಗೆಯನ್ನು ಹಿರಿದರು. ಅವರನ್ನು ನೋಡಿದಾಕ್ಷಣವೇ ನನ್ನ ಜಂಘಾಬಲವೇ ಅಡಗಿದಂತಾಗಿ ನಡುಕ ಪ್ರಾರಂಭವಾಯಿತು. ಕೆಳಗಿಳಿದು "ಕತ್ತಿ" ಎಂದು ಬರೆದಿದ್ದಾರೆ ಎಂದು ವಿವರಣೆಯನ್ನು ಕೊಡುವುದರಲ್ಲಿಯೇ ಥಳಿಸುವುದಕ್ಕೆ ಪ್ರಾರಂಭಿಸಿದರು.

"ಕತ್ತಿ ಅಂತ ಬರದ್ರ ಏನಾಯ್ತು? ಗತ್ತಿ ಅಂತ ಮಾಡಾಕ ಹೋಗಿದ್ಯಾ? ಮಗಾ ಬರ್‍ಯಾಕ ಬಂತು ಅಂತ ತಿದ್ದಾಕ ಹೋಗ್ಯಾನ ....... ಕತ್ತಿS ಕತ್ತಿನೇ....... ಕತ್ತೆಲ್ಲರ ಕುದರ್‍ಯಾಕ್ಕದೇನ? .......... ಕತ್ತಿಗೆಲ್ಲ ಯಾಕ ಬೇಕು ಹತ್ತಿಕಾಳ ನೀರ?............" ಎಂದು ಮನ ತುಂಬುವವರೆಗೆ ಹೊಡೆದರು. ಅನಂತರ ಅಳುತ್ತ ನನ್ನ ಅಂಗಿ ಕಳೆದು ಅವರ ಕುರ್ಚಿಯನ್ನು ಒರೆಸಿದ್ದು ಅಚ್ಚಳಿಯದ ನೆನಪು.

l

l

# ಬೆದೆಗೆ ಬಿದ್ದ ಎಮ್ಮೆ ಮತ್ತು ಓಡಿ ಬಂದ ಕೋಣ

ಕಾಗೆ ಗೂಬೆ ನಾಯಿ ಕತ್ತೆ ಕುರಿ ಕೋಣ ಇವೆಲ್ಲ ವಿಶ್ವಾಮಿತ್ರನ ಸೃಷ್ಟಿಯಾದರೆ, ಪಾರಿವಾಳ ಕುದುರೆ ಗೋವು ಇಂಥವೆಲ್ಲ ವಸಿಷ್ಠರ ಸೃಷ್ಟಿ ಎಂದು ಹೇಳುವುದಿದೆಯಲ್ಲವೇ? ಈ ಪುರಾಣ ಕಲ್ಪನೆಗಳು ಜನರಲ್ಲಿ ಎಷ್ಟೊಂದು ಬೇರು ಬಿಟ್ಟಿವೆ ಎಂದರೆ, ಬೇರು ಸಹಿತ ಕಿತ್ತು ಹಾಕಿದ್ದೇವೆ ಎಂದರೂ, ಕರಿಕಿಯಂತೆ ಮತ್ತೆ "ಪುದುಕ್ಕನೆ" ಎದ್ದು ನಿಲ್ಲುವಂಥ ಪ್ರವೃತ್ತಿಉಳ್ಳಂಥವು.

ಕೆಲವರು ಹೀಗೂ ಹೇಳುವುದಿದೆ:

ಪ್ರಾಣಿ ಪಕ್ಷಿ ಸಸ್ಯಗಳಲ್ಲಿ
ಎಷ್ಟೊಂದು ಜಾತಿಗಳಿಲ್ಲ ನೋಡಿ
ಮನುಷ್ಯರಲ್ಲಿ ಮಾತ್ರ ಜಾತಿ ಇಲ್ಲ ಎಂದರೆ ಹೇಗೆ?
ಸ್ವಲ್ಪ ಆಲೋಚನೆ ಮಾಡಿ
ದನ ನಾಯಿ ಕತ್ತೆ ಹುಲಿಗಳಲ್ಲಿ
ಬೆಕ್ಕು ಹಂದಿ ನರಿ ಇಲಿಗಳಲ್ಲಿ
ಜಿಂಕೆ ಮಂಗ ಮೀನುಗಳಲ್ಲಿ
ಎಷ್ಟೊಂದು ಜಾತಿಗಳಿವೆ ಅಂತೆಯೇ ಮನುಷ್ಯನಲ್ಲಿ -
ಬಿಳಿ ಜನರು, ಕರಿಜನರು, ಗಿರಿಜನರು, ಹರಿಜನರು, ಚೀನಿ, ಜಪಾನಿ, ತಿರುಕ
ಮಂಗೋಲಿ, ಆರ್ಯ, ದ್ರಾವಿಡ, ಬ್ರಾಹ್ಮಣ, ಶೂದ್ರ

[ಬ್ರಾಹ್ಮಣ ಬಂಡಾಯ]

ಹೌದು, ಸೂಕ್ಷ್ಮವಾಗಿ ವಿಚಾರ ಮಾಡಿ ನೋಡಿದರೆ ಪಕ್ಷಿ, ಮೀನುಗಳಲ್ಲಿಯೇ ಸಾಕಷ್ಟು ವಿಧಗಳಿವೆ. ಒಂದೇ ತರಹದ ಮೀನು, ಪಕ್ಷಿಗಳೆಲ್ಲ ಒಂದೇ ಕಡೆಗೆ ವಾಸಿಸುತ್ತವೆ ಎನ್ನುವುದರಲ್ಲಿ ಸಂದೇಹವಿಲ್ಲ. ಮೀನಿನಂತಹ ಒಂದು ಪ್ರಾಣಿಯಲ್ಲಿಯೇ ಹಲವಾರು ಜಾತಿಗಳಿದ್ದು, ಅವು ಜಾತಿಯನ್ನು ಆಯ್ದುಕೊಂಡು ಹೋದಂತೆ, ಮನುಷ್ಯನೂ ಕಾಯ್ದುಕೊಂಡು ಹೋಗಬೇಕು ಎನ್ನುವುದಾದರೆ, ಆತನಿಗೆ ಬುದ್ಧಿವಂತ ಪ್ರಾಣಿ ಎಂದು ಕರೆಯುವುದಾದರೂ ಏತಕ್ಕೆ? ಈ ರೀತಿ ಮನುಷ್ಯನಲ್ಲಿ ಮೇಲು ಕೀಳು ಎಂದು ಭೇದ ಮಾಡಿ ಬದುಕುವುದೇ ಬುದ್ಧಿವಂತಿಕೆಯೆ? ಇಪ್ಪತ್ತನೆಯ ಶತಮಾನದಲ್ಲಿಯೂ ಈ ರೀತಿ

ವಾದ ಹಾಕುವುದು, ಪುರಾಣದ ಚೌಕಟ್ಟಿನಲ್ಲಿಯೇ ಹೊಸತನವನ್ನು ಬಿತ್ತಿ ಬೆಳೆಯುತ್ತೇವೆ ಎನ್ನುವ ನೆಪದಲ್ಲಿ ಮತ್ತಷ್ಟು ವಿಷದ ಬೀಜವನ್ನು ಬಿತ್ತಿ ಕೊಳೆಯುವಂತೆ ಮಾಡುವುದೂ ಒಂದೇ ಎನಿಸುತ್ತದೆ.

ಮನುಷ್ಯ ಮತ್ತು ಪ್ರಾಣಿವರ್ಗಕ್ಕೆ ಎಷ್ಟೊಂದು ನಿಕಟವಾದ ಸಂಬಂಧವಿದೆ! ಈ ಸಂಬಂಧದ ಹಿನ್ನೆಲೆಯಲ್ಲಿ ನಂಬಿಕೆ, ಆಚರಣೆ ಸಂಪ್ರದಾಯ ಮತ್ತು ಪುರಾಣಗಳು ಎಷ್ಟೊಂದು ಪ್ರಭಾವ ಬೀರಿವೆ! ಇಂತಹದನ್ನು ಸ್ಮರಿಸಿಕೊಂಡಾಗ ಮೈ ಎಲ್ಲ "ಜುಂ" ಎಂದು, ಮೈ ಮೇಲಿನ ಕೂದಲುಗಳೆಲ್ಲ, ಸೆಟೆದು ನಿಲ್ಲಲು ಪ್ರಾರಂಭಿಸುತ್ತವೆ!

ನಾನು ಆವಾಗ, ಒಂಬತ್ತು ಹತ್ತು ವರ್ಷದ ಹುಡುಗನಿರಬೇಕು. ನಮ್ಮ ಕೇರಿಯಲ್ಲಿ, ಮೊದಮೊದಲು ನಮ್ಮ ಮನೆಯಲ್ಲಿ ಮಾತ್ರವೇ ಎಮ್ಮೆ ಇತ್ತು ಎಂದು ಅಜ್ಜಿ ಹೇಳುತ್ತಿದ್ದಳು. ಜೊತೆಗೆ -

"ಏಳ ಮಂದಿ ಅಣ್ಣಾ ತಮ್ಮರ ಮ್ಯಾಲಿ ನಾ ಹುಟ್ಟಿದ್ದು,
ನನಗೂ ಗಂಡ ಮಗಾ ಸಾಕದ್ಹಂಗ ಸಾಕಿದ್ರು
ನಮ್ಮ ಅಪ್ಪ - ಅವ್ವ,
ನಿಮ್ಮ ಮುತ್ಯಾ ಏನ ಎತ್ತತಿದ್ದ?
ಒಂದು ಕೊಡ ನೀರು ಊರ ಹೊರಗಿಂದ ತರ್ಬೇಕಾದ್ರ ತೇಕತಿದ್ದ.
ನಾನು ತೊಂಡಿ ಕೊಡ ತಲಿ ಮ್ಯಾಲಿ ಹೊತ್ತಗೊಂಡ
ದೀಡಿ ಕೊಡ ಬಗಲಾಗ ಹಿಡಕೊಂಡ ನೀರತರತ್ತಿದ್ಯಾ.
ಅದ್ನ ನೋಡಿದವ್ರು -
"ಏ ಎಲ್ಲವ್ವ, ಹಡದ್ರ ನಿನ್ನ್ಹಂಥ ಮಗಳಿಗಿ ಹಡಿಬೇಕು ನೋಡು ಅಂತಿದ್ರು"
ಎಂದು ಹೇಳಿಕೊಳ್ಳುವುದರ ಜೊತೆಗೆ -
" ನೀ ಹೀಂಗ ಇರ್ಬೇಕಾದ್ರೆ, ನನ್ನ ಮನ್ಯಾಗ
ಏನೆಲ್ಲಾ ತಿಂದುಂಡ ಬೆಳೆದವಳು ನಾನು.
ಅದರ ಸಲ್ಯಾಗ, ನಮ್ಮವ್ವ ನನ್ಹಿಂದ ಎಮ್ಮಿ ಹೊಡ್ದ ಕಳಸ್ಯಾಳ.
ಮಗಳು ತಿಂದುಂಡು ಸುಖದಾಗ ಇರಲೆಂತ.
ಆದರ ನಾ ಬಂದಾಗ, ಈ ಮನ್ಯಾಗ ಏನಿತ್ತು?
ಎಮ್ಮಿ ಕೊಳ್ಳಗಿನ ಗಂಟಿ ಜೋತ್ಯಾಡದ್ಹಂಗ
ಜೋತ್ಯಾಡತ್ತಿದ್ದು ಎಲ್ಲಾ."

ಮಾತು ಎತ್ತಿದರೆ ಸಾಕು, ಹೀಗೆ ನನ್ನ ಅಜ್ಜಿ ಹಳೆಯ ಚಿಂದಿಯ ಗಂಟನ್ನೇ ಬಿಚ್ಚುತ್ತಿದ್ದಳು. ಅಂತೆಯೇ ತಾನು ತಂದ ಬಳುವಳಿಯ ಎಮ್ಮೆಯ ಕಥೆಯನ್ನೂ ಹೇಳಿದ್ದಳು.

ಎಮ್ಮೆಗೆ ಏನಾಗಿತ್ತೋ ಏನೋ ಆವತ್ತು ಬೆಳಿಗ್ಗೆಯಿಂದ ಒಂದೇ ಸಮನೆ ನರಹರಿದುಕೊಳ್ಳುವಂತೆ ವದರುತ್ತಿತ್ತು. ನನ್ನ ತಾಯಿ ಹಾಗೆ ಹೊಡೆದುಕೊಂಡು ಹೋಗಿದ್ದಳು.

"ಅಲ್ಲೆಲ್ಲ ಓಡ್ಯಾಡಿ ಬಿಟ್ತು, ನನಗೂ ಒಡ್ಯಾಸ್ತು
ಅದರ ಹಿಂದ ಹಿಂದ ಓಡ್ಯಾಡಿ
ನನ್ನ ಕಾಲೆಲ್ಲ ಹ್ವಾದು........
ಇದರ ಬಾಯಾಗ ಮಣ್ಣ ಹಾಕಲಿ......."

ಎಂದು ಅಜ್ಜಿಗೆ ಕೇಳುವ ಹಾಗೆ ಗೊಣಗುತ್ತಿದ್ದಳು ನಮ್ಮವ್ವ. ಜೊತೆಗೆ ಇದು "ಬೆದೆಗೆ ಬಿದ್ದಿದೆ" (ಗರ್ಭಧಾರಣೆಗೆ ಬಂದಿದೆ) ಎಂದು ಗುರುತಿಸದೇ ಇರಲಿಲ್ಲ.

ಬೆದೆಗೆ ಬಿದ್ದ ಎಮ್ಮೆಯ ಮೇಲೆ ಹಾರಿಸಲು ನಮ್ಮೂರಲ್ಲಿ ಕೋಣವಿರಲಿಲ್ಲ. ನಮ್ಮೂರಿನ ಪಕ್ಕದ ಎರಡು ಹಳ್ಳಿಗಳಲ್ಲಿ, ಅಂದರೆ ಕೊಂಟೋಜಿ ಮತ್ತು ಬಸರಕೋಡ ಎಂಬ ಹಳ್ಳಿಗಳಲ್ಲಿ ಎರಡು ಕೋಣಗಳಿದ್ದವು. ಈ ಕೋಣಗಳನ್ನು ಊರ ಪ್ರಮುಖರೇ ಸಾಕಿದ್ದರು. ಬಯಲು ಸೀಮೆಯಲ್ಲಿ ಕೋಣ ಸಾಕುವುದು ಎಂದರೆ ವ್ಯರ್ಥ. ಹೊಲಗಳಲ್ಲಿ ಹೂಡಲೂ ಬಾರದು. ಏಕೆಂದರೆ, ಬಿಸಿಲು ಸಹಿಸುವ ಸಾಮರ್ಥ್ಯ ಕೋಣಗಳಿಗೆ ಇರುತ್ತಿರಲಿಲ್ಲ. ಹೀಗಾಗಿ ಸಾಮಾನ್ಯ ಜನ ಕೋಣ ಸಾಕುತ್ತಿರಲಿಲ್ಲ. ಊರ ಗೌಡರು, ದೇಸಾಯಿಯವರಿಗೆ ಕೋಣ ಸಾಕುವುದು ಎಂದರೆ ಪ್ರತಿಷ್ಠೆಯೇ ಆಗಿತ್ತು. (ಇದಕ್ಕೆ ಅನುಗುಣವಾಗಿ ಒಂದು ಗಾದೆ ಮಾತು ಇದೆ : ಗೌಡರ ಕ್ವಾಣ ತಾನು ಹಾರಲಿಲ್ಲಂತ ಮಂದಿಗೂ ಹಾರಿಸಿಗೊಡಲಿಲ್ಲಂತ!) ಇವರುಸಾಕಿದ ಕೋಣಗಳ ಕೆಲಸವೆಂದರೆ, ಬೆದೆಗೆ ಬಿದ್ದ ಎಮ್ಮೆಯ ಮೇಲೆ ಹಾರುವುದು. ಕಾಲು ಕೆದರಿ "ಬುಸ್ಸು"ಗುಟ್ಟುವುದು. ಆ ಊರ ಎಮ್ಮೆಗಳ ರಾಜನಷ್ಟೇ ಆಗಿರದೇ ಆತ ಸುತ್ತಲೂರಿನ ಎಮ್ಮೆವ್ವಗಳ ಅರಸನೂ ಆಗಿರುತ್ತಿದ್ದ.

ಸಾಮಾನ್ಯವಾಗಿ ಊರಲ್ಲಿ ಹುಟ್ಟುವ ಕೋಣಗಳನ್ನೆಲ್ಲ ದ್ಯಾಮವ್ವ, ದುರುಗವ್ವ, ಮರಗವ್ವನಂತಹ ದೇವತೆಗಳೇ ನುಂಗುತ್ತಿದ್ದವು. ಇಲ್ಲವೇ ಕಸಾಯಿಖಾನೆಯ ಬಾಗಿಲಲ್ಲಿ "ಚರಮ ಗೀತೆ"ಯನ್ನು ಹಾಡುತ್ತಿದ್ದವು. ಹೀಗಾಗಿ ಎಮ್ಮೆಯ ಗಂಡು ಸಂತತಿಗೆ ಉಳಿಗಾಲವೇ ಇರಲಿಲ್ಲ. ಆದ್ದರಿಂದ ಗೌಡರ, ದೇಸಾಯಿಯರ ಕೋಣಗಳಿಗೆ ಡಿಮ್ಯಾಂಡಪ್ಪೋ ಡಿಮ್ಯಾಂಡು!

ಬಸರಕೋಡಕ್ಕಿಂತ ಕೊಂಟೋಜಿ ನಮ್ಮೂರಿಗೆ ಹತ್ತಿರ. ಹೀಗಾಗಿ ಎಮ್ಮೆಯನ್ನು ಕೊಂಟೋಜಿಗೆ ಹೊಡೆದುಕೊಂಡು ಹೋಗುವುದು ಎಂದು ತೀರ್ಮಾನವಾಗಿತ್ತು. ಆದರೆ ಆಗಲೇ ಸಂಜೆಯಾಗಿತ್ತು. ಕೊಂಟೋಜಿ ತಲುಪುವುದರಲ್ಲಿಯೇ ರಾತ್ರಿಯಾಗುತ್ತದೆ, ರಾತ್ರಿ ಎಮ್ಮೆಯ ಮೇಲೆ ಕೋಣ ಬಿಡುವುದಿಲ್ಲ. ಆದ್ದರಿಂದ ಬೆಳಿಗ್ಗೆ ಹೋಗುವುದು ಎಂದು ತೀರ್ಮಾನವಾಯಿತು. ಈ ನಿರ್ಧಾರಗಳನ್ನೆಲ್ಲ ಆಸಕ್ತಿಯಿದ ಆಲಿಸುತ್ತಿದ್ದ ನಾನು, ಕೊಂಟೋಜಿಗೆ ಹೋಗುವ ಮನಸ್ಸು ಮಾಡಿದೆ. ಆದ್ದರಿಂದ ಅಜ್ಜಿ ಎಲ್ಲೆಲ್ಲಿ

ಹೋಗುತ್ತಾಳೆಯೋ, ಅಲ್ಲೆಲ್ಲ ಬೆನ್ನು ಬಿಡದೆ ತಿರುಗತೊಡಗಿದೆ.

ನನ್ನದೊಂದು ಬಗೆಯ ಚಿಂತೆಯಾದರೆ, ಅಜ್ಜಿಯದು ಇನ್ನೊಂದು ಬಗೆಯ ಚಿಂತೆ. ಎಂದರೆ ಎಮ್ಮೆ ರಾತ್ರಿ ಮಲಗಿಕೊಂಡರೆ ಬೆದೆ ಹೊರಟು ಹೋಗುತ್ತದೆಯಲ್ಲಾ, ಅದಕ್ಕಾಗಿ ರಾತ್ರಿಯೆಲ್ಲಾ ಜಾಗರಣೆ ಮಾಡಬೇಕು ಎಂಬ ಚಿಂತೆ ಅಜ್ಜಿಗೆ. ಅಡಸೋಗಿನ ಹಾಗೆ ನಾನು ಮಧ್ಯ ಪ್ರವೇಶಿಸಿ ಅಜ್ಜಿಗೆ ಸಹಾಯ ಮಾಡಲು ಹವಣಿಸುತ್ತಿದ್ದೆ.

"ಆಯಿ (ಅಜ್ಜಿ) ನೀ ಎಲ್ಲೆರ ಹೋಗಿ ಬರ್ಬ್ಹಂಗಿತ್ತಂದ್ರ
ಹೋಗಿ ಬಾ, ನಾನು ನೋಡತರ್ತೀನಿ"

ಎಂದು ಹೇಳುತ್ತಿದ್ದೆ.

"ಹಂಗಾರ ಎಮ್ಮಿ ಮಲಗಿದ್ರೆ ಹೊಡ್ದ ಎಬ್ಸು"

ಎಂದು ಹೇಳಿ ಹೋಗುತ್ತಿದ್ದಳು. ಎಮ್ಮೆ ಮಲಗಿದಾಗ ನಾನು ಎಷ್ಟು ಹೊಡೆದರೂ ಏಳುತ್ತಲೇ ಇರಲಿಲ್ಲ. ಆ ಕಾರಣಕ್ಕಾಗಿ ಆ ಎಮ್ಮೆ ಮಲಗುವ ಮುನ್ನವೇ

"ಆಯಿ...... ಬೇss....... ಆಯಿs ಬಾರಬೇ......."

ಎಂದು ಗಟ್ಟಿಯಾಗಿ ಕಿರುಚುತ್ತಿದ್ದೆವು. (ಜೊತೆಗೆ ನನ್ನ ಸಹೋದರರೂ ಇರುತ್ತಿದ್ದರು). ನಮ್ಮ ಗಲಾಟೆಗೆ ಹೆದರಿ ಎಮ್ಮೆ ನೆಲಕ್ಕೆ ಮೈ ತಾಗಿಸುತ್ತಿರಲಿಲ್ಲ. ರಾತ್ರಿಯೆಲ್ಲಾ ಅಜ್ಜಿ ದನದ ಹಟ್ಟಿಯ ಕಂಬಕ್ಕೆ ಕುಳಿತು ಕಾಯುತ್ತಿದ್ದಳು. ನಾನು ಅಜ್ಜಿಯ ಸುತ್ತಲೂ ತಿರುಗಿ ಅಲ್ಲಿಯೇ ಅಜ್ಜಿಯ ಶೆರಗು ಹಿಡಿದುಕೊಂಡು ಮಲಗುತ್ತಿದೆ. ಏಕೆಂದರೆ ಅಜ್ಜಿ ನಸುಕಿನಲ್ಲಿಯೇ ನನ್ನನ್ನು ಬಿಟ್ಟು ಹೊರಟು ಹೋದರೆ ಎಂಬ ಚಿಂತೆ.

ನಸುಕಿನಲ್ಲಿಯೇ ಪಯಣ ಆರಂಭವಾಯಿತು. ಅಜ್ಜಿ ಬೇಡವೆಂದು ಹೇಳಿದರೂ ಹಟಮಾಡಿ ಮನವೊಲಿಸಿದ್ದೆ. ಕೊಂಟೋಜಿ, ಬಸರಗೋಡ ಹಳ್ಳಿಗಳು ಸ್ವಲ್ಪ ದೂರವಿದ್ದರೂ, ಆ ಊರುಗಳು ನಮಗೇನು ಹೊಸವಲ್ಲ. ಅಲ್ಲಿಯ "ಜಾತ್ರೆ", "ಓಕುಳಿ" ಅತ್ಯಂತ ಹೆಸರಾದವು. ಜಾತ್ರೆಯ ಸಮಯದಲ್ಲಿ ಊಟ ಹಾಕುತ್ತಿದ್ದರು. ಆ ಊಟಗಳಿಗೆ ತಪ್ಪಿಸಿಕೊಳ್ಳದೆ ಅಜ್ಜಿಯೊಂದಿಗೆ ಹಾಜರಾಗುತ್ತಿದ್ದೆವು. ಹೀಗಾಗಿ ನಾನು ಆ ಹಳ್ಳಿಗಳವರೆಗೆ ನಡೆಯಬಲ್ಲೆ ಎಂದು, ಹಿಂದೆ ನಡೆದು ಹೋದ ಸಂದರ್ಭಗಳನೆಲ್ಲ ನೆನಪಿಸಿ ಒಪ್ಪಿಸಿದ್ದೆ.

ಕೊಂಟೋಜಿಗೆ ಹೋಗಲು ಡಾಂಬರು ರಸ್ತೆ ಇತ್ತು. ಬಸರಗೋಡಕ್ಕೆ ಅಂತಹ ರಸ್ತೆ ಇರಲಿಲ್ಲ. ಅದೊಂದು ಅದ್ಭುತ ರಸ್ತೆ! ಚಕ್ಕಡಿಗಳು ಹೋಗಿ ಹೋಗಿ ಈ ಕಗ್ಗ ರಸ್ತೆಯಲ್ಲಿ ರೈಲು ಹಳಿ ಹಾಕಿದಂತೆ "ಕಾಚಾ" ಬಿದ್ದು ಹೋಗಿದ್ದವು. ಆ ತಗ್ಗಿನ ರೈಲು ರಸ್ತೆಯಲ್ಲಿ "ಪೌಡರ್" ನಂತಹ ಮಣ್ಣು. ಆ ಪೌಡರ್‌ನಲ್ಲಿ ಕಾಲಿಟ್ಟು ನಡೆಯುವುದು ಎಂದರೆ ಹಿಮದಲ್ಲಿ ನಡೆದಷ್ಟು ಸಂತೋಷ. ಹೆಜ್ಜೆ ಹಾಕಿದಾಗ ಕಾಲ ಬೆರಳುಗಳ ಸಂದಿಯಿಂದ "ಪುತ್ತುಕ್ಕ್"ನೇ ಮಣ್ಣು ಹೊರಬರುತ್ತಿತ್ತು. ಬೆಳಗಿನ ಜಾವದಲ್ಲಿ ನಡೆದರಂತೂ ತಂಪಾಗಿ

ಇನ್ನೂ ಹಿತವೆನಿಸುತ್ತಿತ್ತು. ಅಂತಹ ಬಸರಕೋಡ ರಸ್ತೆಯನ್ನು ಬಿಟ್ಟು ಡಾಂಬರ್ ರಸ್ತೆಯ ಮೇಲೆ ನಡೆಯುವುದೆಂದರೆ ನನಗೆ ಬೇಸರ. ಈ ಕಾರಣಕ್ಕೆ ನಾನು "ಬಸರಕೋಡಕ್ಕೆ ಹೋಗೋಣ" ಎಂದಾಗ, ಅಜ್ಜಿಗೂ ಅದು ದೂರಾದರೂ ಪರವಾಗಿಲ್ಲ ಬಸರಕೋಡಕ್ಕೆ ಹೋಗುವುದೇ ಒಳ್ಳೆಯದೆನಿಸಿತ್ತೋ ಏನೋ.

ಹೌದು ಅಲ್ಲೆ ಹೋಗುದು ಚಲೋ ಅನ್ಸತ್ತದ
ಆದ್ರ ಏನು ಮಾಡುದು.....
ಆ ಕುರಸಾಲ್ಯ ಏನು ಮಾಡ್ತಾನೋ ಏನೋ......

ಎಂದು ತನ್ನೊಳಗೆ ಒಟಗುಟ್ಟುತ್ತ ಕೊಂಟೋಜಿಯ ದಾರಿಯನ್ನೇ ತುಳಿಯತೊಡಗಿದಳು. ಊರು ದಾಟಿ ಡಾಂಬರ್ ರಸ್ತೆ ಸೇರಿದಾಗ, ಕೊಂಟೋಜಿಗೆ ಒಂದು ಚಕ್ಕಡಿ ಹೊರಟಿತ್ತು.

ಯಪ್ಪಾ, ಏ ಯಪ್ಪಾss.................
ಸಣ್ಣ ಹುಡುಗೈತ್ಯ, ನಡ್ಯಾಕ ಆಗಂಗಿಲ್ಲ...........
ಬ್ಯಾಡಂದ್ರು ಬೆನ್ನ ಹತ್ತಿ ಬಂದೈತಿ.......... ಕೇಳಂಗಿಲ್ಲಿದು......
ಸ್ವಲ್ಪು ಹತ್ಸಗೊರ್‍ರಿಯಪ್ಪಾss..........

ಎಂದು ಅಂಗಲಾಚಿ ಬೇಡಿಕೊಳ್ಳುತ್ತಿದ್ದಳು. ಅಜ್ಜಿಯ ಜೊತೆಗೆ, ತಾಯಿಯ ಜೊತೆಗೆ ಹೊರಟರೆ, ಅಜ್ಜಿಯಾಗಲಿ, ತಾಯಿಯಾಗಲಿ ಈ ರೀತಿ ಕೇಳುವುದು ಮಾಮೂಲಿ ಮಾತುಗಳು. ಈ ಮಾತುಗಳು ಪ್ರಾರಂಭವಾದರೆ ಸಾಕು. ಆಗ ನಾನು ನಡೆದು ಸೋತು ಬಳಲಿ ಬೆಂಡಾದವನಂತೆ ಇಲ್ಲವೆ ಸುಟ್ಟ ಬದನೆಕಾಯಿಯಂತೆ ಮುಖ ಬಾಡಿಸುತ್ತಿದ್ದೆ. ಕೆಲವರು ಮನಕರಗಿ ಚಕ್ಕಡಿಯಲ್ಲಿ ಹತ್ತಿಸಿಕೊಂಡರೆ ಇನ್ನೂ ಕೆಲವರು (ನಾವು ಹರಿಜನರೆಂದು ಗೊತ್ತಿದ್ದವರು) ಇನ್ನೂ ಹೆಚ್ಚಿನ ರಭಸದಲ್ಲಿ ಚಕ್ಕಡಿಯನ್ನು ಓಡಿಸಿಕೊಂಡು ಹೋಗುತ್ತಿದ್ದರು. ಆದರೆ ಇಲ್ಲಿ ಹಾಗೇನಾಗಲಿಲ್ಲ. ಅಜ್ಜಿ ಕೇಳಿದಾಕ್ಷಣ ಆ ವ್ಯಕ್ತಿ ಕೂಡ್ರಿಸಲು ಹೇಳಿದ. ಮಾತು-ಕತೆಯೊಂದಿಗೆ ಕೊಂಟೋಜಿ ತಲುಪಿದೆವು.

ನಿನಗೆ ಪುಣ್ಯ ಬರ್‍ಲೆಪ್ಪ.
ನನ್ನಂಗ ಗಸಾನs ಮೊಮ್ಮಕ್ಕಳ ಕಾಣ್ಯಾಂಗ
ಆ ದೇವರು ಮಾಡ್ಲಿ.......

ಎಂದು ಬ್ರಾಹ್ಮಣರಂತೆ ಹರಕೆ ಕೊಟ್ಟು ನನ್ನನ್ನು ಚಕ್ಕಡಿಯಿಂದ ಇಳಿಸಿಕೊಂಡಳು.

ಆಗಲೇ ಬಿಸಿಲೇರಿತ್ತು. ಕೋಣದ ಮನೆಯವರ ಹಿತ್ತಲ ಬಾಗಿಲಿಗೆ ತಲುಪಿದೆವು. ನಾನು ಎಮ್ಮೆ ನೋಡುತ್ತ ನಿಂತೆ. ಅಜ್ಜಿ ಇನ್ನೊಂದು ಹೆಂಗಸಿನ ಜೊತೆಗೆ ಮಾತನಾಡುತ್ತಿದ್ದಳು.

"ಹಿಂಡಿ ಹತ್ತಿಕಾಳು ತಂದಿಯೇನಬೇ ಮುದಕಿ"

"ತಂದಿನ್ರಿಯವ್ವಾ"

"ಏಟ ತಂದೀ, ಉಡೇದಾಗ ಸ್ವಲ್ಪ ಕಾಣ್ತಾವಲ್ಲಾ?"

"ಇಲ್ಲರ್ರಿಯವ್ವ, ಯಾಡ ಕಿಲೋ ಅದಾವರ್ರಿ"

"ಯಾರಗೆರ ಗಂಡ್ಸರ್ಗಿ ಕರಕೊಂಡು ಬಂದಿ ಇಲ್ಲ?

ಇದೇನು ಇಟss ಹುಡುಗ್ಗ ಕರಕೊಂಡು ಬಂದಿಯಲ್ಲ

ಇವನ ಏನು ಎಮ್ಮಿ ಹಿಡಿ ಸೂರ!"

"ಇಲ್ಲರ್ರಿಯವ್ವಾ........... ಅದೇನ ಹಿಡಿತದ

ನಾ ಅದಿನೆಲ್ಲ ರಿ ಹಿಡಿತೀನಿ...........

ನೀವೇನು ಬರೂದು ಬ್ಯಾಡ್ರಿ.......... ಕ್ವಾಣ ಬಿಡ್ರಿ.........."

ಅಷ್ಟರಲ್ಲಿಯೇ ಒಂದು ಗಂಡಸಿನ ಧ್ವನಿ ಹೊರಬಂತು, ಅಜ್ಜಿ ತನ್ನೊಳಗೇ ವಟಗುಟ್ಟ ತೊಡಗಿದಳು. ಬಂದವ, ಅಜ್ಜಿಯೊನ್ನೊಮ್ಮೆ ಎಮ್ಮೆಯನ್ನೊಮ್ಮೆ ನೋಡಿ ಆ ಹೆಂಗಸಿನೊಂದಿಗೆ ಏನೋ ಹೇಳುತ್ತ ಒಳಗೆ ಹೋದ. ಆಕೆಯೂ ಒಳಗೆ ಹೋದಳು. ಸ್ವಲ್ಪ ಸಮಯದ ನಂತರ ಆತ ಹೊರಬಂದ.

"ನಮಸಗಾರ್ರಿಯಪ್ಪಾ -ಎಂದಳು ಅಜ್ಜಿ.

ಅಲ್ಲವ್ವಾ ಮುದುಕಿ ನಿನಗ ಈ ಮೊದಲೊಮ್ಮೆ ಬಂದಾಗ ಹೇಳಿದ್ದಿಲ್ಲ ಕ್ವಾಣದ ಬೀಜಾ ಒಡಸಿವಿ,

ಅದು ಎಮ್ಮಿ ಮ್ಯಾಲಿ ಬಿಡುದಿಲ್ಲ, ಮಟ್ಟಿಗಿ ಹಚ್ಚಿವಿ ಅಂತ ಹೇಳಿಲ್ಲಾ"

ಎಂದ. ಅಜ್ಜಿ ಯಾವ ಪರಿಯಲ್ಲಿ ಬೇಡಿಕೊಂಡರೂ ಪ್ರಯೋಜನವಾಗಲಿಲ್ಲ.

ಅಜ್ಜಿಯ ಬಾಯಿ ಬೊಂಬಾಯಿ ಆಯಿತು. ಎಮ್ಮೆಯ ಹಗ್ಗವನ್ನೂ ನನ್ನಿಂದ ಕಸಿದು ಕೊಂಡವಳೇ, ಬಡಿಗೆಯಿಂದ ಎಮ್ಮೆಯ ಡುಬ್ಬಕ್ಕೆ ಹೇರಿದಳು. ಬೆದರಿದ ಎಮ್ಮೆ ಜಗ್ಗಾಡತೊಡಗಿತು. "ಹ್ವಾಂ...... ಹ್ವಾಂ............ ಎಂದು ಧ್ವನಿ ಮಾಡತೊಡಗಿತು ಎಮ್ಮೆ. ಅದಕ್ಕೆ ಪ್ರತ್ಯುತ್ತರವಾಗಿ ಒಳಗಿನ ಕೋಣವು "ಅಂ...... ಅಂ......" ಎಂದು ಸಂಭಾಷಣೆ ಆರಂಭಿಸಿತು ! ಆತ ಬಾಗಿಲು ಮುಚ್ಚಿಕೊಂಡು ಆಗಲೇ ಹೊರಟು ಹೋಗಿದ್ದ. ಎಮ್ಮೆ ಜಗ್ಗಾಡಿದರೂ, ಮೀಸುಕದ ಹಾಗೆ ಗಟ್ಟಿಯಾಗಿ ಹಿಡಿದುಕೊಂಡು ಮತ್ತೊಂದು ಹೇರಿದಳು ಎಮ್ಮೆಗೆ. ಎಮ್ಮೆ ಓಡತೊಡಗಿತು. ಅದರ ರಭಸಕ್ಕೆ ಅಜ್ಜಿಯೂ ಓಡತೊಡಗಿದಳು. ತಲೆ ಬಾಗಿಲಿಗೆ ಬಂದ ಕೋಣ ಸಾಕಿದ ಆ ಮನೆಯ ಜನ, ಅಜ್ಜಿ ಓಡುವುದನ್ನು ನೋಡಿ ಬಿದ್ದು ಬಿದ್ದು ನಗುತ್ತಿದ್ದರು. ಅಜ್ಜಿಯ ಬಾಯಿ ಎಮ್ಮೆಯ ಬಾಯಿ ಒಂದೇ ಆಗಿತ್ತು. ನನ್ನನ್ನೂ ಬಿಟ್ಟು ಓಡಿ ಹೊರಟಿದ್ದರಿಂದ, ನಾನು ಹೆದರಿ ಅಳತೊಡಗಿದೆ. ಅಜ್ಜಿ ನನಗೆ "ಬಾ" ಎಂದು ಕೈ ಮಾಡಿ ಕರೆಯುತ್ತ ಎಮ್ಮೆಯ ಹಿಂದೆ ಓಡುತ್ತಲೇ ಇದ್ದಳು.

ನಾನು ಡಾಂಬರ್ ರಸ್ತೆ ಬಂದು ತಲುಪಿದಾಗ, ಅಜ್ಜಿಯ ಬಾಯಿ, ಎಮ್ಮೆಯ ಓಟ ಎರಡೂ ನಿಧಾನವಾಗಿದ್ದವು. ನನ್ನನ್ನ ಕಂಡಾಕ್ಷಣವೇ ರೇಗ ತೊಡಗಿದಳು:

"ಬರಬ್ಯಾಡ ಅಂತ ಹೇಳದ್ಯಾ....... ಕೇಳದ್ಯಾ?

ಎಲ್ಲ ಬಿಟ್ಟು ಉಂಡಿ ತಿನ್ನಾಕ ಹೊಕ್ಕಾಳೋ ಅನ್ನಂಗ

ಓಡೋಡಿ ಬೆನ್ನಹತ್ತಿ ಬರ್ತಿ.

ಬಾ ಓಡಿ ಬಾ... ಯಾಕ ಅಳತಿ ಸುಮಕsss........"

ನಂತರದಲ್ಲಿ ಅಜ್ಜಿಯೇ ತನ್ನ ಧ್ವನಿಯನ್ನು ಬದಲಾಯಿಸಿಕೊಂಡು ರಮಿಸಿದಳು.

ಅಜ್ಜಿಯ ತಲೆಯಲ್ಲಿ ಈಗ ಬೇರೆಯದೇ ಚಿಂತೆ. ನೇರ ನಮ್ಮೂರಿಗೆ ಹೋಗಿ ಪುನಃ ಬಸರಕೋಡಕ್ಕೆ ಹೋಗುವುದಾದರೆ ಹೆಚ್ಚಿನ ತಿರುಗಾಟ, ಕುಂಟೋಜಿಯಿಂದಲೇ ಬಸರಕೋಡಕ್ಕೆ ಹೊರಟರೆ ಹೊಟ್ಟೆಯ ಪಾಡು? ಆಗಲೇ ಸೂರ್ಯ ನೆತ್ತಿಯ ಮೇಲೆ ಬರುವ ಸಮಯವಾಗಿತ್ತು. ಆದರೆ ಅಜ್ಜಿ ನೇರ ನನಗೆ ಮನೆಗೆ ಹೋಗಲು ಹೇಳಿದರೂ ನಾನು ಒಪ್ಪಲಿಲ್ಲ. ನನಗೆ ಹಸಿವೆ ಇಲ್ಲ. ನಿನ್ನೊಟ್ಟಿಗೆ ಬರುವೆ, ನಡೆಯುವೆ ಎಂದು ಭರವಸೆಯನ್ನೂ ಕೊಟ್ಟೆ.

ಪಯಣ ಸಾಗಿತು. ಬಿಸಿಲಿಗೆ ಕಾಲು ಸುಡಲು ಪ್ರಾರಂಭವಾದವು. ಅದರಲ್ಲೂ ಡಾಂಬರ್ ರಸ್ತೆ ಬೇರೆ. ಚಕ್ಕಡಿಯ ರಸ್ತೆಗೆ ಬಂದು ಸೇರಿದೆವು. ಅಜ್ಜಿ ತನ್ನ ಕಾಲಲ್ಲಿಯ ಚಪ್ಪಲಿಗಳನ್ನು ತೆಗೆದು ನನಗೆ ಕೊಟ್ಟಿದ್ದಳು. ಅಜ್ಜಿಯ ಕಾಲಲ್ಲಿ ಕೆಲವು ಬಾರಿ ಬೇರೆ ಬೇರೆ ಜಾತಿಯ ಚಪ್ಪಲಿಗಳು ಇರುತ್ತಿದ್ದವು. ಎಂದರೆ, ಎಡಗಾಲಲ್ಲಿ ಇರುವ ಚಪ್ಪಲಿಯೇ ಬೇರೆ, ಬಲಗಾಲಲ್ಲಿ ಇರುವ ಚಪ್ಪಲಿಯೇ ಬೇರೆ. ಆದರೆ ನಾನು ಕಾಲಲ್ಲಿ ತೊಡುವ ಆ ಸಂದರ್ಭದಲ್ಲಿ ಒಂದು ಹೆಚ್ಚು ದಪ್ಪನೆಯ, ಇನ್ನೊಂದು ತೆಳ್ಳನೆಯ ಚಪ್ಪಲಿಯಾಗಿತ್ತು. ಅಜ್ಜಿಯ ಕಾಲುಗಳು ಮೊದಲೆ ದೊಡ್ಡವು. ನನ್ನ ಕಾಲು ಅವಳ ಕಾಲಿನ ಅರ್ಧ ಕಾಲೂ ಆಗುತ್ತಿರಲಿಲ್ಲ. ಆ ಚಪ್ಪಲಿಗಳನ್ನು ಹಾಕಿಕೊಂಡು ಹೊರಟರೆ, "ಟರ್ ಬರ್ ...... ಟರ್ ಬರ್" ಎಂಬ ಸದ್ದು ಬರುವುದರ ಜೊತೆಗೆ ಉಗಿಬಂಡಿಯಂತೆ ಧೂಳೂ ಏಳುತ್ತಿತ್ತು. ನನಗೆ ಕುದುರೆಯ ಹಾಗೆ ಕುಂಟುತ್ತ ನಡೆದ ಹಾಗೆ ಆಗುತ್ತಿತ್ತು. ಆದರೆ ಬಹಳ ಹೊತ್ತು ಆ ಚಪ್ಪಲಿಗಳನ್ನು ಹಾಕಿಕೊಂಡು ನಡೆಯಲಾಗುತ್ತಿರಲಿಲ್ಲ. ಅಜ್ಜಿಯ ಚಪ್ಪಲಿಗಳನ್ನು ತೊಟ್ಟಿದ್ದು ಅದೇ ಮೊದಲ ಬಾರಿಯೂ ಆಗಿರಲಿಲ್ಲ. ಹೊಲದ ಬದುವು ದಾಟುವಾಗ, ಮುಳ್ಳಿರುವ ಸ್ಥಳ ಬಂದಾಗ ಮಾತ್ರ, ಈ ಚಪ್ಪಲಿಗಳು ಕಾಲಲ್ಲಿ ಬರುತ್ತಿದ್ದವು. ಇನ್ನುಳಿದ ಸಮಯದಲ್ಲಿ ಕೈಯಲ್ಲಿಯೇ ಹಿಡಿದುಕೊಂಡು ನಡೆಯುವುದು ರೂಢಿಯಾಗಿತ್ತು.

ಬಸರಕೋಡ ಸಮೀಪಿಸುತ್ತಿದ್ದಂತೆ, ಊರ ದನಗಳು ಹಾಳು ಹೊಲದಲ್ಲಿ ಗುಡ್ಡದಲ್ಲಿ ಮೇಯುತ್ತಿದ್ದವು. ಈ ದನಗಳಲ್ಲಿ ಒಂದು ಎಮ್ಮೆ ಏನೆಂದು ಕರೆಯಿತೋ ಯಾರಿಗೆ ಗೊತ್ತು?

ಅದರ ಧ್ವನಿ ಕೇಳಿದಾಕ್ಷಣ ನಮ್ಮ ಎಮ್ಮೆ ಕೊಸರಿಕೊಂಡು ಓಡಿದ್ದೇ ಓಡಿದ್ದು; ಅಜ್ಜಿ ಅದರ ಹಿಂದೆಯೇ ಇದ್ದಳು. ಅಜ್ಜಿಯಿಂದ ಸುಮಾರು ದೂರ ನಾನು.

ಅಜ್ಜಿ ನನ್ನಿಂದ ದೂರವಾದಂತೆ, ನನ್ನ ದುಃಖ ಏರುತ್ತ, ಧ್ವನಿ ಸಹಿತವಾಗಿ ಅಳುವು ಹೊರಬರುತ್ತಿತ್ತು. ಅಜ್ಜಿಯನ್ನು ಕಳೆದುಕೊಳ್ಳುತ್ತೇನೆ ಎನ್ನುವ ಸಂಕಟದಲ್ಲಿ ಮುಳ್ಳಿನ ಸ್ಥಳವಿದ್ದರೂ, ಕೈಯಲ್ಲಿಯ ಚಪ್ಪಲಿಗಳು ಕಾಲಿಗೆ ಬರುತ್ತಿರಲಿಲ್ಲ. ಮುಳ್ಳು ನೆಟ್ಟಾಗ ಅಳುವು ಇಮ್ಮಡಿಯಾಗುತ್ತಿತ್ತು. ಅಜ್ಜಿ ಬಯಸಿದ್ದೇ ಒಂದು, ಆದದ್ದು ಇನ್ನೊಂದು. ಎಮ್ಮೆ ಓಡಿ ಹೋದದ್ದು ಅವಳಿಗೇನು ಬೇಸರವಿರಲಿಲ್ಲ. ಆ ದನಗಳ ಹಿಂಡಲ್ಲಿ ಕೋಣವಿರಬಹುದೆಂದು ಅವಳ ನಂಬಿಕೆ. ಆದರೆ ಅವಳ ನಂಬಿಕೆ ಸುಳ್ಳಾದಾಗ ನಿರಾಶೆಯಾಯಿತು.

ದೇಸಾಯಿಯರ ಮನೆಯ ಹಿತ್ತಲ ಬಾಗಿಲಿಗೆ ಎಮ್ಮೆಯೊಂದಿಗೆ ನಾವು ಬಂದು ನಿಂತೆವು. ಆದರೆ ಅಲ್ಲಿಯೂ ಆಳರಸರ ರಾಜಕೀಯವೇ ಅಧಿಕವಾಗಿತ್ತೆಂದು ತೋರುತ್ತದೆ. ಹೀಗಾಗಿ ಕುಂಟೋಜಿಯಲ್ಲಾದ ಹಾಗೇ ಇಲ್ಲಿಯೂ ಆಯಿತು. ಬಂದ ದಾರಿಗೆ ಸುಂಕವಿಲ್ಲ ಎಂಬಂತೆ ಎಮ್ಮೆಯೊಂದಿಗೆ ನಮ್ಮೂರಿಗೆ ಹೊರಡಲು ಪಯಾಣ ಪ್ರಾರಂಭವಾಯತು. ಅಲ್ಲಿ ಅಜ್ಜಿಗೆ ಯಾರೋ ಒಬ್ಬರು, ಏನೋ ಹೇಳಿದರೆಂದು ತೋರುತ್ತದೆ. ಅಲ್ಲಿಂದ ನಾವು ಹೊರಡುವ ದಾರಿಯ ದಿಕ್ಕೇ ಬದಲಾಯಿತು. ಅದು ದೇಸಾಯಿಯವರ ತೋಟದ ದಾರಿ. ಸ್ವಲ್ಪ ನಡೆದು ಒಂದೆಡೆ ಕಾಯುತ್ತ ಕುಳಿತೆವು. ನಮ್ಮಲ್ಲಿಯೇ ಪ್ರಶ್ನೋತ್ತರಗಳು ನಡೆದಿದ್ದವು. ಬೆಳಕು ನಂದುತ್ತಿತ್ತು. ಕತ್ತಲೆ ಆವರಿಸುತ್ತಿತ್ತು. ಊರ ದನಗಳೆಲ್ಲ ಮನೆಗೆ ಹೋಗುತ್ತಿದ್ದವು. ಆಗ ದೇಸಾಯಿಯವರ ದನಗಳೆಲ್ಲ ಮನೆಯಿಂದ ತೋಟಕ್ಕೆ ಹೊರಟಿರಬೇಕು. ದನಗಳೆಲ್ಲ ನಾವು ಕುಳಿತ ಸ್ಥಳವನ್ನೂ ಮೀರಿ ಮುಂದಕ್ಕೆ ಹೋದವು. ಆಗಲೇ ಎಮ್ಮೆವ್ವಳ ತಳಮಳ, ಎಳೆದಾಟ ಪ್ರಾರಂಭವಾಗಿದ್ದವು. ಆ ದನಗಳಲ್ಲಿ ಇದ್ದ ಕೋಣ ಸಂಭಾಷಣೆಗೆ ಇಳಿಯಿತು. ಕೋಣವು ಹಗ್ಗ ಕಟ್ಟಿ ಹಿಡಿದುಕೊಂಡು ಹೋಗುವವನಿಂದ ಬಿಡಿಸಿಕೊಳ್ಳಲು ಹವಣಿಸುತ್ತಿತ್ತು. ಅಜ್ಜಿ ನಿಂತಲ್ಲಿಯೇ ಬಾಯಿ ಬಡಿಯತೊಡಗಿದಳು. ನಮ್ಮ ಎಮ್ಮೆ ಇದ್ದಕ್ಕಿದ್ದಂತೆ ಓಟಕೊಟ್ಟಿತು. ಆಗ ಅಜ್ಜಿಯ ಬಾಯಿ ಇನ್ನೂ ಜೋರಾಯಿತು. ಆತ ಅಜ್ಜಿಯನ್ನೊಮ್ಮೆ ತಮ್ಮ ದನಗಳನ್ನೊಮ್ಮೆ ನೋಡುತ್ತಿದ್ದ. ಆಗಲೇ ಆ ಯುವಕನ ಕೈಯಿಂದ ಕೋಣ ಜಾರಿಕೊಂಡಿತ್ತು.

ಮತ್ತೆ ನನ್ನ ಅಳುವಿನ ಧ್ವನಿಯನ್ನು ಗ್ರಹಿಸಿದ ಅಜ್ಜಿ, ಹಿಂದಿನ ಧ್ವನಿಗಿಂತ ತೀರ ಭಿನ್ನವಾಗಿಯೇ ರಮಿಸಿದಳು. ಬಹುಶಃ ಅಜ್ಜಿ ಬೇಕೆಂದೇ ಎಮ್ಮೆಯನ್ನೂ ಬಿಟ್ಟಿದ್ದಿರಲೂ ಸಾಕು. ಎಮ್ಮೆ ಮುಂದೆ ಮುಂದೆ ಓಡುತ್ತಿತ್ತು. ಯುವಕನ ಕೈಯಿಂದ ತಪ್ಪಿಸಿಕೊಂಡ ಕೋಣ ಅದೇ ವೇಗದಲ್ಲಿಯೇ ಪಲಾಯನ ಮಾಡುತ್ತಿತ್ತು. ಎತ್ತಿನ ಹಿಂದೆ ಇದ್ದ ಯುವಕನಿಗೆ ಇನ್ನುಳಿದ ದನಗಳನ್ನು ಬಿಟ್ಟು ಕೋಣದ ಬೆನ್ನಟ್ಟಿಕೊಂಡು ಓಡುವ ಮನಸ್ಸಾಗಿರಲಿಕ್ಕಿಲ್ಲ.

ನಂತರದಲ್ಲಿ ಬಂದ ವ್ಯಕ್ತಿ ಕೆಲ ಸಮಯ ಹಿಂಬಾಲಿಸಿದ, ಪ್ರಯೋಜನವಾಗದೆ ಹೋದಾಗ ಅಜ್ಜಿಯನ್ನು ದುರುಗುಟ್ಟಿಕೊಂಡು ನೋಡತೊಡಗಿದನು.

ಕತ್ತಲಾಗುತ್ತಿದ್ದರೂ ಎಮ್ಮೆಯ ಹುಡುಕಾಟಕ್ಕೆಂದು, ದೇಸಾಯಿಯವರ ತೋಟಕ್ಕೆ ಮತ್ತು ಮನೆಗೆ ಪ್ರದಕ್ಷಿಣೆಯನ್ನು ಹಾಕಿದೆವು. ಎಮ್ಮೆ ಸಿಗಲಿಲ್ಲ. ಎಲ್ಲಿ ಹೋಯಿತು ಎನ್ನುವುದೂ ಗೊತ್ತಾಗಲಿಲ್ಲ. ಸಿಗುವ ಲಕ್ಷಣಗಳೂ ಕಾಣದೇ ಹೋದಾಗ, ಕಾಲೆಳೆಯುತ್ತ, ನಿರಾಶೆಯ ಉಸಿರಿನ ಭಾರ ಹೊತ್ತು ಮನೆಗೆ ತಲುಪಿದೆವು. ಬೆಳಿಗ್ಗೆ ಎದ್ದು ನೋಡಿದರೆ ನಮ್ಮ ಮನೆಯ ಹಿತ್ತಲಲ್ಲಿ ದೇಸಾಯಿಯವರ ಕೋಣ ಮತ್ತು ನಮ್ಮ ಎಮ್ಮೆ ಎರಡೂ ಬಂದು ನಿಂತಿವೆ!

ವಿಶ್ವಾಮಿತ್ರ ಸೃಷ್ಟಿಯ ಈ ಜೀವಿಗಳಿಗೂ ಸಹಜವಾಗಿ ಸೇರಲು ಅವಕಾಶ ಕೊಡದ ಈ ಸಮಾಜ, ಪರಸ್ಪರ ಜನರನ್ನೂ, ಪ್ರೇಮಿಗಳನ್ನೂ ಸೇರಲು ಹೇಗೆ ತಾನೇ ಅವಕಾಶ ಕೊಟ್ಟೀತು? ಆದ್ದರಿಂದಲೇ, ಮಾರಮ್ಮದೇವಿ ಮತ್ತು ಕೋಣನಂತಹ ಕಥೆ ಬೆಳೆದು ನಿಂತಿವೆ.

l

l

# ಕರಿಯ ಬೆಕ್ಕು ಬೆಳ್ಳಗಾಗಲಿಲ್ಲ

ಕರಿಯ ಬೆಕ್ಕನ್ನು ಬಿಳಿಯದಾಗಿಸುವ ಬೀರಬಲ್ಲನ ಕಥೆ ಗೊತ್ತಿರಬೇಕಲ್ಲವೇ? ಅಂತಹದೇ ಒಂದು ಸಂದರ್ಭ. ಅದು, ನನ್ನ ತಾಯಿಯ ಸಾಹಸವೋ, ಹುಚ್ಚುತನವೋ, ಪ್ರೀತಿಯೋ ಏನೆಂದು ಕರೆಯಬೇಕು, ಸ್ಪಷ್ಟವಾಗುತ್ತಿಲ್ಲ.

ಈಗಲೂ ನನ್ನ ಮನೆಗೆ ಬಂದವರೆಲ್ಲ, ಒಮ್ಮೆ ನನ್ನ ಮುಖ ಮತ್ತೊಮ್ಮೆ ನನ್ನವ್ವನ ಮುಖ ನೋಡಿ ಅವಕ್ಕಾಗಿ ಪಿಳಿ ಪಿಳಿ ಕಣ್ಣು ಬಿಡುತ್ತಾರೆ. ಅಂತಹ ಹಾಲುಗೆನ್ನೆಯ ಬಣ್ಣ ನನ್ನ ತಾಯಿಯದು. ಆ ರೂಪ, ಬಣ್ಣದ ಶ್ರೀಮಂತಿಕೆ ನನ್ನಲ್ಲಿ ಏಕಿಲ್ಲ? ಎನ್ನುವುದು ಅವರ ಅಂತರಂಗದ ಪ್ರಶ್ನೆ. ಕೆಲವರು ಮನ ಬಿಚ್ಚಿ ಕೇಳಿ ತೃಪ್ತಿಪಟ್ಟರೆ, ಇನ್ನೂ ಕೆಲವರು ಕೇಳಲಾಗದೆ ಉಗುಳು ನುಂಗಿಕೊಂಡು ಹಾಗೆಯೇ ಹೋಗಿದ್ದಾರೆ ಎನ್ನುವುದು ನನಗೆ ಚೆನ್ನಾಗಿ ಗೊತ್ತು.

ನನಗಿಲ್ಲಿ ಅಡಿಗರ ಕವನದ ಸಾಲುಗಳು ನೆನಪಾಗುತ್ತಿವೆ.

ಕರೆಯುತ್ತಿವೆ ಹಿಮಗಿರಿಯ ಕಂದರ
ಬಂದೆಯಾ ಮಗು ಬಂದೆಯಾ.....
......................
ಗಿರಿಯ ಕಂದರ
ಕಂ....... ದ....... ರ.......
ದ........ ರ........
ರ.........

ಅದೊಂದು ಕಂದರ. ಒಣಕಲ್ಲು ಬೆಟ್ಟ ಗುಡ್ಡಗಳಿಂದ ಕೂಡಿದ ಭಂವಾರಗಳ ಕಣಿವೆ. ಭಂವಾರದ ಬೀಡು, ಕಣಿವೆಯ ಕಾಡು, ಕಾಲಿಟ್ಟರೆ ಜೇನಿ ಜಾಲಿಗಳ ಮುಳ್ಳು, ಹಕ್ಕಿ, ಹಾವು, ಹುಳು ಕೀಟಗಳಿಂದ ಆವರಿಸಿದ ಭೀಕರ ಆದರೂ ಸೌಂದರ್ಯದ ಸೊಬಗಿನ ಸ್ಥಳ. ಇದರ ಬದಿಗೆ ಪ್ರದರ್ಶನಕ್ಕೆಂದು ಮಾಡಿಟ್ಟ ಹಾಗೆ ಕಾಣುವ ಕಂದಕ. ಆ ಕಂದಕದಿಂದ ಕಲರವ ಹರಿವ ನೀರಿನ ನಾದದೊಂದಿಗೆ ಚಿಲಿಪಿಲಿ ಹಕ್ಕಿಗಳ ಹಾಡು.

ಹರಿವ ನೀರು ಎಂದೆನಲ್ಲವೇ? ಅದೇನು ದಬದಬನೆ ಬೀಳುವ ಜಲಪಾತದ ನೀರಲ್ಲ. ಎಲ್ಲಿಂದಲೋ ಹರಿದು ಬರುವ ನೀರದು. ಒಡೆದ ಒಗಟಂತೆ ಇದ್ದುದು. ಆ ಕಂದಕಕ್ಕೆ ನೀರು ಹರಿದು ಹೋಗಲು ಐದು ಕಮಾನುಗಳು, ಕಮಾನಿನ ಹಾಸುಬಂಡೆಗಳೆಲ್ಲ ಹಸಿರು ಪಾಚಿಗಳಿಂದ ಜೊಂಡುಗಟ್ಟಿದ್ದವು. ಹಾಸು ಬಂಡೆಗಳ ಮೇಲೆ ಕಾಲಿಡಬೇಕಾದರೆ ಮೈ ತುಂಬ ಕಣ್ಣಿರಬೇಕು. ದೇಹ ಕಡ್ಡಿಯಂತೆ ಸೆಟೆದು ಸಮತೋಲನದಲ್ಲಿರಬೇಕು, ಆಯ ತಪ್ಪಿದರೆ ಸಾಕು ಹಲ್ಲುಗಳೆಲ್ಲ ಕೈಯಲ್ಲಿಯೇ. ಅನಂತರ ನಡು ಕೈ ಕಾಲುಗಳಿಗೆ ಮೂರು ದಿನಗಳ ತನಕ ಉಸುಕಿನಿಂದ ಕಾವು ಕೊಡಬೇಕು.

ಕಂದಕದ ಒಳಗೆ, ಕಮಾನಿನ ಮುಂದೆ ಸ್ವಲ್ಪ ಬಯಲಾದ ಹಾಸು ಬಂಡೆಗಳ ಸ್ಥಳ. ಅಲ್ಲಿ ನಮ್ಮ ಜನತೆ ಬಟ್ಟೆ ತೊಳೆಯುವುದಕ್ಕಾಗಿ ಹೋಗುತ್ತಿದ್ದರು. ಅಂತೆಯೇ ನನ್ನ ತಾಯಿಯೂ ಕೂಡಾ. ಆಗ ಹೋಗುವವರ ಬೆನ್ನು ಹತ್ತಿ ತಿರುಗುವುದೊಂದು ಚಟ ನನಗೆ. ಬೇಡವೆಂದರೂ ಹಟ ಮಾಡಿ ಪೆಟ್ಟು ತಿಂದರೂ ಸರಿ, ಸಿಟ್ಟೂ ಮಾಡಿದರೂ ಸರಿ ಬಾಲ ಮಾತ್ರ ಬಿಡುತ್ತಿರಲಿಲ್ಲ.

ನನ್ನ ದಲಿತ ಕೇರಿಯ ಜನ ಬಟ್ಟೆ ತೊಳೆಯುವುದಕ್ಕಾಗಿ ಹೋಗುವ ಸ್ಥಳಗಳು ಮೂರು. ಒಂದು ನಮ್ಮೂರ ಕೆರೆ, ಈ ಕೆರೆಗೆ ಐದು ಕಡೆಗಳಲ್ಲಿ ಬಟ್ಟೆ ತೊಳೆಯುವ ಕಲ್ಲುಗಳನ್ನು ಹಾಕಲಾಗಿದೆ. ಒಂದೊಂದು ಭಾಗದ ಒಗೆಕಲ್ಲುಗಳಿಗೆ ಒಂದೊಂದು ಸಮಾಜದ ಜನ ಗುತ್ತಿಗೆ ಹಿಡಿದಂತೆ ಪದ್ಧತಿ. ನಮ್ಮ ಕೇರಿಯ ಜನರಲ್ಲಿ ನಮ್ಮ ಮನೆಯವರೇ ಮೊದಲ ಬಾರಿಗೆ ಊರ ಕೆರೆಯಲ್ಲಿ ಬಟ್ಟೆಯನ್ನು ತೊಳೆಯುವ ಸಾಹಸ ಮಾಡಿದವರು. ಈಗಲೂ ಕೆಲ ಜಾತಿಯ ಜನ ಅಲ್ಲಿಗೆ ಬಟ್ಟೆ ತೊಳೆಯಲು ಹೋಗುವುದಿಲ್ಲವೆಂದರೆ ನಿಮಗೆ ಆಶ್ಚರ್ಯವೆನಿಸಬಹುದು. ಆದರೆ ವಸ್ತು ಸ್ಥಿತಿ ಹಾಗೇ ಇದೆ. ನಜೀರ ಸಾಬರು ಹಾಕಿಸಿದ ಕೊಳವೆ ಬಾವಿಗಳು ಈ ಸ್ಥಿತಿಗೆ ಸಹಕರಿಸಿವೆ.

ನನ್ನವ್ವೆಯರು ಕೆರೆಗೆ ಬಟ್ಟೆ ತೊಳೆಯಲು ಒಟ್ಟಾಗಿಯೇ ಹೋಗುತ್ತಿದ್ದರು. ಜೊತೆಗೆ ಪಕ್ಕದ ಎರಡು ಮೂರು ಮನೆಯ ಹೆಂಗಸರನ್ನೂಕರೆದುಕೊಂಡು ಹೋಗುತ್ತಿದ್ದರು. ಒಂದು ರೀತಿಯಲ್ಲಿ ಇದು ಸೈನ್ಯ ಕಟ್ಟುವ ಪದ್ಧತಿ. ಯಾರಾದರೂ ಮೇಲು ಜಾತಿಯ ಜನ ಒಬ್ಬರು ಕದನಕ್ಕೆ ಬಂದರೆ ಸಾಕು, ಕೇರಿಯ ಎಲ್ಲಾ ಬಾಯಿಗಳೂ ಒಂದುಗೂಡಿಬಿಡುತ್ತಿದ್ದವು. ಮೇಲು ಜಾತಿಯವರೋ ಜಾತಿಯ ಹೆಸರು ಹೇಳಿ ಗುರುತಿಸಿ ಹಾವು ಕಂಡಂತೆ ಹೆದರಿ ಮುಖ ಕಿವುಚಿ ತಾತ್ಸಾರ ಭಾವನೆಯಿಂದ ನೋಡುತ್ತಿದ್ದರು.

"ಊರ ಹೊರಾಗ ಕೊಳ್ಳಾದ, ಗರಸಿನ ತಗ್ಗದ
ಅಲ್ಲಗಿ ಹೋಗಬಾರ್ದ? ಇಲ್ಲ್ಯಾಕ ಬರಬೇಕು?
ಏನು ದೊಡ್ಡ ಜಾತಿಯವರಂಗ ಕೆರಿಗಿ ಬರ್ತಾವು......"

ಹೀಗೆ ಮಾತನಾಡಿಕೊಳ್ಳುವವರೇನು ತೀರ ಮೇಲು ಜಾತಿಯವರೇನಲ್ಲ. ಇವರೂ ಮಾಂಸಾಹಾರಿಗಳೇ.

ಮೇ. ಜಾ : ನಿಮ್ಮದರ ಏನು ದೊಡ್ಡ ಜಾತಿ?
ದನ ತಿನ್ನು ಜಾತಿ!

ಕೆ.ಜಾ. : ನಿಮ್ಮದರ ಏನು ? ದೊಡ್ಡ ಜಾತಿ?
ಸತ್ತಿದ್ದ ತಿನ್ನು ಜಾತಿ?

ಇಂಥ ಮಾತಿನ ನಡುವೆ ಅವರವರ ಗೌಪ್ಯದ ರಾಸಲೀಲೆಯ ಕಥೆಗಳು ಹೊರಬಂದು, ಅವರ ಕೂದಲು ಇವರ ಕೈಗೆ ಇವರ ಕೂದಲು ಅವರ ಕೈಗೆ. ಕೊನೆಯಲ್ಲಿ ಗಂಗಾನದಿಯಲ್ಲಿ ಮಿಂದು ಪಾವನವಾದವರಂತೆ ಕೆರೆಯಲ್ಲಿ ಮುಳುಗಿ ಹೊರಬರುತ್ತಿದ್ದರು.

ಇಷ್ಟೆಲ್ಲ ಕದನವಾದಾಗಲೂ ಒಗೆ ಗಲ್ಲು ಬಿಡುವುದಾದರೂ ಎಂತಹದ್ದು! ಕೊನೆಯ ಭಾಗದ ಕಲ್ಲು ಮಾತ್ರ. ಒಂದು ವೇಳೆ ಇಬ್ಬರು ಬಟ್ಟೆ ತೊಳೆಯುವ ಕೆಲಸ ಮುಗಿದು ಹೊರಬಂದರೆ ಕೊನೆಯಲ್ಲಿದ್ದ ಮಹಾನುಭಾವರು ಮಧ್ಯದ ಕಲ್ಲುಗಳಿಗೆ ಬಂದು ಕೊನೆಯ ಕಲ್ಲು ಬಿಟ್ಟಿಕೊಡುವ ವಾಡಿಕೆ. ಒಗೆಕಲ್ಲು ಬಿಟ್ಟು ಬರುವಾಗ ಅದನ್ನು ಅಲುಗಾಡುವಂತೆ, ಒಗೆಯಲು ಬಾರದಂತೆ ಅಭದ್ರಮಾಡಿ ಬಿಟ್ಟುಕೊಡುವ ಕೃಪೆಯೂ ತೋರುತ್ತಿದ್ದರು. ಬಟ್ಟೆ ತೊಳೆಯುವಾಗ ಸ್ವಲ್ಪ ನೀರು ಸಿಡಿದರೆ ಸಾಕು ಬಾಯಿ ಬೊಂಬಾಯಿಯಾಗುತ್ತಿತ್ತು. ನನ್ನವ್ವೆಯರೇನು (ನನ ತಾಯಿ, ಚಿಕ್ಕಮ್ಮ, ದೊಡ್ಡಮ್ಮ) ಮೌನ ಸಂಪನ್ನೆಯರಲ್ಲ. ಅವರು ಕಡ್ಡಿ ಗೀರುವುದನ್ನೇ ಕಾಯುವ ಸ್ವಾಭಿಮಾನಿ ಕದನಗಾತಿಯರು. ಕೆರೆಗೆ ಹೋದರೆ ಕದನವಿಲ್ಲದೆ ಮರಳುವ ಹಾಗೆಯೇ ಇರಲಿಲ್ಲ. ಅದಕ್ಕಾಗಿ ಅಜ್ಜಿ ಕೆರೆಗೆ ಬಟ್ಟೆ ತೊಳೆಯಲು ಹೋಗುವುದು ಬೇಡ ಎನ್ನುವವಳು. ಊರವರ ಕೆಟ್ಟ ಕಣ್ಣುಗಳು ಬೀಳದಿರಲೆಂದು ಹೆಚ್ಚಿಗೆ ಕೆಲಸವಿಲ್ಲದಾಗ, ಹೊಸಬಟ್ಟೆಗಳು ತೊಳೆಯುವ ದಿನವಿದ್ದಾಗ, ಮನೆಯಲ್ಲಿ ಗಂಡಸರೂ ಇಲ್ಲದ ಸಂದರ್ಭ ನೋಡಿ ಕೆರೆಗೆ ಕಾಲಿಡುತ್ತಿದ್ದರು.

ನನಗೆ ಕೆಲವೊಮ್ಮೆ ಇವರ ಕದನ ಮೋಜೆನಿಸುತ್ತಿತ್ತು. ಇನ್ನೂ ಕೆಲವೊಮ್ಮೆ ವಿಕೋಪಕ್ಕೆ ಹೋದಾಗ ಕೆರೆಯ ದಡದ ಮೇಲೆ ಕುಳಿತವ ಎದ್ದು ನಿಂತು ತತ್ತಳಂದುಳಿವ ಕುದುರೆಯ ಹಾಗೆ ಕುಣಿದಾಡುತ್ತಾ ಗೋಗರೆಯುತ್ತಿದ್ದೆ. ಕೆಲವೊಮ್ಮೆ ಅಮ್ಮನವರ ಆಜ್ಞೆ ಬರುವುದೊಂದೇ ತಡ ಅಜ್ಜಿಯನ್ನು ಕರೆತರಲು ಅಲ್ಲಿಂದ ಮನೆಗೆ ಓಡುವುದು, ಅಜ್ಜಿ ಎಷ್ಟು ಹೆಸರುವಾಸಿ ಎಂದು ಈಗಾಗಲೇ ಒಂದು ಸಂದರ್ಭದಲ್ಲಿ ಹೇಳಿದ್ದು ನೆನಪಿರಬಹುದಲ್ಲವೇ?

ಬಟ್ಟೆ ತೊಳೆಯುವ ಎರಡನೆಯ ಸ್ಥಳ ಗರಸಿನ ತಗ್ಗುಗಳು. ಇವು ಮಳೆಗಾಲದಲ್ಲಿ ಮಾತ್ರ ಮೈದೆರೆದು ನಿಲ್ಲುವಂಥವು. ಬೇಸಿಗೆಯಲ್ಲಿ ಹೇಳ ಹೆಸರಿಲ್ಲದಂತೆ ಮಟಾಮಾಯವಾಗುತ್ತಿದ್ದವು. ಇವು ಊರ ಹೊರಗಿದ್ದು, ಇಲ್ಲಿ ಊರವರ

ಕಾಟವಿರುತ್ತಿರಲಿಲ್ಲ. ಹೀಗಾಗಿ ಇಲ್ಲಿ ಕದನಕ್ಕೆ ಅವಕಾಶಗಳಿರುತ್ತಿರಲಿಲ್ಲ. ಅವ್ವೆಯವರು ಇಲ್ಲಿ ಬಟ್ಟೆ ತೊಳೆಯುವಾಗ ನಾವು ಇದೇ ನೀರಲ್ಲಿ ಈಜುತ್ತಿದ್ದೆವು. ಚಡ್ಡಿ ಇಲ್ಲದೆ ನೀರಲ್ಲಿ ಬೀಳುವ ನಮಗೆ ಜಿಗಣೆಗಳ (ಇವು ಮಳೆಯ ಹುಳದ ಹಾಗೆ ಉದ್ದವಾಗಿದ್ದು ಮೈಗೆ ಹತ್ತಿಕೊಂಡು ರಕ್ತ ಹೀರುವುದು, ಸಂದು ಕಂಡಲ್ಲಿ ಒಳಸೇರುವುದು ಇವುಗಳ ಕೆಲಸ) ಕಾಟ ತುಂಬ ಜೋರು. ಗುದದಲ್ಲಿ ಹೊಕ್ಕರೆ ಹೇಗೆಂಬ ಭಯವಿದ್ದರೂ ಪರಿವೇ ಇರುತ್ತಿರಲಿಲ್ಲ. ಆದರೆ ಹೆಚ್ಚು ಹೊತ್ತು ನೀರಲ್ಲಿ ಒಂದೆಡೆ ನಿಲ್ಲುತ್ತಿರಲಿಲ್ಲ. ಅವ್ವೆಯರು ನೀರಿಂದ ಬೇಗನೆ ಹೊರಕ್ಕೆ ಎಬ್ಬಿಸುತ್ತಿದ್ದರು. ಕೆಲವೊಮ್ಮೆ ಮನೆಯವರನ್ನು ತಪ್ಪಿಸಿಯೂ ಇಲ್ಲಿಗೆ ಬರುವ ವಾಡಿಕೆ ಇತ್ತು. ಹೆಚ್ಚು ಆಳವಿಲ್ಲದ ಈ ನೀರಲ್ಲಿ ಈಜುವುದೆಂದರೆ ಮೋಜು, ದನಕರುಗಳು ನಮ್ಮೊಂದಿಗೆ ಸಲೀಸಾಗಿ ಈಜುತ್ತಿದ್ದವು. ನೀರಿನಲ್ಲಿದ್ದೇ ಅವುಗಳ ಸವಾರಿ ಮಾಡುವುದೆಂದರೆ ಇನ್ನೂ ಮೋಜು.

ಇಲ್ಲಿಂದ ಸ್ವಲ್ಪ ಮುಂದೆ ಎರಡು ಬಾವಿಗಳಿದ್ದವು. ಒಂದು ಚೌಕಬಾವಿ, ಎಡನೆಯದು ಗುಂಡಪ್ಪನ ಬಾವಿ. ನನ್ನ ಸಹೋದರರೊಂದಿಗೆ ಈಜುವುದಕ್ಕೆ ಇಲ್ಲಿಗೆ ಬರುವುದು ವಾಡಿಕೆ. ಅದು ಸಾರ್ವತ್ರಿಕವಾದ ಬಾವಿಯಲ್ಲದಿದ್ದರೂ ಊರಿನ ಎಲ್ಲ ಜನ ಅಲ್ಲಿ ಈಜಲು ಬರುತ್ತಿದ್ದರು. ಆ ಬಾವಿಯನ್ನು ಕಾಯುವುದಕ್ಕೆ ಒಬ್ಬ ವ್ಯಕ್ತಿ ಇದ್ದ. ಈತ ಊರವರನ್ನು ಈಜಲು ಬಿಡುತ್ತಿದ್ದ. ಆದರೆ ನಾವು ಬಂದರೆ ಮುಳ್ಳಾಗುತ್ತಿದ್ದ, ಹುಲಿಯಾಗುತ್ತಿದ್ದ. ಆತನನ್ನು ಕಂಡರೆ ನಮಗೆ ಭಯವೂ ಆಗುತ್ತಿತ್ತು. ಕೆಲವೊಮ್ಮೆ ಮೋಜು ಎನಿಸುತ್ತಿತ್ತು. ಮುಖಕ್ಕೆ ಮೈಗೆ ಖಾದಿ ಗ್ರಾಮೋದ್ಯೋಗದ ಬೇವಿನೆಣ್ಣೆಯ ಸಾಬೂನು ಹಚ್ಚಿಕೊಂಡು ನೀರಿಗೆ ಇಳಿಯಬೇಕು ಎನ್ನುವಾಗಲೇ ಆತ ಪ್ರತ್ಯಕ್ಷನಾಗುತ್ತಿದ್ದ. ಆಗ ನಮ್ಮ ಸ್ಥಿತಿ ಹೇಳತೀರದು. ಬಟ್ಟೆ ಬಿಚ್ಚಿ ಬಾಹುಬಲಿಗಳಾಗಿ ಈಜುವುದು ವಾಡಿಕೆ. ಆತ ಬಂದ ನಂತರ ಕೈಗೆ ಸಿಕ್ಕಷ್ಟು ಬಟ್ಟೆಗಳನ್ನು ಹಿಡಿದುಕೊಂಡು ಓಡುತ್ತಿದ್ದೆವು. ಆ ಬೆತ್ತಲೆಯ ಓಡಾಟ, ಸಾಬೂನು ಹಚ್ಚಿದ್ದರಿಂದ ಕಣ್ಣಿನ ಉರಿತ. ಬಾವಿಯ ಬದುವು ದಾಟಿದರೆ ಊರಿನ ಜನ. ಬೆತ್ತಲೆ ಊರಲ್ಲಿ ಹೋಗುವ ಹಾಗಿಲ್ಲ. ಸಾಬೂನಿನ ಮೈಯಲ್ಲಿ ಬಟ್ಟೆ ತೊಟ್ಟುಕೊಳ್ಳುವ ಹಾಗಿಲ್ಲ. ಒಟ್ಟು ಎಡೆಬಿಡಂಗಿಯ ಪ್ರಸಂಗ. ಅರ್ಧ ಗಂಟೆ, ಕೆಲವೊಮ್ಮೆ ಗಂಟೆಗಟ್ಟಲೆ ಗಿಡದ ಮರೆಗೂ ಹಾಳುಬಿದ್ದ ಗೋಡೆಯ ಮರೆಗೂ ನಿಂತು ಆ ಬಾವಿ ಕಾಯುವಾತ ಮರೆಯಾದರೆ ಸಾಕು ಕಳ್ಳ ಹೆಜ್ಜೆ ಹಾಕಿ ಕಾಗೆ ಸ್ನಾನ ಮಾಡಲು ಹಾತೊರೆಯುತ್ತಿದ್ದೆವು. ಆತನೂ ಜಾಣ, ಅವಿತು ಹಿಡಿಯಲು ಪ್ರಯತ್ನಿಸುತ್ತಿದ್ದ. ಜಾತಿಯ ಹೆಸರೆತ್ತಿ ಬಯ್ಯುತ್ತಿದ್ದ. ಆದರೆ ಒಮ್ಮೆಯೂ ಅವನ ಕೈಗೆ ಸಿಕ್ಕಿಹಾಕಿಕೊಳ್ಳಲಿಲ್ಲ. ಆದರೆ ಬೆತ್ತಲೆಯಾಗಿದ್ದು ಗಂಟೆ ಹೊಡೆಯುತ್ತಾ ಊರಲ್ಲಿಯೂ ಅರೆಮರೆಯಾಗಿ ದರ್ಶನ ಕೊಟ್ಟದ್ದೂ ಇದೆ.

ಮೂರನೆಯ, ಬಟ್ಟೆ ತೊಳೆಯುವ ಸ್ಥಳವೇ ಭಯಾನಕವಾದ ಕೊಳ್ಳ. ಭಗ್ನವಾದ

ಕೋಟೆಗೋಡೆ, ಕಂದಕ, ಕಂದರ, ಭಂವಾರ ಕಾಡುಗಳಿಂದ ಕೂಡಿದ ಈ ಸ್ಥಳಕ್ಕೆ ಹೋಗಲು ನಮ್ಮ ತಂದೆ ಸರ್ವಥಾ ಒಪ್ಪುತ್ತಿರಲಿಲ್ಲ. ಬೇಸಿಗೆಯಲ್ಲಿಯೂ ಬತ್ತದ ಗಂಗೆಯಂತೆ ಹರಿಯುವ ಸಾಮರ್ಥ್ಯ ಇದಕ್ಕಿತ್ತು. ಮೇಲಾಗಿ ನಮ್ಮ ಕೇರಿಗೆ ಇದು ತುಂಬ ಹತ್ತಿರದ ಸ್ಥಳ. ಆದರೆ ನಿರ್ಜನವಾದ ಪ್ರದೇಶ. ಇಲ್ಲಿಯೂ ಬಟ್ಟೆ ತೊಳೆಯಲು ಹೊರಟರೆ ಅವ್ವೆಯರೆಲ್ಲ ಸೇರಿಯೇ ಹೋಗುತ್ತಿದ್ದರು.

ಈ ಕೊಳ್ಳದಲ್ಲಿ ಬಟ್ಟೆ ತೊಳೆದಾದ ನಂತರ ನನ್ನವ್ವ ನನ್ನ ಮುಖ ತೊಳೆಯುವೆನೆಂದು ಕರೆದು ಮೈಯೆಲ್ಲವನ್ನೂ ತೊಳೆದು ಬಿಡುತ್ತಿದ್ದಳು. ಸ್ನಾನ ಮುಗಿಸಿ, ಕೊಳ್ಳದ ಕಮಾನು ದಾಟಿ ಹೊರಗೆ ಬರಬೇಕಾದರೆ ನನ್ನ ಕಪ್ಪನೆಯ ಮೈ ಬಣ್ಣ ಬದಲಾಗಿ ಕಂದು ಬಣ್ಣಕ್ಕೆ ತಿರುಗಿರುತ್ತಿತ್ತು. ಈ ರೀತಿ ಬಣ್ಣ ಬದಲಾಗಲು ಕಾರಣ ಕರಕುಬುರುಕಾದ ಕಲ್ಲಿಂದ ಮೈಯನ್ನು ತಿಕ್ಕಿ ತಿಕ್ಕಿ ತೊಳೆಯುತ್ತಿದ್ದಳು. ಬೆರಳ ಸೇಮಿಗೆಯಂತೆ ಸುರುಳಿ ಕಟ್ಟಿ ಬರುವ ಮೈಯಲ್ಲಿನ ಮಣ್ಣು, ತಾಯಿಗೆ ಸಿಟ್ಟು ತರಿಸುತ್ತಿತ್ತು. ಕಲ್ಲಿನಿಂದ ತಿಕ್ಕುವಾಗ ನನ್ನ ಮೈ ಉರಿದು ರೋದನ ಹೆಚ್ಚಿದಾಗ ಸಿಟ್ಟು ಹೆಚ್ಚಿ ಕೈಯಲ್ಲಿರುವ ಕಲ್ಲಿಂದಲೇ ಪೂಜೆಯಾಗುತ್ತಿತ್ತು. ನನ್ನ ಕಪ್ಪನೆಯ ಬಣ್ಣ ಬೆಳ್ಳಗಾಗಿಸಲು ಪ್ರಯತ್ನಿಸಿ ನನ್ನವ್ವ ಸೋಲುತ್ತಿದ್ದಳು. ಮೈ ತೊಳೆದಾಗ ಸ್ವಲ್ಪ ಬೆಳ್ಳಗೆ ಕಾಣುತ್ತಿದ್ದೆ. ನಂತರ ಮೂಲ ಬಣ್ಣ ಪ್ರತ್ಯಕ್ಷವಾಗುತ್ತಿತ್ತು. ಕೊನೆಗೂ ನಾನು ಬೆಳ್ಳಗಾಗಲಿಲ್ಲ. ಆ ಕಲ್ಲಿನ ತಿಕ್ಕುವಿಕೆಯ ಪರಿಣಾಮವಾಗಿ ಕೈ ಕಾಲು ಮೈ ಮೇಲೆಲ್ಲ ಕಪ್ಪನೆಯ ಬಿರುಸಾದ ಉದ್ದ ಕೂದಲುಗಳು ಬೆಳೆದುವೇ ವಿನಃ ನಾನೇನೂ ಬೆಳ್ಳಗಾಗಲಿಲ್ಲ.

ಆ ಕೊಳ್ಳದ ನೀರು ಎಲ್ಲೆಲ್ಲಿಂದ ಸಂಗ್ರಹಿಸಿಕೊಂಡು ಹರಿಯುತ್ತಿತ್ತು ಎನ್ನುವುದು ಅಂದು ನನಗೆ ಗೌಪ್ಯದ ವಿಚಾರವಾಗಿದ್ದರೂ ಇಂದು ಅದನ್ನು ಸ್ಮರಿಸಿಕೊಂಡರೆ ಹೇಸಿಗೆ ಎನಿಸುತ್ತದೆ. ಊರ ಜನಗಳ ಮನೆಯ ಒಳಚರಂಡಿಯ ನೀರು ಅದಾಗಿತ್ತು. ಹೀಗಾಗಿ ವರ್ಷವೆಲ್ಲ ಬತ್ತದ ಗಂಗೆಯಾಗಿ ಹರಿಯುತ್ತಿತ್ತು. ಒಮ್ಮೊಮ್ಮೆ ಬಟ್ಟೆ ತೊಳೆಯುವಾಗ "ಪ್ರಸಾದವೂ" ಬರುತ್ತಿತ್ತು. ಆಗ ಬಟ್ಟೆ ತೊಳೆಯುವುದನ್ನು ಬಿಟ್ಟು ಅದು ಮುಂದಕ್ಕೆ ಹೋಗಲು ದಾರಿ ಮಾಡಿಕೊಡುತ್ತಿದ್ದರು. ಆದರೆ ನಮ್ಮ ಅವ್ವೆಯರಿಗೆ ಅದು ಗುಡ್ಡದ ನೀರು ಎನ್ನುವ ಭ್ರಮೆ! ಇಂಥ ಒಳಚರಂಡಿಯ ನೀರಿನಲ್ಲಿ ನೀವು ಸ್ನಾನ ಮಾಡಿದ್ದೀರಾ? ಬಟ್ಟೆ ತೊಳೆದಿದ್ದೀರಾ? ಅವೇ ನೀರು ಬಾಯಿಯಲ್ಲಿ ಹಾಕಿಕೊಂಡು ಹಲ್ಲುಜ್ಜಿದ್ದೀರಾ?

l

l

# ಸತ್ತ ಕುರಿಗಳು ಮತ್ತು ಮಾಂಸದ ಮಾರಾಟ

ಹತ್ತಾರು ಮಾಂಸದ ಗುಪ್ಪೆಗಳು. ಈ ಗುಪ್ಪೆಗಳನ್ನು ಈಚಲದ ಪೊರಕೆಯಿಂದ ಹೆಣೆದ ಚಾಪೆಯ ಮೇಲೆ ಹಾಕಲಾಗಿತ್ತು. ನನ್ನ ಮಾವ ಕೆಲಸದಿಂದ ಸ್ವಲ್ಪ ಬಿಡುವಿಗಾಗಿ ಹೊರಗೆ ಹೋದಾಗ ಅಲ್ಲಿ ನನ್ನದೇ ದರ್ಬಾರು. ಹೊರಗೆಂದರೆಲ್ಲಿ ಗೊತ್ತೆ? ಪೂರ್ತಿಯಾಗಿ ಊರ ಹೊರಗೆ, "ಕಂಟ್ರಿ ದಾರು" ತಯಾರು ಮಾಡಿ ಮಾರುವ ಸ್ಥಳಕ್ಕೆ.

ಕುರಿ ಕಾಯುವ ಕುರುಬರು, ಸತ್ತ ಕುರಿಯನ್ನು ಎಸೆಯದೆ ಭದ್ರವಾಗಿ ಮಾವನಿಗೆ ತಂದೊಪ್ಪಿಸಿ ಎಷ್ಟು ಸಾಧ್ಯವೋ ಅಷ್ಟು ಹಣ ವಸೂಲು ಮಾಡಿಕೊಂಡು ಹೋಗುತ್ತಿದ್ದರು. ಮೊದಮೊದಲು ಸತ್ತ ಕುರಿಯನ್ನು ಬಿಟ್ಟಿಯಾಗಿಯೇ ಕೊಟ್ಟು, ಅದರ ಚರ್ಮದ ಹಣವಷ್ಟೇ ತೆಗೆದುಕೊಂಡು ಹೋಗುತ್ತಿದ್ದರು. ಸತ್ತ ಕುರಿಯ ಮಾಂಸ ಮಾರಿ ಹಣ ಸಂಪಾದನೆ ಮಾಡುತ್ತಿದ್ದಾನೆ ಎನ್ನುವುದನ್ನು ಅರಿತ ಅವರು, ಸತ್ತ ಕುರಿಯನ್ನು ಹಣಕ್ಕೆ ಮಾರಲು ಪ್ರಾರಂಭಿಸಿದರು. ಮಾವ ಹಣ ಕೊಡುವುದಿಲ್ಲ ಎಂದರೆ ಮಾವನಿಗೆ ಪ್ರತಿಸ್ಪರ್ಧಿಯಾಗಿ ವೆಂಕಪ್ಪನೂ ಇದೇ ಕೆಲಸ ಮಾಡುತ್ತಿದ್ದ.

ಚಿಕ್ಕವನಾಗಿದ್ದಾಗ ಮಾಂಸ ಮಾರಾಟದ ಸಂದರ್ಭದಲ್ಲಿ ನನ್ನ ಕೆಲಸಗಳೆಂದರೆ ಮಾವ ಕುರಿಯ ಚರ್ಮವನ್ನು ಸುಲಿಯುವಾಗ ಚರ್ಮಕ್ಕೆ ನೀರು ಹಾಕುವುದು. ಅನಂತರ ಕುರಿಯ ದೇಹದಲ್ಲಿ ಇರುವ ಕರಳು, ಪಚ್ಚೆ, ಕರ್ಚಿನ ಚೀಲ, ಕಲೆಜಾ, ಗುರದಾ ಇವುಗಳನ್ನೆಲ್ಲಾ ತೊಳೆದು ಸ್ವಚ್ಛವಾಗಿಸುವುದು. ಇದರಲ್ಲಿ ನನ್ನಣ್ಣನದು ಪಳಗಿದ ಕೈ. ಕುರಿಗಳು ದೊಡ್ಡವಾಗಿದ್ದರೆ ತೊಳೆಯುವುದೇನು ತೊಂದರೆಯಾಗುತ್ತಿರಲಿಲ್ಲ. ಸಣ್ಣ ಮರಿಗಳ ಕೆಲಸ ಬಂದರೆ ತೊಂದರೆಯಾಗುತ್ತಿತ್ತು. ಅತೀ ಚಿಕ್ಕದಾಗಿರುವ ಕರಳುಗಳ ಒಳಗೆ ನೀರು ಹಾಕಿ ಗೀರಿ ಗೀರಿ ಆ ಕರುಳಿನಲ್ಲಿರುವ ಮಲ ಹೊರಕ್ಕೆ ತೆಗೆಯುವುದೆಂದರೆ ತಾಳ್ಮೆಗೊಂದು ಸವಾಲಿನ ಕೆಲಸ. ಅದು ಈಗ ನೆನೆಸಿಕೊಂಡರೆ ಅಯ್ಯೋ ಎಂದು ಹೇಸಿಕೆ ಎನಿಸುತ್ತದೆ. ಇಬ್ಬರಿದ್ದರೆ ಕೆಲಸ ಸ್ವಲ್ಪ ಸರಳವಾಗುತ್ತಿತ್ತು. ಒಬ್ಬಾತ ಹಾಕಿದರೆ ಇನ್ನೊಬ್ಬ ಸಲೀಸಾಗಿ ಕರುಳಲ್ಲಿರುವ ಮಲ ಹೊರಕ್ಕೆ ತೆಗೆಯಬಹುದು.

ಈ ಕೆಲಸ ಕುಳಿತಲ್ಲಿಯೇ ನಡೆಯುತ್ತಿತ್ತು. ಕರುಳುಗಳಲ್ಲಿಯ ಮಲ ಬೆರಳಿಂದ ಗೀರಿದ ಹಾಗೆ ಮುಂದಿನ ಕರುಳಲ್ಲಿ ಸಂಗ್ರಹಿಸಿ ಊದಿಕೊಳ್ಳುತ್ತ ಹೋಗುತ್ತಿತ್ತು. ಕರುಳು ಕೈಯಲ್ಲಿ ಉದ್ದಾದ ಹಾಗೆ ಹಿಡಿದುಕೊಂಡು ಎದ್ದು ನಿಲ್ಲಬೇಕು. ಎಲ್ಲಲೊ ನೋಡುತ್ತ

ಕರುಳು ಒತ್ತುತ್ತಿರುವಾಗ ಕೊನೆಗೆ ತುದಿಗೆ ಬಂದದ್ದು ಗೊತ್ತೇ ಆಗದ ಕರುಳ ಒಳಗಿರುವ ಮಲ "ಭುದುಗ್ಗ್‌ನೇ" ಜಿಗಿದು ಹೊರಕ್ಕೆ ಬರುತ್ತಿತ್ತು. ಆಗ ನೀರು ಹಾಕಲು ಕೆಳಗೆ ಕುಳಿತವನ ತಲೆ, ಮುಖ, ಮೈಯೆಲ್ಲಾ ಅಭಿಷೇಕವೇ! ನಿಂತು ಒತ್ತುವವ ಕೆಲವೊಮ್ಮೆ ಕರುಳಿಗೆ ಮುಳ್ಳೋ ಕಡ್ಡಿಯೋ ಚುಚ್ಚಿ ರಂಧ್ರ ಮಾಡಿದಾಗ ಮಲ ಚಿಲ್ಲನೇ ಚಿಮ್ಮುತ್ತಿತ್ತು. ಆಗ ಮುಂದೆ ಕುಳಿತವನ ಬಾಯಿ, ಮುಖ ಎಲ್ಲವೂ ತುಂಬುತ್ತಿತ್ತು.

ಹೀಗೆ ಕೆಲಸದಲ್ಲಿಯೇ ಆಟವು ನಡೆಯುತ್ತಿತ್ತು. ಆ ಮಲದ ದಡ್ಡಿಯ ವಾಸನೆ ಸಹಿಸಿ ಸಹಿಸಿ ಮೂಗು ಹೊಸ ಗಾಳಿಯ ವಾತಾವರಣವನ್ನೇ ಮರೆತಿತ್ತು. ಎಷ್ಟೋ ಬಾರಿ ನೀರು ಹಾಕುವವನೇ ಮುಳ್ಳಿನಿಂದ ತೂತು ಮಾಡಿ ಕರುಳಿಂದ ಮಲ ಒತ್ತುವಾಗ ಜಾಗೃತನಾಗಿರುತ್ತಿದ್ದ. ಅವನು ತಪ್ಪಿಸಿಕೊಂಡರೂ ಗೀರುವಾಗ ಕೈ ಬಿಡುವದಾದರೂ ಹೇಗೆ? ಆಗ ಆ ಕರುಳನ್ನೇ ಹಿಡಿದುಕೊಂಡು ದಡ್ಡಿಯ ತುಂಬೆಲ್ಲಾ ಓಡಾಡಿ, ಅವನ ಮೈಮೇಲೆ ಎರಚುವಂತಹ ಕೆಲಸ ನಡೆಯುತ್ತಿತ್ತು. ಹೀಗೆ ಆ ಕುರಿಯ ಮಲ, ಕರುಳುಗಳೊಂದಿಗೆ ನಡೆದ ಚೆಲ್ಲಾಟ, ಮಾವ ನೋಡಿದರೆ ಬೈದು ಬಿಡಿಸಿ ಬಿಡುತ್ತಿದ್ದ.

ದಡ್ಡಿಯಲ್ಲಿ ಹೆಚ್ಚು ಜನಗಳಿಗೆ ಬಿಡುತ್ತಿರಲಿಲ್ಲ. ಕುರಿಯ ಗುದದ್ವಾರದ ಕರುಳಿನ ಭಾಗ (ಪೇರುಗಳು) ಸ್ವಲ್ಪ ಅಗಲವಾಗಿರುತ್ತಿತ್ತು. ಅದನ್ನು ಎರಡೂ ಕೈಯಿಂದ ಹಿಗ್ಗಿಸಿ, ಬಾಯಿ ತುಂಬಾ ನೀರು ತುಂಬಿಕೊಂಡು, ಕರುಳಿನ ಗುದದ್ವಾರಕ್ಕೆ ಹಿಡಿದು ಪಿರ್ ರ್...... ಎಂದು ಬಾಯಿಯಲ್ಲಿಯ ನೀರನ್ನು ಅದರಲ್ಲಿ ಬಿಟ್ಟು, ಕರಳು ಹೀರಿ ಹೀರಿ ಅದರಲ್ಲಿರುವ ಮಲ ಹೊರಕ್ಕೆ ತೆಗೆಯುವ ಕೆಲಸವೂ ನಡೆಯುತ್ತಿತ್ತು.

ಮಾಂಸದ ಗುಪ್ಪೆಗಳು ಕೈ ತೂಕದಲ್ಲಿ ಹಾಕಲಾಗುತ್ತಿತ್ತು. ಮಾವ ಎಲ್ಲಾದರೂ ಹೋದರೆ ನಾನೇ ಅಲ್ಲಿಯ ಮಾಲೀಕ. ಗುಪ್ಪೆ ದೊಡ್ಡದಿದ್ದರೆ ಎಂಟು ಆಣೆ. ಚಿಕ್ಕದಿದ್ದರೆ ನಾಲ್ಕು ಆಣೆಗೆ ಮಾರಲಾಗುತ್ತಿತ್ತು. ತೆಗೆದುಕೊಂಡು ಹೋಗುವವರೆಂದರೆ ನಮ್ಮ ಕೇರಿಯಲ್ಲಿ ಇರುವ ಜನಗಳೇ. ಮಾದಿಗರು ಮಾಚಗಾರರು ಸಮಗಾರರು, ಹೆಚ್ಚೆಂದರೆ ಲಂಬಾಣಿಗರು. ಮಾರಾಟ ಮಾಡುವಾಗ ಹೆಚ್ಚಿನ ಶ್ರಮವೆಲ್ಲಾ ನೊಣ ಓಡಿಸುವುದಕ್ಕೇ ಹೋಗುತ್ತಿತ್ತು. ನೊಣವೆಂದರೆ ಒಂದೇ ಎರಡೇ? ನೊಣದಲ್ಲಿಯೇ ಎಷ್ಟು ಜಾತಿ ನೊಣಗಳವು! ಸದಾ ನಮ್ಮ ಕಣ್ಣೆದುರಿಗಿದ್ದ ನೊಣಗಳು, ಕುಡ್ಡು ನೊಣಗಳು, ಹಸಿರು ನೊಣಗಳು, ದೊಣ್ಣೆ ನೊಣಗಳು........ ಇವು ಓಡಿಸುವಾಗ ಬೇಸರವಾಗಿ, ಸಿಟ್ಟು ಬಂದು ಅಂಗೈಯಿಂದಲೇ "ಪಿಚಕ್" ಎಂದು ಹೊಡೆದು ಆ ಮಾಸಂದ ಗುಪ್ಪೆಗಳ ಮಧ್ಯದಲ್ಲಿಯೇ ಕೊಂದು ಬಿಡುತ್ತಿದ್ದೆ. ಚಾಪೆಗೆ ಅಂಟಿದ ಕುರಿಯ ರಕ್ತ, ಜೊತೆಗೆ ಈ ನೊಣದ ರಸಿಕೆ ಸೇರಿ ಹೋಗುತ್ತಿತ್ತು.

ನಾನೇ ಮಾಲೀಕನಾಗಿ ಕುಳಿತಾಗ ಸ್ವಾರಸ್ಯಕರವಾದ ಘಟನೆಗಳು ನಡೆಯುತ್ತಿದ್ದವು. ಮಾಂಸದ ಗುಪ್ಪೆ ತೆಗೆದುಕೊಂಡು ಹೋಗಲು ಬಂದವರು ಇವನೇನು ಚಿಕ್ಕವನೆಂದು ಹಾಗೆ

ಹೀಗೆ ಎಂದು ಮಾತನಾಡಿಸುತ್ತ, ಒಂದರೊಳಗೆ ಇನ್ನೊಂದು ಗುಪ್ಪೆ ಸೇರಿಸಿ ಎತ್ತಿಕೊಳ್ಳುತ್ತಿದ್ದರು. ಅದು ನನ್ನ ಕಣ್ಣಿಗೆ ಬಿದ್ದರೆ ಕೋಲಾಹಲವೇ ಆರಂಭ. ನನ್ನ ಮಾತಿಗೆ ಅವರು ಬೆಲೆ ಕೊಡದಿದ್ದರೆ ಅತ್ತು ಬಿಡುತ್ತಿದ್ದೆ. ನಾನು ಅಳುವುದೆಂದರೆ ಅವರಿಗೆ ಚೆಲ್ಲಾಟ. ಕೆಲವೊಮ್ಮೆ ಅವರು ಮೊದಲು ನನಗೆ ಬೆದರಿಸುತ್ತಿದ್ದರು. ನಾನು ಇನ್ನೂ ಗಟ್ಟಿಯಾಗಿ ನಾಗಸ್ವರದ ದನಿ ತೆಗೆದಾಗ, ಅಯ್ಯೋ ಸುಮ್ನೆ ಮಾಡಿದೆ ಎಂದು ದನಿ ಬದಲಾಯಿಸುತ್ತಿದ್ದರು. ಇನ್ನೂ ಕೆಲವರು ಹಣ ಕೊಡದೇ ಓಡಿಹೋಗುವುದಕ್ಕೆ ಹವಣಿಸುತ್ತಿದ್ದರು. ಹಣ ಕೊಟ್ಟಿರುವುದಾಗಿ ವಾದ ಹಾಕುತ್ತಿದ್ದರು. ಮಾಂಸ ಕೊಳ್ಳುವ ಮನುಷ್ಯರ ಕಾಟ ಹೀಗಾದರೆ, ಮನುಷ್ಯರನ್ನು ಕಾಯುತ್ತ ಅಲ್ಲಿರುವ ನಾಯಿ, ಬೆಕ್ಕು, ನೊಣಗಳನ್ನು ಕಾಯುವುದು ಮತ್ತೊಂದು ಕೆಲಸ. ಕೈಗಳೊ ಎರಡೇ, ಕಣ್ಣುಗಳೂ ಎರಡೇ, ಎಷ್ಟು ಜಾಗರೂಕತೆಯಿಂದ ಕಾರ್ಯ ನಿರ್ವಹಿಸಿದರೂ ಒಂದು ಗುಪ್ಪೆಯಾದರೂ ಮಂಗಮಾಯವಾಗಿರುತ್ತಿತ್ತು. ಮಾವ ಹೋಗುವಾಗಲೇ ಇಷ್ಟು ಗುಪ್ಪೆ ಇವೆ ಎಂದು ಎಚ್ಚರಿಕೆ ಕೊಟ್ಟು, ಹಿಂದೆ ಆಗಿ ಹೋದ ಘಟನೆಯನ್ನೂ ನೆನಪಿಸಿ ಜಾಗೃತವಾಗಿರಲು ಹೇಳಿ ಹೋಗುತ್ತಿದ್ದ. ಹಣ ಕೊಡದೆ ಯಾರಾದರೂ ಹಾಗೆಯೇ ಗುಪ್ಪೆಯನ್ನು ತೆಗೆದುಕೊಂಡು ಹೋಗಿದ್ದರೆ "ನೆಪ್ಪ ಮಾಡಕೊರೋ" ಎಂದು ನೆನಪಿಸಲು ಕಾಲಾವಕಾಶ ಕೊಡುತ್ತಿದ್ದ.

ನನ್ನ ದೊಗಲಂ ಪೊಗಲಂ ಪೊಲೀಸ್ ಚೊಣ್ಣ. ಆ ಚೊಣ್ಣದ ಕಂಬರ್‌ನಲ್ಲಿ ನನ್ನಂಥವರು ಸಲೀಸಾಗಿ ಮೂರು ಜನ ಸೇರಬಹುದಿತ್ತು. ಸಣಬು ಹಾಕಿ ಇಲ್ಲವೇ ಸೀರೆಯ ದಡಿ ಹಾಕಿ ನಡಕ್ಕೆ ಬಿಗಿದು ಕಟ್ಟುವ ವಾಡಿಕೆ. ಮಾಂಸದ ಗುಪ್ಪೆಯನ್ನು ಮಾರಲು ತುದಿಗಾಲ ಮೇಲೆ ಕುಳಿತಾಗ ಈ "ದೊಗಲಂ ಪೊಗಲಂ" ಚೊಣ್ಣ ಇಳಿದು ಬೀಳುತ್ತಿತ್ತು. ಮಾಂಸವನ್ನು ತೆಗೆದುಕೊಳ್ಳಲು ಬಂದವರ ದೃಷ್ಟಿ ನನ್ನ ಚೊಣ್ಣದ ಮೇಲೇಕೆ ಹೋಗುತ್ತಿತ್ತೋ!

"ಲೇ ತಮ್ಮ ಗುಂಪಿ ಏನ ಕಾಯತಿಲೇ?

ಮೊದಲು ನಿನ್ನ ಚೊಣ್ಣದಾಗಿನ ಕಪ್ಪಿ ಕಾಯಿ" ಎನ್ನುತ್ತಿದ್ದರು.

ಅವರು ಹೀಗೆಂದಾಗ ನಾನು ನಾಚಿ ನೀರಾಗುತ್ತಿದ್ದೆ.

ಇಷ್ಟು ಕೆಲಸ ಮಾಡಿದ್ದಕ್ಕೆ ಮಾವ ನನಗೆ ಕೊಡುವುದೇನು ಗೊತ್ತೆ? ಕರುಳಿನ ಕೆಲ ಭಾಗ ಹಾಗೂ ಜಠರದ ಕೆಲಭಾಗ. ಕರುಳಿಗೆ ಉಪ್ಪು ಅರಿಸಿಣ ಹಚ್ಚಿ ತಂತಿಗೆ ಹಾಕಿ ಸುಟ್ಟು ತಿನ್ನುವುದೆಂದರೆ ನನಗೆ ಹೆಚ್ಚು ಇಷ್ಟ. ನನ್ನ ಅಜ್ಜಿಗೂ ಅಷ್ಟೇ ಇಷ್ಟ. ಅದನ್ನು ಕಲಿಸಿದವಳೂ ನನ್ನಜ್ಜಿಯೇ. ನನ್ನ ಅಣ್ಣ ಕೋಳಿಯ ಕರಳನ್ನು ಶುದ್ಧಗೊಳಿಸಿ ಸುಟ್ಟು ತಿನ್ನುವುದರಲ್ಲಿ ಚತುರ. ಒಬ್ಬೊಬ್ಬರು ಒಂದೊಂದು ಕೆಲಸದಲ್ಲಿ, ರುಚಿಯಲ್ಲಿ ಚತುರತೆಯನ್ನು ಪಡೆದುಕೊಂಡಿದ್ದೆವು. ಮನೆಯವರಿಗೆಲ್ಲಾ ಬೇಯಿಸಿ ಸಾರು ಮಾಡಿ ತಿನ್ನುವುದೆಂದರೆ ಇಷ್ಟ. ಆದರೆ ತಂದೆಯವರಿಗೆ ಇದು ಆಗುತ್ತಿರಲಿಲ್ಲ. ಅವರು ವಾರಕ್ಕೊಮ್ಮೆ ಊರಿಂದ

ಬರುವುದರಿಂದ ಆಗ ತಂದೆಯವರ ದರ್ಬಾರಿನಲ್ಲಿ ಅಂಗಡಿಯಿಂದ 2-3 ಕೆ.ಜಿ. ಹೊತ್ತು ತರುತ್ತಿದ್ದರು. ಆಗ ನಾನೂ ಆ ಮಾವನ ಮನೆಗೆ ಇಣುಕಿ ಕೂಡ ನೋಡುತ್ತಿರಲಿಲ್ಲ! ಆದರೆ ಈಗ ಮಾಂಸದ ಮೇಲಿನ ಹಂಬಲ ಇಳಿದು ಹೋಗಿದೆ ಯಾಕೆ ಎಂದು ಚಿಂತಿಸಲು ಅವಕಾಶ ಸಿಕ್ಕಿಲ್ಲ.

ಈ ಮಾವನ ಅಂಗಡಿ ದಿನವೂ ತೆರೆಯುವಂತಹದ್ದಲ್ಲ. ವಾರಕ್ಕೆ ಒಮ್ಮೆ ಅಥವಾ ತಿಂಗಳಿಗೆ ಒಮ್ಮೆ ಇಲ್ಲವೇ ಒಂದೇ ವಾರದಲ್ಲಿ ಒಮ್ಮೊಮ್ಮೆ ಎರಡು ಮೂರು ಬಾರಿ ತೆರೆಯುವ ಭಾಗ್ಯ ಬರುತ್ತಿತ್ತು. ಈ ಭಾಗ್ಯ ಕುರುಬರೇ ಕಲ್ಪಿಸಿಕೊಡಬೇಕು. ಇಲ್ಲವೇ ಊರಲ್ಲಿ ಇನ್ಯಾರದಾದರೂ ಪ್ರಾಣಿ ಸತ್ತಿರಬೇಕು. ಅಂದಾಗ ಮಾತ್ರ ಈ ಚಾಪೆಯ ಅಂಗಡಿ ತೆರೆಯುತ್ತಿತ್ತು.

ಅದೊಂದು ವಿಶೇಷವಾದ ದಿನವೇ ಎನ್ನಬೇಕು. ಅಂದು ಎಲ್ಲ ಗುಪ್ಪೆಯ ಸಾಲುಗಳು ಬೇಗನೆ ಮಾರಾಟವಾಗಿದ್ದವು. ಮಾವ ಎಲ್ಲೋ ಹೊರಟು ಹೋಗಿದ್ದ. ಒಬ್ಬ ಠಾಕು ಟೀಕಾಗಿರುವ ವ್ಯಕ್ತಿ ಮನೆಯ ಹತ್ತಿರಕ್ಕೆ ಬಂದ.

"ಏ ಹುಡುಗಾ ಕುರಿ ಬಂದಿತ್ತೇನೋ? ಇವತ್ತ" ಎಂದ

"ಏ ಪಾಲಾ ಮುಗದಾವುರ್ರಿ" ಎಂದೆ ಅನುಮಾನದಿಂದ.

ಏಕೆಂದರೆ ಇಂಥವರು ಸತ್ತ ಕುರಿಯ ಪಾಲು ತಿನ್ನುತ್ತಾರೆಯೇ! ಎನ್ನುವ ಆಶ್ಚರ್ಯ ನನಗೆ. ಈ ವೀರಶೈವದವರ ಮನೆಯ ಆಳು ಊರ ವಾಲಿಕಾರನೊಂದಿಗೆ ಬಂದಿದ್ದ.

ನಿಮ್ಮ ಮಾವ ಎಲ್ಲಿ? ಆತನ ಮುಂದಿನ ಪ್ರಶ್ನೆ

"ಹೊರಗೆ ಹೋಗ್ಯಾರ್ರಿ, ಬರ್ತಾರೆ" ಎಂದೆ.

ಸ್ವಲ್ಪ ಹೊತ್ತು ಕಳೆದಾದ ಮೇಲೆ ಕೈಯಲ್ಲಿ ಎರಡು ದುಡ್ಡು (ಮೂರು ಪೈಸೆ) ಕೊಟ್ಟು "ಚಕಲಿ" (ಚಕ್ಕುಲಿ) ತಗೊಂಡ ಬಾ ಎಂದ. ಚಕ್ಕುಲಿ ಎಂದರೆ ಯಾರ ಬಾಯಿಯಲ್ಲಿ ನೀರು ಬರುವುದಿಲ್ಲ? ಹಣ ಕೊಟ್ಟದ್ದೇ ತಡ, ನನ್ನ ಬಾಯಿಯ ಮೋಟಾರ್ ಸ್ಟಾರ್ಟ್ ಮಾಡಿ ಓಡಿದೆ. ಚಕ್ಕುಲಿ ತಂದು ಅವರ ಕೈಗೆ ಕೊಡ ಹೋದರೆ "ಅವೆಲ್ಲಾ ಚಕಲಿಯ ಕಡಗಗಳು ನನಗೆ" ಎಂದು ಹೇಳಬೇಕೆ ಆತ! ತರುವಾಗ ನಾನಂದುಕೊಂಡದ್ದು ಅದರಲ್ಲಿ ನನಗೊಂದು ಇಲ್ಲವೇ, ಕೊನೆ ಪಕ್ಷ ಅರ್ಧವಾದರೂ ಸಿಗಬಹುದು ಎಂದು ಊಹಿಸಿದ್ದೆ. ಈಗ ನೋಡಿದರೆ ಇವರು ಎಲ್ಲ ನನಗೇ ಎನ್ನುತ್ತಿದ್ದಾರೆ! ಹಿಡಿಸಲಾಗದ ಆನಂದ - ಮುಜುಗರ, ಎರಡೂ ಸೇರಿ ಹೋದವು. ಆತ ಮತ್ತೆ ಪ್ರಶ್ನಿಸಿದ.

"ತೊಗಲು ಯಾವ ಮಂಡ್ಯಾಗ ಕೊಟ್ಟಿದ್ದಿ?"

(ಆಡಿನ ತೊಗಲು, ಯಾವ ಅಂಗಡಿಯಲ್ಲಿ ಮಾರಾಟ ಮಾಡಿದೆ) ಎಂದ.

"ಮುಲ್ಲಾ ಸಾಬರ ಮಂಡ್ಯಾಗ"

"ಮಂಡಿ ಎಲ್ಲಿದೆ ತೋರ್ಸ್ತೀಯಾ?"

"ಹೂಂ" ಎಂದು ನಾನು ತೋರಿಸಲು ಹೊರಟೆ.

ಮುಲ್ಲಾ ಸಾಹೇಬರು ಮಹಾ ವ್ಯಾಪಾರಸ್ಥ ಮನುಷ್ಯ. ಸುಲಿದ ತೊಗಲು ಕೊಡುವುದಕ್ಕೆ ಹೋದರೆ, ಬಂದವರಿಂದಲೇ ಆ ತೊಗಲು ಹೊರಳಿಸಿ ಹೊರಳಿಸಿ ತೋರಿಸಲು ಹಚ್ಚುತ್ತಿದ್ದ. ಈ ಅಂಗಡಿ ಸ್ವಲ್ಪ ದೂರಿತ್ತು. ಅದಕ್ಕೆ ಅರಿವೆಯಲ್ಲಿ ತೊಗಲನ್ನು ಕಟ್ಟಿ ತಲೆ ಮೇಲೆ ಹೊತ್ತು ಹೋಗಬೇಕಾಗುತ್ತಿತ್ತು. ಅದರಿಂದ ರಕ್ತದ ನೀರು ನಿಧಾನವಾಗಿ ಬಸಿದು, ತಲೆ ಮೇಲಿಂದ ಸೋರಿ ಕೆಳಕ್ಕೂ ಇಳಿಯುತ್ತಿತ್ತು. ಬಿಸಿಲಿದ್ದರೆ ಬೆವರು ಬೇರೆ ಸೇರಿ ಇಳಿದು ಬಂದ ಬೆವರು ನಾಲಿಗೆಗೆ ರುಚಿ ತೋರಿಸುತ್ತಿತ್ತು. ಒಂದು ತೊಗಲಿಗೆ ಮೂರು ರೂಪಾಯಿಂದ ಎಂಟು ರೂಪಾಯಿಯವರೆಗೆ ಆಗ ಬೆಲೆ ಇತ್ತು ಎಂದು ತೋರುತ್ತದೆ. ತೊಗಲಿಗೆ ಸ್ವಲ್ಪ ಮಧ್ಯದಲ್ಲಿ ರಂಧ್ರ ಬಿದ್ದಿದ್ದರೆ ಅದಕ್ಕೆ ಅರ್ಧಕ್ಕರ್ಧ ಬೆಲೆ ಕಡಿಮೆ ಮಾಡುತ್ತಿದ್ದ! ಅದಕ್ಕಾಗಿ ತೊಗಲು ಅವನಿಗೆ ಬಿಚ್ಚಿ ತೋರಿಸಬೇಕು. ಮತ್ತೆ ಕೊನೆಗೆ ಮೂಲೆಯಲ್ಲಿ ಇದ್ದ ಉಪ್ಪಿನ ಡಬ್ಬಿ ಎತ್ತಿ ತೊಗಲಿಗೆ ಉಪ್ಪು ಸವರಿ ಮಡಚಿ ಬೇರೆಡೆಗೆ ಇಟ್ಟು ಹೋಗಬೇಕು.

"ಮಂಡಿಗೆ ತೊಗಲು ಯಾರು, ನೀನೇ ಕೊಟ್ಟು ಬಂದಿಯಾ?

ಎಂದ ಬಂದವರಲ್ಲೊಬ್ಬ.

ಇಲ್ಲ. ಹನುಮಂತ (ಮಾವನ ಮಗ)

"ಆ ತೊಗರ ಗುರ್ತ ಹಿಡಿತಿಯಾ?"

"ಹೋ" ಎಂದೆ

ಅಂಗಡಿಯಲ್ಲಿ ಮುಲ್ಲಾ ಸಾಹೇಬರೂ ಇರಲಿಲ್ಲ. ಅಲ್ಲಿಯೂ ನನ್ನದೇ ದರ್ಬಾರು ನಡೆಯಿತೆನ್ನಿ. ಐದಾರು ತೊಗಲುಗಳ ಮಧ್ಯದಲ್ಲಿ ಇದ್ದ, ತೊಗಲು ಗುರುತಿಸಿ ಹೊರ ತೆಗೆದು ತೋರಿಸಿದೆ. ಏಕೆಂದರೇ ಈ ಶೀಲವಂತರು ಒಳಗೆ ಬಂದಿರಲಿಲ್ಲ.

"ಹಾಂ ಹೌದು ಇದೆ" ಎನ್ನುತ್ತ

ಬಗ್ಗಿದವರು ತಕ್ಷಣವೇ ಸೆಟೆದು ನಿಂತರು. ಅವರ ಮುಖದ ಛಾಯೆಯೇ ಬದಲಾಯಿತು. ನನಗೆ ಏನೂ ಅರಿಯದಾಯಿತು. ನೇರವಾಗಿ ಅವರು ಏನೇನೂ ಹೇಳುತ್ತಾ, ಮಾತನಾಡಿಕೊಳ್ಳುತ್ತ ಮಾವನ ಮನೆಗೆ ಬಂದರು.

ನಮ್ಮ ಅತ್ತೆ (ಶರಣವ್ವ) ಗೋಡೆಗೆ ಮೇಲೆ ಕೌದಿಯನ್ನು ತಿರುವಿ ಹಾಕುವ ಕೆಲಸ (ಉಚ್ಚಿ ಹೊಯಿದಿದ್ದರಿಂದ ಕೌದಿ ಒದ್ದೆಯಾಗಿರುತ್ತಿದ್ದವು) ಮಾಡುತ್ತಿದ್ದಳು. "ಯಾರು? ಅಪ್ಪೋರೇನು?...... ಯಾರ ಬೇಕಾಗತ್ರಿ? ಅಂವಾ ಆ ಕಡಿ ಕೆಳಾಗ ಹೋಗಿರಬೇಕು......"

ಏನ ನಿಮ್ಮ ಮನ್ಯಾಗ ಕುರಿಗಿರಿ ಸತ್ತದೇನ್ರಿ? ಎಂದಳು.

"ಯಾವುದು ಸತ್ತಿದ್ದ ಕುರಿ, ಯಾವುದು ಸಾಯಲಾರದ ಕುರಿ ಅಂತ ತಿಳ್ಯೆಂಗಿಲ್ಲೇನು?"

"ಯಾಕ್ರಿಯಪ್ಪಾ ಏನಾಯಿತು?" ಅತ್ತಿಯ ಮಾತು.

ಏನಾಯಿತಾ? ಎಲ್ಲೈದಾನು ಅವನು? ಬಂದ ಮ್ಯಾಲ ಕೇಳು ಹೇಳುತಾನ ಎಂದರು. ಅತ್ತೆ ನನ್ನ ಮುಖ ನೋಡಿದಳು, ನಾನು ಮುಖ ಕೆಳಕ್ಕೆ ಹಾಕಿ ಮನೆಗೆ ಓಡಿದೆ. ಅಷ್ಟರಲ್ಲಿಯೇ ಹೊರಗಡೆ ಹೋದ ಮಾವ ಬಂದ. ಗಲಾಟೆ ಹೆಚ್ಚಾಯಿತು. ಅವರೆಲ್ಲ ಅಲ್ಲಿಂದ ಹೊರಟು ಹೋಗುವವರೆಗೆ ನಾನೇನು ಹೊರಕ್ಕೆ ಬರಲಿಲ್ಲ.

ಚಕ್ಕುಲಿ ಕೊಡಿಸಿದ ವ್ಯಕ್ತಿಯ ಆಡು ಕಳೆದು ಹೋಗಿದೆ. ಆತ ಸಂದೇಹ ಬಂದು ಇಲ್ಲಿಗೆ ಬಂದ. ಮನೆಯಲ್ಲಿ ಅಂದು ಪಾಲು ಹಾಕಿದ ಆಡು ಅವರದೇ ಎನ್ನುವದರಲ್ಲಿ ಸಂದೇಹವೇ ಇರಲಿಲ್ಲ. ಕದ್ದು ತಂದವರು ಯಾರು? ನಮ್ಮ ಮಾವ? ಅಲ್ಲಾ ಆತ ಕೇವಲ ಸತ್ತ ಕುರಿಗಳನ್ನು ಕೊಂಡು ಮಾರುವವ. ಮನೆಗೆ ಒಬ್ಬಾತ ಬಂದಿದ್ದ. ಆತ ಗುಡ್ಡದಲ್ಲಿ "ಈ ಆಡಿನ ಕುತ್ತಿಗೆಗೆ ತೋಳ ಹಿಡಿದು ಸತ್ತು ಹೋಗಿದೆ" ಎಂದು ಹೇಳಿ ಹಣಕ್ಕೆ ಮಾರಾಟ ಮಾಡಿ ಹೋಗಿದ್ದ.

"ನೋಡ್ರಿ, ತಂದವ್ರು ಯಾರು ಅನ್ನೋ ಹೆಸರು ನನಗೆ ಗೊತ್ತಿಲ್ಲ" ಎಂದ ಮಾವ.

ಊರ ವಾಲೀಕಾರನೇ ಅಲ್ಲಿ ಬಂದಿರುವುದರಿಂದ ಅಂದು ನಮ್ಮ ಚಂದಪ್ಪ ಮಾವನ ಚಿಂದಾಬಂಧಿ ಹೇಳಲಸದಳವಾದುದು. ಗರುಡನ ಕಾಲಿಗೆ ಸಿಕ್ಕ ಇಲಿಯಂತಾಗಿದ್ದ. ಇಲಿಯ ಕಾಲಿಗೆ ಕಟ್ಟಿಕೊಂಡ ಕಪ್ಪೆಯಂತೆ ಕುರಿ ತಂದು ಕೊಟ್ಟ ವ್ಯಕ್ತಿಯ ರೀತಿಯಾಗಿದ್ದರೂ ಮಾವ ಕೊನೆಯವರೆಗೆ ಬಾಯಿ ಬಿಡಲಿಲ್ಲ. ಆದರೆ ಅವರಿಗೆ ದಂಡ ತೆತ್ತನೆಂದು ತೋರುತ್ತದೆ.

l

l

# ಹತ್ತಿ ಕದ್ದದ್ದು ಲಾಡು ತಿಂದದ್ದು

"ರಕ್ಕಸ ತಂಗಡಿಗಿಯ ಕಾಳಗ" ಇತಿಹಾಸ ಪ್ರಸಿದ್ಧವಾದ ಸ್ಥಳ ತಂಗಡಿಗಿ ಯಾರಿಗೆ ಗೊತ್ತಿಲ್ಲ? ತಂಗಡಿಗಿಯ ಆ ಟಾರ್ ರೋಡ್ ಮೇಲುಗಡೆ ಬಿದ್ದು ನಾನು ಒದ್ದಾಡುತ್ತಿದ್ದೆ. ಆತ ಒಂದೇ ಸಮನೆ ಬಾರುಕೋಲಿನಿಂದ ಸೆಳೆಯುತ್ತಲಿದ್ದ.

"ನಿನ್ನೆ ತಪ್ಪಿಸಿಕೊಂಡು ಓಡಿಹೋಗಿದ್ದೆ.

ಈವತ್ತು ಸಿಕ್ಕೆ................

ನಿಮ್ಮ ಹುಟ್ಟು ಗುಣ ಹ್ಯಾಂಗೆ ಬಿಟ್ಟೀರಿ?

ದನದ ಚರ್ಮಾ ಸುಲ್ದು ತಗ್ದಂಗ

ನಿಮ್ಮಾ ಚರ್ಮ ಸುಲ್ದು ತಗೀಬೇಕು, ಅಂದ್ರೆ ಬಿಡ್ತೀರಿ.........."

ಹೀಗೆ ದವಡೆ ಕಚ್ಚಿ ನಿಟ್ಟುಸಿರು ಬಿಡುತ್ತ ನಿನ್ನೆಯ ಸಿಟ್ಟನ್ನೂ ಆವತ್ತಿನ ಸಿಟ್ಟನ್ನೂ ಎರಡೂ ಸೇರಿಸಿ ಬಡ್ಡಿ ಸಮೇತವಾಗಿ ಚುಕ್ತಾ ಮಾಡುತ್ತಿದ್ದ.

ನನ್ನ ಆ ರೋದನದ ದನಿಗೆ ಹತ್ತಿಯ ಎಂಟು ದಿಂಡುಗಳನ್ನು ಹೇರಿಕೊಂಡು ನನ್ನ ಮುಂದೆ ನಿಂತಿದ್ದ ಚಕ್ಕಡಿಯ ಎತ್ತುಗಳು ಬೆದರಿ ಚಕ್ಕಡಿ ಎಳೆದುಕೊಂಡು ಮುಂದೆ ನಡೆದವು. ರಸ್ತೆ ಪಕ್ಕದ ಹೊಲದ ಗಿಡಗಳಲ್ಲಿ ಹತ್ತಿಯನ್ನು ಬಿಡಿಸುತ್ತಿದ್ದ ಹೆಂಗಸರು ಬಂದು

"ಅಯ್ಯಾ ಬಿಡ್ರೀ ಯಪ್ಪಾ ಬಿಡ್ರಿ, ಎಷ್ಟ ಹೊಡಿತೀರಿ

ಸತ್ತು ಗಿತ್ತಿತು.......

ಮೊದಲ ಸಣ್ಣ ಪಾರ್‍ಯೈತಿ.........."

ನೀ ಏನ ಹೇಳ್ತಿ ಬೇ..... ನಿಂದೇನ ಗಂಟು ಹೋಕ್ಕದ? ಹೋಗೋದು ನಮ್ಮದು? ಎಂದು ಉತ್ತರ ಕೊಡುತ್ತ ನನ್ನ ಹೊಟ್ಟೆಯ ಅಂಗಿಯ ಒಳಗಡೆ ಬಚ್ಚಿಟ್ಟುಕೊಂಡಿದ್ದ ಹತ್ತಿಯನ್ನು ಹಿಡಿದು ಹೊರಕ್ಕೆ ತೆಗೆದು.

ನೋಡಿದ್ಯಾ, ಅರ್ಧಾ ಕಿಲೋ ಹತ್ತಿ ಆಕೈತಿ

ಎಂದು ಹಲ್ಲು ಕಡಿಯುತ್ತಾ, ಆಗಲೇ ಸುಮಾರು ದೂರ ಹೋಗಿರುವ ಚಕ್ಕಡಿಯ ಕಡೆಗೆ ನಡೆದ. ಆದರೆ ಆತನ ಮಾತು ನನ್ನ ಅಳುವು ಎರಡು ನಿಂತಿರಲಿಲ್ಲ.

ನಾನು ಸಾವರಿಸಿಕೊಂಡು ಏಳುತ್ತಿದ್ದೆ. ಕಣ್ಣೀರಿನಷ್ಟೇ ಸಿಂಬಳವೂ ವೇಗವಾಗಿ ಹರಿಯುತ್ತಿತ್ತು. ಪಕ್ಕದಲ್ಲಿದ್ದ ಹೆಂಗಸರು ಸಾಂತ್ವನ ಜೊತೆಗೆ ಬುದ್ಧಿಯ ಮಾತು

ಹೇಳುತ್ತಿದ್ದರು. ನನ್ನೆಡೆಗೆ ಯಾರೋ ಓಡಿ ಬರುತ್ತಿದ್ದಂತೆ ಎನಿಸಿತು. ಕಣ್ಣೋರೆಸಿಕೊಂಡು ನೋಡಿದರೆ ಅದೇ ಆ ಚಕ್ಕಡಿಯ ಮನುಷ್ಯ! ನನ್ನ ಅಳುವು ಮತ್ತಷ್ಟು ಹೆಚ್ಚಾಯಿತು. ಎದ್ದು ನಿಂತವನು, ಅಲ್ಲೆ ನೆಲಕ್ಕೆ ಹಿಡಿದುಕೊಳ್ಳುವಂತೆ ಗಪ್ಪನೇ ನೆಲ ಹಿಡಿದು ಕುಳಿತು ಬಿಟ್ಟೆ. ಆತ ಬಂದವನ್ನೇ ನನ್ನ ಮುಂಗೈಯನ್ನು ಹಿಡಿದು ದರದರನೇ ಎಳೆದೊಯ್ಯ ತೊಡಗಿದ.

"ಯ್ಯೋ ಬಿಡ್ರಿ, ಹೊಡಿತನ ಹೊಡ್ದ ಮತ್ತ

ಎಳ್ದ ಒಯಿತ್ತೀರೆಲ್ಲಾ"

ಎಂದು ಆ ಹೆಂಗಸರು ಇನ್ನೊಂದೆಡೆಗೆ ಜಗ್ಗುತ್ತಿದ್ದರು. ಆತ ಎಳೆದೊಯ್ದು ಏನು ಮಾಡುತ್ತಾನೆ ಎನ್ನುವುದಕ್ಕಿಂತ ಮತ್ತು ಈ ಹೆಂಗಸರು ನನ್ನನ್ನು ಬಿಡಿಸಿಕೊಳ್ಳಬಹುದೋ ಇಲ್ಲವೋ ಎಂಬ ವಿಚಾರಕ್ಕಿಂತ-

"ನನ್ನ ಪಾಟಿ ಚೀಲ, ನನ್ನ ಅಳುವ ಧ್ವನಿಯ ಚೀರಾಟಕ್ಕೊ, ಆ ಹೆಂಗಸರ ಬೇಡಿಕೆಗಾಗಿಯೋ ಕೊನೆಗೆ ಆತ ನನ್ನನ್ನು ಬಿಟ್ಟು ಹೋದ. ಅಲ್ಲಿಂದೆದ್ದವನೇ ನಾನು ಗಿಡದ ಮರೆಯಲ್ಲಿ ಅಡಗಿಸಿಟ್ಟ ಚೀಲವನ್ನು ತೆಗೆದು ನೋಡಿದೆ. ಕಟ್ಟಿಗೆಯ ಕಟ್ಟೇ ಇಲ್ಲದ ಮಣ್ಣಿನ ಪಾಟಿ ಭದ್ರವಾಗಿತ್ತು. ಅದನ್ನು ಹೆಗಲಿಗೆ ಹಾಕಿದವನೇ ಓಡಲು ಆರಂಭಿಸಿದೆ. ಆತ ಮತ್ತೆ ಮರಳಿ ಬಂದು ನನ್ನನ್ನು ಎಳೆದೊಯ್ಯಬಹುದೆಂಬ ಭಯ ಆವರಿಸಿತ್ತು.

ಹೀಗಾಗುವುದಕ್ಕೆ ಕಾರಣವಿಷ್ಟೇ.

ಬೆಳಗು ಹೊಟ್ಟೆಗಿಲ್ಲದೆ ಶಾಲೆಗೆ ಹೋಗುವುದು (ಮನೆಯಲ್ಲಿ ತಿನ್ನಲು ಇದ್ದಾಗಲೂ). ಎಷ್ಟೋ ಬಾರಿ ಕಣ್ಣಿಗೆ ಬವಳಿ ಬಂದು ರಸ್ತೆಯಲ್ಲಿಯೇ ಬಿದ್ದದ್ದೂ ಇದೆ. ಹೊಲದ ಕೆಲಸಕ್ಕೆ ಹೋಗಿರುವ ನನ್ನ ತಾಯಿಗೆ ಈ ವಿಷಯ ತಿಳಿದಾಗ ಅವಳು ನನ್ನನ್ನು ಎದೆಗವಚಿ ಅತ್ತದ್ದು ಬೇರೆ ಮಾತುಗಳು.

ಶಾಲೆಗೆ ಹೋಗುವಾಗ ರಸ್ತೆಯಲ್ಲಿ ಒಂದು ಮಿಠಾಯಿಯ ಅಂಗಡಿ ಇತ್ತು. ಅದಕ್ಕೆ ನಾವು 'ಉಂಡಿ ಮುತ್ಯಾನಂಗಡಿ' ಎಂದು ಕರೆಯುವುದು ವಾಡಿಕೆ. ಹತ್ತಿಯನ್ನು ತಂದು ಕೊಟ್ಟರೆ ಈತ ಒಂದು ಚಿಕ್ಕ ಬೆಲ್ಲದುಂಡೆಯನ್ನು ಕೊಡುತ್ತಿದ್ದ. ಈ ಉಂಡಿಗಳು ಆಗ ದುಡ್ಡಿಗೆ ಮೂರು. ಬೊಗಸೆ ತುಂಬಾ ಕೊಟ್ಟ ಹತ್ತಿಗೆ ಈತ ಕೊಡುವುದು ಒಂದೋ ಅಥವಾ ಎರಡೋ ಉಂಡಿಗಳು.

"ನನಗೆ ಕರಿ ಉಂಡಿ ಬೇಡಾ

ಬಿಳಿ ಉಂಡಿ ಕೊಡ್ರಿ"

ಎಂದು ಅಂಗಲಾಚುತ್ತಿದ್ದೆ. ಆ ಅಂಗಡಿ ಸ್ವಲ್ಪ ಎತ್ತರದ ಕಟ್ಟೆಯ ಮೇಲಿತ್ತು. ಅದಕ್ಕೆ ಮೂರು ಮೆಟ್ಟಿಲುಗಳಿದ್ದವು. ಆ ಮೆಟ್ಟಿಲುಗಳು ನಮಗೇರುವುದಕ್ಕೆ ಅವಕಾಶ ಇರುತ್ತಿರಲಿಲ್ಲ. ನಾನು ಮೊದಲೆ ಆ ಅಂಗಡಿಯ ಕಟ್ಟೆಗಿಂತ ಚಿಕ್ಕವ. ಆತ ಹತ್ತಿಯನ್ನು

ತೆಗೆದುಕೊಳ್ಳಬೇಕಾದರೆ, ಅಂಗಡಿಯವ ಟೀಕಾ ಆಸನದ ಮೇಲೆ ಕೂತವನೆ ಚುರುಮುರಿ ಸೋಸುವ ಛಾಣಿಯ ಹಿಡಿಯನ್ನು ಹಿಡಿದು ಮುಂದಕ್ಕೆ ಚಾಚುತ್ತಿದ್ದ. ನಾನು ಅದರಲ್ಲಿ ಹತ್ತಿಯನ್ನು ಹಾಕಬೇಕು. ಅವನು ಛಾಣಿಯಿಂದಲೇ ಒಂದೆರಡು ಬಾರಿ ತೂಗಿ ನೋಡಿದವನಂತೆ ನಟಿಸಿ, ತನ್ನ ಅಂಗಡಿಯ ಮೂಲೆಯ ಹತ್ತಿಯ ರಾಶಿಗೆ ಎಸೆದು ಬಿಡುತ್ತಿದ್ದ. ಅಂದು ನಾನು ಮೆಟ್ಟಿಲುಗಳನ್ನೇರಿ ಬಿಳಿ ಉಂಡಿ ಎಂದು "ಬೋಂದೆ" ಲಾಡುಗೆ ಕೈ ಮಾಡಿ ತೋರಿಸಿ ಕೇಳಿದ್ದರಿಂದ

"ಏ ಮೊದಲು ಪಾವಟಿಗಿ ಮ್ಯಾಲಿಂದ ಕೆಳಗಿಳಿಯ"- ಎಂದು ಬೆದರಿಸಿದ. ಕೆಳಗಿಳಿದು ಬೊಗಸೆ ಅಥವಾ ಅಂಗಿ ಉಡಿಯೊಡ್ಡಿದಾಗ ಅದರಲ್ಲಿ ಎಸೆಯುತ್ತಿದ್ದ. ಬೊಗಸೆಯೊಡ್ಡಿದಾಗ ನೆಲಕ್ಕೆ ಬಿದ್ದ ಉಂಡೆಗಳು ಗುಂಡು ಉರುಳಿದಂತೆ ಉರುಳಿ ಹೋಗುತ್ತಿದ್ದವು. ಅಷ್ಟೇ ಮೋಜಿನೊಂದಿಗೆ ಅದನೆತ್ತಿಕೊಂಡು ಬಾಯಿಂದ ಊದಿ, ಆಗಲೂ ಮಣ್ಣು ಹೋಗದಿದ್ದರೆ ಅಂಗಿಗೆ ಒರೆಸಿಕೊಂಡು ತಿನ್ನುವ ಪದ್ಧತಿ.

ಬಿಳಿ ಉಂಡಿ ಕೇಳಿದ್ದರಿಂದ ಉಂಡಿ ಮುತ್ಯಾ ತನ್ನ ಬಲಗೈಯನ್ನು ಮುಂದೆ ಮಾಡಿ

"ತರೂದೇ ಈಟ ತರ್ರಿ, ಬೋಂದೆ ಲಾಡು ಹ್ಯಾಂಗ ಕೊಡ್ತಾರೋ"

ಈಗ ತಂದಿಯಲ್ಲಾ ಅದರ ಯಾಡ ಪಟ್ಟ ತೊಂಬಾ ಕೊಡ್ತಿನಿ ಎಂದ. ತನ್ನ ಅಂಗಡಿಯಲ್ಲಿ ಕುಳಿತಿದ್ದ ಮತ್ತೊಬ್ಬನಿಗೆ ನೋಡಿ ಮುಸಿಮುಸಿ ನಕ್ಕ. ನಾನು ನಾಚಿ ನೀರಾದೆ.

"ನೀ ಏನು ಹುಡುಗೋ,

ತರೊದೇ ತರ್ರಿಯಾ ಒಮ್ಮೆ ಬಾಳೋಟ ತರಬೇಕು, ಅದ್ರ ಹೌದ್ ಅಂತಾರ

ಹೋಗ ಬಾಳೋಟು ತೊಂಬಾ ಎರಡು ಉಂಡಿ ಕೊಡ್ತಾರ"

ಎಂದು ಮತ್ತೊಬ್ಬ ವ್ಯಕ್ತಿ ಹುರಿದುಂಬಿಸಿದ.

ನಾಳೆ ಹೇಗಾದರೂ ಮಾಡಿ ಎರಡು ಪಟ್ಟು ಹತ್ತಿ ಇರಿದು ಸಂಗ್ರಹ ಮಾಡಲೇಬೇಕು ಎಂದು ನಿರ್ಧರಿಸಿದೆ. ಹತ್ತಿಯನ್ನು ಕದಿಯಲು ಹೋಗುವಾಗ ಎರಡು ಮೂರು ಜನ ಸೇರಿಯೇ ಹೋಗುವುದು ಹೆಚ್ಚು. ಆಗ ನನ್ನ ತಲೆಯಲ್ಲಿ ಬಂದ ವಿಚಾರ ಇಷ್ಟು. ಈ ಇಬ್ಬರು ಸ್ನೇಹಿತರು ಇರೋದರಿಂದ ದಿಂಡಿನಿಂದ ಹತ್ತಿ ಬೇಗ ಬೇಗನೆ ಇರಿಯುವುದಕ್ಕೆ ಆಗೋದಿಲ್ಲ. ಅದರಲ್ಲಿ ಮೂರು ನಾಲ್ಕು ಜನ ಆಗೋದರಿಂದ ಗಲಾಟೆ ಆಗಿ ಚಕ್ಕಡಿ ನಡೆಸುವವನಿಗೆ ಗೊತ್ತಾಗುತ್ತದೆ. ಆದ್ದರಿಂದ ನಾನೊಬ್ಬನೇ ಹೋದರೆ ಹೆಚ್ಚು ಹತ್ತಿ ಇರಿದು ತರಬಹುದೆನಿಸಿತು. ಆದ್ದರಿಂದ ನಾನೊಬ್ಬನೇ ಆ ಕೆಲಸದ ಸಾಹಸಕ್ಕೆ ಇಳಿದಿದ್ದೆ. ಚಕ್ಕಡಿ ಹತ್ತಿರ ಬರುವವರೆಗೆ ಮರದಡಿಯಲ್ಲಿ ಅಡಗಿಕೊಂಡಿದ್ದೆ. ಚಕ್ಕಡಿ ನಾ ಅಡಗಿ ನಿಂತ ಮರ ದಾಟಿ ಮುಂದಕ್ಕೆ ಹೋದಾಗ ಕಳ್ಳ ಹೆಜ್ಜೆ ಹಾಕುತ್ತ ಚಕ್ಕಡಿಯನ್ನು ಹಿಂಬಾಲಿಸಿದೆ. ಹತ್ತಿಯ ದಿಂಡಿನ ಮೇಲೆ ಕುಳಿತು ಚಕ್ಕಡಿ ನಡೆಸುವ ಚಾಲಕನಿಗೆ ನಾನು ಗಾಡಿ ಅಡಿಯಲ್ಲಿ ಬಾಗಿ

ಹತ್ತಿ ಇರಿಯುವುದು ಕಾಣುತ್ತಿರಲಿಲ್ಲ. ಹೀಗಾಗಿ ಹತ್ತಿ ಇರಿಯುತ್ತಲೇ ಹೋದೆ. ಹತ್ತಿ ಹೆಚ್ಚು ಸಂಗ್ರವಾದಂತೆ ನನಗೆ ಒಂದರ ಬದಲಾಗಿ ಎರಡು ಉಂಡೆ ಸಿಕ್ಕ ಅನುಭವವಾಗಿ ಮುಖ ಅರಳಿತು. ಇನ್ನೇನು ಸಾಕು ಕೈ ಬಿಡೋಣ, ಬಿಟ್ಟು ನೆಲಕ್ಕೆ ಕೂಡುವ ಮುನ್ನವೇ "ಚಟಲ್" ಎಂದು ಬಾರುಕೋಲಿನ ಹೊಡೆತ ತಿಂದಾಗ ಗಣಪನಂತೆ ಹೊಟ್ಟೆ ಮೇಲೆ ಮಾಡಿಕೊಂಡು ಬಿದ್ದೆ.

ನನ್ನಜ್ಜಿ ನನ್ನ ಅವತಾರವನ್ನು ನೋಡಲಾಗದೆ ದುಃಖದಿಂದ ರೋದಿಸಿದಳು. ಮಣ್ಣಿನ ಹೊಸ ಮಡಕೆ ತಂದು ಹಾಳೆ ಹಾಗೂ ಗರಟೆಯ ಕೆಲ ಚದುರುಗಳನ್ನು ಹಾಕಿ ಬೆಂಕಿ ಮಾಡಿದಳು. ಅದರಲ್ಲಿ ನೀರು ತುಂಬಿ, ಅರಿಶಿಣ, ಕುಂಕುಮ ಹಾಕಿ ನೆದರು ಮಾಡಿದಳು. ಲಿಂಬೆ ಹಣ್ಣು ಕೊಯ್ದು, ಮೂರು ತುಂಡು ಮಾಡಿ ಸೂಜಿ ಚುಚ್ಚಿ ಗಡಿಗೆಗೆ ಹಾಕಿದಳು. ಜೋಗಪ್ಪನ ಹತ್ತಿರ ಹೋಗಿ ಅಲ್ಲಿಂದ ಏನೋ ತಂದು ಆ ಮಡಕೆಗೆ ಹಾಕಿ, ನನ್ನ ತಲೆ ಸ್ವಲ್ಪ ಕೂದಲು ಕತ್ತರಿಸಿಕೊಂಡಳು. ನಾನೆಷ್ಟು ಮಾತನಾಡಿದರೂ ಮಾತನಾಡದೆ ಮೂಕಿಯ ಹಾಗೆ ವರ್ತನೆ ಮಾಡುತ್ತ ಮತ್ತೆ ಪುನಃ ಆ ಮಡಕೆಯನ್ನು ಒಯ್ದು ಜೋಗಪ್ಪನಿಗೆ ಕೊಟ್ಟು ಬಂದು ನನಗೆ ಧೈರ್ಯ ಹೇಳಿದಳು.

"ಈಗ ಆ ಗಡಗಿ ಹೋಗಿ ಅವ್ನ ಹಿತ್ತಲದಾಗ ಬೀಳತೈತಿ -

ನಿನಗ ಆಗಿದ್ದರ ಎರಡಪಟ್ಟ ಅವ್ಗ ಆಕೈತಿ, ಸುಮ್ಮನಿರು"

ಎಂದು ನನ್ನನ್ನು ಎದೆಗವಚಿಕೊಂಡಳು. ಇದಕ್ಕಿಂತ ಹೆಚ್ಚಿನ ಬಲ ನನ್ನಜ್ಜಿಯಲ್ಲಿ ಇರಲಿಲ್ಲ. ಏಕೆಂದರೆ, ನನಗೆ ಹೊಡೆದವ ನಮ್ಮೂರ ಗೌಡರ ಸಂಬಂಧಿಕನಾಗಿದ್ದ.

ಆ ಬೆಳ್ಳನೆಯ ಲಾಡು ಕೈ ಸಿಕ್ಕಾಗ ಈಗಲೂ ನನಗೆ ಆ ಬಾರುಕೋಲಿನ ನೆನಪಾಗುತ್ತದೆ.

ಆ ಗಡಿಗೆಯ ನೆನಪಾಗುತ್ತದೆ.

ಇಂಥ ಶಿಕ್ಷೆ, ಈ ರೀತಿಯ ಕೆಲಸಕ್ಕೆ ಪ್ರೇರೇಪಿಸಿದ ಅಂಗಡಿಯ ತಾತ ಹಾಗೂ ಆತನ ಅಂಗಡಿಯಲ್ಲಿದ್ದ ಮತ್ತೊಬ್ಬ ಮನುಷ್ಯನಿಗೂ ಸಂದಬೇಕಾಗಿತ್ತಲ್ಲವೇ?

l

l

# "ಓಕುಳಿ" ಎಂಬ ಈಸ್ಟಮನ್ ಕಲರ್ ಚಿತ್ರ

ದಲಿತ ಕೇರಿಗೂ ಊರ ಸಂಪ್ರದಾಯಗಳಿಗೂ ಆಶ್ಚರ್ಯಕರವಾದ ರೀತಿಯಲ್ಲಿ ಸಂಬಂಧಗಳಿವೆ. ಈ ಸಂಬಂಧಗಳು ದಲಿತರಿಗೆ ಮಾರಕವಾಗಿಯೂ ದಲಿತೇತರಿಗೆ ಪೂರಕವಾಗಿಯೂ ಕೆಲಸ ಮಾಡುತ್ತವೆ. ಊರಿನ ಪ್ರತಿಯೊಂದು ಕೆಲಸ ಕಾರ್ಯಗಳಲ್ಲಿ ದಲಿತರಿಗೆ ಅವಕಾಶ ಕೊಡಲಾಗಿದೆ ಎನ್ನುವ ನೆಪದಲ್ಲಿ ಅವರ ಬದುಕನ್ನು ಅಡಕೊತ್ತಿನಲ್ಲಿಟ್ಟು, ಅಡಕೆಯಂತೆ ಕತ್ತರಿಸುತ್ತಾರೆ. ಈಗ ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ ಕೆಳ ದರ್ಜೆಯ ನೌಕರರಾಗಿ ಭರತಿಯಾದಂತೆ ಹಿಂದೆ ಸಾಂಪ್ರಾದಾಯಿಕ ಚಾಕರಿ ಕೆಲಸಗಳಿಗೆ ಭರ್ತಿಯಾಗುತ್ತಿದ್ದರು. ಅಂತಹ ಮನ ಕೆದಕುವ ಸಂಪ್ರದಾಯವೊಂದನ್ನು ಇಲ್ಲಿ ನಿವೇದಿಸಬಯಸುವೆ.

ನಮ್ಮ ಕೇರಿಯ ಹೆಂಗಸರಿಗೆ ಶ್ರಾವಣ ಮಾಸದ ಓಕುಳಿ ಎಂದರೆ ಕೆಲವರಿಗೆ ಬಲು ಹಿಗ್ಗು-ಕುಗ್ಗು- ಸುತ್ತಮುತ್ತಲಿನ ಊರುಗಳಲ್ಲಿ ಬಿದರು ಕುಂದಿಯ ಓಕುಳಿ ಎಂದರೆ ಪ್ರಸಿದ್ಧವಾದದ್ದು. ಈ ಸಂಪ್ರದಾಯದಲ್ಲಿ ಪಾಲುಗೊಳ್ಳುವವರು ನಮ್ಮ ಕೇರಿಯ ಹೆಂಗಸರೇ ಆಗಿದ್ದರು.

ಸಂಪ್ರದಾಯದ ನಡಾವಳಿ ಹೀಗಿದೆ. ದಲಿತ ಹೆಂಗಸರು ಕುಪ್ಪಸವನ್ನು ಕಳೆದು, ಅಂಡುಗಚ್ಚೆ ಹಾಕಿದ ಸೀರೆಯನ್ನು ಉಟ್ಟಿರಬೇಕು. ಅಂದರೆ ನಡು ಭಾಗಕ್ಕೆ ಮಾತ್ರ ಸೀರೆ ಸುತ್ತಿದ್ದು ಸೆರಗು ತಲೆ ಮೇಲೆ ಬಂದಿರುತ್ತದೆ. ಇವರ ಕೈಯಲ್ಲಿ ನೀಳವಾದ ಮಾರುದ್ದದ ಲಕ್ಕಿಯ ಹತ್ತಾರು ಜಬರಿಗಳಿರುತ್ತವೆ. ಇವರ ವಿರುದ್ಧ ಇನ್ನೊಂದು ಬಣ, ಇದರಲ್ಲಿ ದಲೀತೇತರ ಹಾಗೂ ಬ್ರಾಹ್ಮಣೇತರರಿಂದ ಕೂಡಿದ ಗಂಡಸರು ಮಾತ್ರ ಇರುತ್ತಿದ್ದು, ಅಂಡಗಚ್ಚೆ ಹಾಕಿದ ಧೋತಿಯನ್ನು ಉಟ್ಟಿರುತ್ತಾರೆ. ಕೈಯಲ್ಲಿ ರ್‍ಯಾಳದಿಂದ ಅಥವಾ ಸೆರೆಯಿಂದ ಲೇಪಿತವಾದ ಜೋಳಿಗೆ ಇರುತ್ತದೆ. ಈ ಗಂಡಸರಲ್ಲಿ ಸಾಮಾನ್ಯವಾಗಿ ಊರ ಪ್ರಮುಖ, ಪುಂಡರೇ ಹೆಚ್ಚು. ದೇವಾಲಯದ ಎದುರು ಸಾಮಾನ್ಯವಾಗಿ ಈಗಲೂ ಕೆಲವೆಡೆ ಹಾಳುಬಿದ್ದ ಹೊಂಡಗಳನ್ನು ಗಮನಿಸಬಹುದು. ಈ ಹೊಂಡಗಳ ಸುತ್ತಮುತ್ತಲೂ ಕ್ರೀಡೆಯಾಗಿ ನಡೆಯುವುದು ಓಕುಳಿ. ಗಂಡಸರು ಅರಿಶಿಣ ಕುಂಕುಮಗಳಿಂದ ಕೂಡಿದ ಹೊಂಡದ ನೀರು ಜೋಳಿಗೆಯಲ್ಲಿ ತಂದು ಹೆಂಗಸರಿಗೆ ಹೊಡೆಯುತ್ತಾರೆ. ಕೈಯಲ್ಲಿ ನೀಳವಾದ ಜಬರಿಯನ್ನು ಹಿಡಿದುನಿಂತ ಹೆಂಗಸರು ಈ ನೀರಿನ ಹೊಡೆತದಿಂದ ತಪ್ಪಿಸಿಕೊಂಡು

ಜಬರಿಯಿಂದ ಗಂಡುಗಳಿಗೆ ಹೊಡೆಯಬೇಕು. ಇದೊಂದು ಬಗೆಯ ಸಾಂಪ್ರದಾಯಿಕವಾದ ಕ್ರೀಡೆ.

ಗಂಡಸರು ಈ ಹೆಂಗಸರಿಗೆ ಜೋಳಿಗೆಯಲ್ಲಿ ನೀರು ತಂದು ಪದೇ ಪದೇಯಾಗಿ ಹೊಡೆದಾಗ ಮೈಯೆಲ್ಲಾ ಒದ್ದೆಯಾಗಿ ತಲೆಯ ಸೆರಗು ಜಾರಿ ನೆಲಕ್ಕೆ ಬಿದ್ದರೂ ಈ ಹೆಂಗಸರು ಅದರ ಪರಿವಿಲ್ಲದೆ ತಾವು ತಿಂದ ಪೆಟ್ಟಿಗೆ ಪ್ರತಿಯಾಗಿ ಅವರ ಬೆನ್ನು ಬಾರೆತ್ತಲು ಓಡುತ್ತಾರೆ. ಒದ್ದೆಯಾದ ಮೈ ತುಂಬಿದೆದೆ ತೊಡೆಗಳು ಎಲ್ಲವೂ ಬಿಚ್ಚಿಟ್ಟ ಗಂಟುಗಳು. ಉಗುಳು ನುಂಗುವ ಪ್ರೇಕ್ಷಕ ಮಹಾಶಯರಿಗೆ ಹಾಗೂ ಆಟಗಾರರ ಚಪಲಕ್ಕೆ ಇದೊಂದು ಪುಕ್ಕಟೆ ಮನರಂಜನೆ. ಈ ಹೆಂಗಸರ ಮೈ ಮೇಲೆ ಆಗಾಗ ಬಂದು ಬೀಳುವ ಕೆಂಪು ಹಳದಿ ಬಣ್ಣದ ನೀರುಗಳು ಈಸ್ಟ್‌ಮನ್ ಕಲರ್‌ನಲ್ಲಿ ಇಟ್ಟು ನೋಡುವಂತೆ ಮಾಡಿದ್ದಾರೆ.

ಪ್ರತಿವರ್ಷ ಈ ಕ್ರೀಡೆ ನಡೆಯಲೇಬೇಕು ಎನ್ನುವ ನಿಯಮ. ನಡೆಸದಿದ್ದರೆ ಊರಿಗೆ ಮಳೆ ಬರಲಾರದು. ಬೆಳೆಗೆ ರೋಗ ಬೀಳುತ್ತದೆ. ಊರಿಗೆ ಮಾರಿ (ರೋಗ) ಬರುತ್ತದೆ. ಶನಿಯ ಕಾಟ ಹೆಚ್ಚುತ್ತದೆ ಎನ್ನುವ ನಂಬಿಕೆಗಳಿವೆ. ಈ ನಂಬಿಕೆಗಳಿಗೆ ಹೆದರುವ ದಲಿತ ಹೆಂಗಸರು - ಗಂಡಸರು ಹೀಗೆ ಮನರಂಜನೆಯ ರೀತಿಯಲ್ಲಿ ಬಲಿಯಾಗುತ್ತಾರೆ.

ದೃಢಕಾಯಿಯಾದ ನನ್ನಜ್ಜಿ ನಮ್ಮ ಸಹೋದರರನ್ನೆಲ್ಲಾ ಕರೆದುಕೊಂಡು ಅಲ್ಲಿಯ ಹತ್ತಿರದ ಜಾತ್ರೆಗೆ ಕರೆದೊಯ್ಯುತ್ತಿದ್ದಳು. ಜಾತ್ರೆಯ ನೋಟಕ್ಕಲ್ಲ , ಅಲ್ಲಿ ಸಿಗುವ ಊಟಕ್ಕೆ. ಆಗ ಈ ಮನರಂಜನೆಯನ್ನೂ ಕೂಡ ತಪ್ಪದೇ ತೋರಿಸುತ್ತಿದ್ದಳು. ನಮಗೆ ಕಾಣದೆ ಹೋದಾಗ ನಮ್ಮನ್ನು ತನ್ನ ಹೆಗಲ ಮೇಲೆ ಅಥವಾ ಗೋಡೆಯ ಮೇಲೆ ನಿಲ್ಲಿಸಿ ತೋರಿಸುತ್ತಿದ್ದಳು.

ಹೆಚ್ಚಿನ ವ್ಯಾಸಂಗಕ್ಕೆ ಧಾರವಾಡಕ್ಕೆ ಬಂದಾಗ ಪಿಎಚ್.ಡಿ. ಮಾಡುವ ಸ್ನೇಹಿತ ಸಿಕ್ಕ. ಆತನ ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಅವನೊಂದಿಗೆ ನಾನೂ ಹೋಗುತ್ತಿದ್ದೆ. ಸಂದರ್ಭ ಬಂದಾಗ ಈ ಮೇಲಿನ ಸಂಪ್ರದಾಯ ಪ್ರಸ್ತಾಪ ಮಾಡಿದೆ. ಆಗ ಆತ ತನ್ನ ಪಕ್ಕದ ಊರಿನಲ್ಲಿ ಇದಕ್ಕಿಂತಲೂ ಭೀಕರವಾಗಿ ನಡೆಯುವ ಘಟನೆ ಹೇಳಿದಾಗ ಅದನ್ನು ನೋಡಲೇಬೇಕು ಎಂಬ ಹಟ ಬಂತು. ಓಕುಳಿಯಂತೆ ಇದೂ ಶ್ರಾವಣಮಾಸದಲ್ಲಿಯೇ ಹನುಮಂತನ ಎದುರೇ ನಡೆಯುವ ಕ್ರೀಡೆ ಇಲ್ಲಿಯೂ ದಲಿತ ಹೆಂಗಸರೇ ಬೇಕು.

ಗಂಡಾಗಲಿ-ಹೆಣ್ಣಾಗಲಿ ಅವರ ಮೈಮೇಲೆ ಬಟ್ಟೆ ಇರುವುದಿಲ್ಲ. ಗಂಡು ಹೆಣ್ಣು ಸೇರಿ ನೃತ್ಯ ಮಾಡುತ್ತವೆ. ಅನಂತರದಲ್ಲಿ ಪ್ರಮುಖವಾದ ಅಂಶವೆಂದರೆ, ಗಂಡುಗಳ ಹೆಗಲ ಮೇಲೆ ಹೆಣ್ಣುಗಳು ಕುಳಿತುಕೊಂಡು, ಹೆಣ್ಣು ಬಾಳೆಹಣ್ಣನ್ನು ಸುಲಿದು ಗಂಡಿನ ಬಾಯಲ್ಲಿ ಇಡುವುದಕ್ಕಾಗಿ ಹೋಗುತ್ತದೆ. ಗಂಡು ಬಾಯಿ ಮುಂದಕ್ಕೆ ತಂದಾಗ ತಕ್ಷಣ ಅದನ್ನು

ಅಲ್ಲಿಂದ ಸರಿಸಿಬಿಡುತ್ತದೆ. ನಂತರ ತಾನೂ ಆ ಬಾಳೆಹಣ್ಣನ್ನು ತಿನ್ನದೆ ನೆಕ್ಕುತ್ತದೆ. ಹೆಣ್ಣು ನೆಕ್ಕಿದ ಬಾಳೆಹಣ್ಣನ್ನು, ಈ ಮೇಲು ಜಾತಿಯ ಗಂಡು ಕಚ್ಚಿ ತಿನ್ನುತ್ತದೆ. ಇದು ಸಂಪ್ರದಾಯದಲ್ಲಿ ಪ್ರಧಾನವಾದದ್ದು.

ಇಷ್ಟು ವಿಚಾರ ಸ್ನೇಹಿತ ನನಗೆ ಹೇಳಿದಾಗ, ಇಂಥ ಸಂಪ್ರದಾಯ ಒಟ್ಟುಗೂಡಿಸಿ ಒಂದು ಪ್ರಬಂಧ ಬರೆಯಬೇಕು ಎನ್ನುವ ವಿಚಾರ ತಿಳಿಸಿದೆ. ಅದರಲ್ಲಿ ಆತನೂ ಅಷ್ಟೇ ಆಸಕ್ತಿ ತೋರಿಸಿ ವಿಷಯ ಸಂಗ್ರಹಿಸಿ ಕೊಟ್ಟ. ಊರಿನವರು ಸಂಪ್ರದಾಯ ಇರುವ ದಿನವನ್ನು ಹೇಳಿದರು. ಮಾರನೇ ದಿನ ಹೊರಡಲು ಸಿದ್ಧವಾದಾಗ ಅದು ನಿನ್ನೆಯ ದಿನದ ರಾತ್ರಿಯೇ ಮುಗಿದುಹೋಗಿದೆ. ಈಗ ಜನಕ್ಕೆ ಅದರ ಬಗ್ಗೆ ಹೆಚ್ಚಿನ ಕಣ್ಣು ಇರುವುದರಿಂದ ಯಾರಿಗೂ ಅರಿಯದ ಹಾಗೆ ಮಾಡಿ ಮುಗಿಸಿ ಬಿಡುವುದಾಗಿ ಹೇಳಿದರು. ಆದರೆ ಈ ಸಂಪ್ರದಾಯ ಧಾರವಾಡ ಜಿಲ್ಲೆಯಲ್ಲಿ ಇದೆಯೋ ಇಲ್ಲವೋ ಗೊತ್ತಿಲ್ಲ. ಈ ಹಳ್ಳಿಗೆ ಮೊದಲು "ತುಣ್ಣಗನೂರು" ಎಂದು ಹೆಸರಿತ್ತಂತೆ. ಜಾನಪದ ಅಧ್ಯಯನಕಾರನಾದ ನಾನು ಈ ವಿಚಾರದ ಕುರಿತು ಪ್ರಬಂಧ ಬರೆಯಲಾಗಲಿಲ್ಲ. ಏಕೆಂದರೆ, ಅಧ್ಯಯನಕಾರರಲ್ಲಿ ಇಂಥ ವಿಷಯಗಳು ಪಾಂಡಿತ್ಯ ಪ್ರದರ್ಶನಕ್ಕೆ ವಸ್ತುಗಳಾಗಿವೆ ಎನಿಸಿತು. ಆ ರೀತಿ ಬಾಳೆಹಣ್ಣು ತಿನ್ನಿಸುವುದು "ಪ್ರಜನನದ ಸಂಕೇತ", ಓಕುಳಿ ವಿಚಾರಕ್ಕೆ "ಸಮೃದ್ಧಿಯ" ಅರ್ಥ ಕೊಡುವುದು, ಅರಿಶಿಣ ಕುಂಕುಮಕ್ಕೆ ಇನ್ನೊಂದು ಬಗೆಯ ಅರ್ಥ. ಇಂಥವೆಲ್ಲಾ ಅರಿತ ಮೇಲೆ ಈ ಪಾಂಡಿತ್ಯದ ಬಗ್ಗೆ ಹೇಸಿಕೆಯೂ ಎನಿಸಿ ಬರೆಯುವುದನ್ನು ನಿಲ್ಲಿಸಿಬಿಟ್ಟೆ.

ಇದೆಲ್ಲವೂ ಇಲ್ಲಿ ಯಾಕಾಗಿ ಕಥೆ ಮಾಡಿ ಹೇಳುತ್ತಿರುವನೆಂದರೆ ಮೇಲು ಜಾತಿಯವರು ವರ್ಷಕ್ಕೊಮ್ಮೆ ಕೊಡುವ ಸೀರೆ-ಕುಪ್ಪಸ ದಲಿತ ಸ್ತ್ರೀಯರಲ್ಲಿ ಆಸೆ ಹುಟ್ಟಿಸಿವೆ. ನನ್ನೂರಿನ ಸುತ್ತಮುತ್ತ ಇಂಥ ಸಂಪ್ರದಾಯ ಇನ್ನೂ ಜೀವಂತವಾಗಿವೆ. ಬದಲಾವಣೆ ಬಹಳೆಂದರೆ ಎದೆಗೆ ಕುಪ್ಪಸ ತೊಡಿಸಿದ್ದಾರೆ ಎಂದು ಕೇಳಿದ್ದೇನೆ. ಮೊದಲ ಭಾಗದಲ್ಲಿ ಹೇಳಲಾದ ನನ್ನ ಓದಿನ ಹಿಂದಿರುವ ಸ್ಥಿತಿಯನ್ನೇ ಗಮನಿಸಿ. ಬೆಳೆಯಬೇಕು ಎಂಬ ಜೀವಿಗೆ ಸಣ್ಣ ಸಣ್ಣ ವಿಚಾರಗಳು ಹೇಗೆ ಅಡೆತಡೆ ತರುತ್ತವೆ ಎನ್ನುವುದು ಒಂದಾದರೆ, ಹೆಣ್ಣಿನ ಶೀಲ ಹರಣ ಮಾಡಿ ವೇಶ್ಯೆಯಾಗಿಸಿ ಅವಳಲ್ಲಿಗೆ ಬರುವ ಗಂಡಸರು ತಮ್ಮ ಮರ್ಯಾದೆಯನ್ನು ಕಾಪಾಡಿಕೊಳ್ಳುವುದಕ್ಕಾಗಿ ಹೂಡುವ ತಂತ್ರಗಳನ್ನು ಗಮನಿಸಿದರೆ ಆ ಹೆಣ್ಣುಗಳಿಗೆ ಮರ್ಯಾದೆ ಇಲ್ಲವೇ? ಎಂಬುದು ಎರಡನೆಯದು. ಸಂಪ್ರದಾಯದ ಸೋಗಿನಲ್ಲಿ ಇಂದಿಗೂ "ಓಕುಳಿಯ ಈಸ್ಟ್‌ಮನ್ ಕಲರ್ ಚಿತ್ರ" ನೋಡುವ ಈ ಗಂಡಸರು ತಮ್ಮ ಮಡದಿಯರನ್ನು ಈ ರೀತಿ ನಿಲ್ಲಿಸಿ ಬಹಿರಂಗವಾಗಿ ಆಡುತ್ತೀರಿಯೇ ಎಂದು ಪ್ರಶ್ನಿಸಿದರೆ ಕಣ್ಣು ಕೆಕ್ಕರಿಸುತ್ತಾರೆ. ತಮ್ಮ ಮಡದಿಯಂತೆ ಇವರೂ ಮಾನವುಳ್ಳ ಹೆಂಗಸರು ಎಂಬ ಭಾವನೆ ಇವರಿಗೆ ಬರುವುದಾದರೂ ಯಾವಾಗ? ಅಧ್ಯಯನಕಾರರ ಪಾಂಡಿತ್ಯ

ಪ್ರದರ್ಶನಕ್ಕೆ ವಸ್ತುವಾಗಿ ಅವುಗಳಿಗೆ ಎತ್ತಲಾಗದಂತಹ ಪದಗಳನ್ನು ಹಚ್ಚಿ ಅದನ್ನು ಗೌರವದ ಸ್ಥಾನಕ್ಕೆ ನಿಲ್ಲಿಸುವ ಬಗ್ಗೆ ಏನೆನ್ನಬೇಕು?

ಸವದತ್ತಿಯಲ್ಲಿಯೂ ಇಂಥ ಹೇಯವಾದ ಬೇವಿನುಡುಗೆ, ಗಂಧದ ಉಡುಗೆ ಎಂದು ನಡೆಸುವ ಹರಕೆಗಳು ಇವೆ. ಈ ಬಗೆಯ ಮೂಢನಂಬಿಕೆಗಳು ಕಾಲಕ್ಕೆ ತಕ್ಕಂತೆ ಅಳಿದುಹೋಗದೆ ಬೇರೊಂದು ಸ್ವರೂಪದಲ್ಲಿ ಬದಲಾವಣೆಯಾಗಿ ಬರುತ್ತಿರುವುದೇ ಹಾಸ್ಯಾಸ್ಪದ ಸಂಗತಿ. ಇದಲ್ಲದೇ ಇತ್ತಿತ್ತಲಾಗಿ "ಮಲ ತಿನ್ನಿಸುವ ಕಾರ್ಯಕ್ರಮಗಳನ್ನು" ಕರ್ನಾಟಕದಲ್ಲಿ ಯಶಸ್ವಿಯಾಗಿ ನಡೆಸಿಕೊಂಡು ಬರುತ್ತಿದ್ದಾರೆ. ಇಂಥವನ್ನು ಗಮನಿಸಿದಾಗ ಮನುಷ್ಯನ ಕ್ರೌರ್ಯಕ್ಕೆ ಹೊಸ ಗಿನ್ನೆಸ್ ದಾಖಲೆಗಳಾಗಿ ನಿಲ್ಲುತ್ತವೆಯಲ್ಲವೇ? ನಾವು ಎಷ್ಟೊಂದು ಸೂಕ್ಷ್ಮ ಜೀವಿಗಳು ಎಂದರೆ ಇಂಥ ಘಟನೆಗಳನ್ನು ನೇರವಾದ ಶಬ್ದಗಳಲ್ಲಿ ಹೇಳುವುದಕ್ಕೆ ನಾಚುತ್ತೇವೆ. ಮಲತಿನ್ನಿಸುವುದು ಅದೊಂದು ಪೂಜಾ ವಿಧಾನವೇನೋ ಎನ್ನುವ ಹಾಗೆ (ಅಮೇಧ್ಯ ಪ್ರಾಶನ - ಮಲಪ್ರಾಶನ) ಹೇಳುತ್ತೇವೆ. ಇನ್ನು ತಿಂದವರಿಗೆ ಏನನಿಸಲಿಕ್ಕಿಲ್ಲ?

l

l

# ಜನಿವಾರ ಶಿವದಾರಗಳ ಮಹಾತ್ಮೆ

ಒಂದು ಧರ್ಮದ ಬಂಧ, ಬದುಕಿಗೆ ಬಂಧನವಾದಾಗ ಅದು ಭಯಾನಕವೆನಿಸುತ್ತದೆ. ಅಲ್ಲದೆ ಅದೇ ಮತ್ತೊಂದು ಧರ್ಮಕ್ಕೆ ಬೆಳೆಯಲು ಅಪ್ರತ್ಯಕ್ಷವಾಗಿ ಅವಕಾಶವನ್ನೂ ಮಾಡಿಕೊಡುತ್ತದೆ. ಹೀಗೆ ಒಂದು ಧರ್ಮದ ಅವನತಿ ಅಥವಾ ಪರಿಷ್ಕರಣದ ಜೊತೆಗೆ ಮತ್ತೊಂದು ಧರ್ಮದ ಏಳ್ಗೆಯೂ ಇರುವುದು ಕಂಡುಬರುತ್ತದೆ. ಈ ಧರ್ಮಗಳೆಂಬ ಹಿಮಬಂಡೆಗಳ ಜೊತೆಗೆ ಆಯಾ ಧರ್ಮದ ಒಳಮತಗಳೂ ನಾಯಿಕೊಡೆಯಂತೆ ಎದ್ದು ನಿಲ್ಲುತ್ತವೆ ಮತ್ತು ಅದೇ ಧರ್ಮದ ಒಳಮತಗಳೊಂದಿಗೆ ಸ್ಪರ್ಧೆ ಮಾಡುತ್ತವೆ. ಈ ಎರಡೂ ಬಗೆಯ ಮತಾಂತರಗಳು ಬದುಕಿನಲ್ಲಿ ಹೊಸ ಹೆಸರು ತಂದರೂ, ಬದುಕಿನ ಚಲನಶೀಲತೆಯಲ್ಲಾಗಲಿ ಅಥವಾ ಮೂಲಭೂತ ಸಂಸ್ಕೃತಿಯಲ್ಲಾಗಲಿ ಬದಲಾವಣೆ ತರಲು ಸಾಧ್ಯವಾಗಿಲ್ಲ. ಬಸವಣ್ಣನವರ ಕಾಲದಲ್ಲಿ ಮತಾಂತರ ಹೊಂದಿದ ಎಷ್ಟೋ ಕೆಳಜಾತಿಯ ಜನತೆ ಆಯಾ ಜಾತಿಗಳ ಒಳಪಂಗಡದವರಾಗಿ ನಿಂತು ಬಿಟ್ಟಿದ್ದಾರೆ. ಹಾಗೆಯೇ ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿ ಅಂಬೇಡ್ಕರ್ ಬೌದ್ಧಧರ್ಮಕ್ಕೆ ಮತಾಂತರ ಹೊಂದಿದರೂ, ಅವರು ಬೌದ್ಧಧರ್ಮೀಯರಾಗದೆ ನವಬೌದ್ಧರಾದರು. ಆದರೆ ಈಗ ನಾವು ವೀರಶೈವ ಹರಿಜನರು! ಅವರ ಗತಿ ಸ್ಥಿತಿಯ ಒಂದೆರಡು ಪಳೆಯುಳಿಕೆ ಇಲ್ಲಿ ಬಿಚ್ಚಿಡಬಯಸುವೆ.

ಪ್ರಾಥಮಿಕ ಶಾಲೆಗೆ ಹೋಗುವಾಗಿನಿಂದ ಹಿಡಿದು ಹೈಸ್ಕೂಲು ಅಭ್ಯಾಸದವರೆಗೆ ನನಗೆ ಹೆಚ್ಚು ಕಾಡಿದವುಗಳೆಂದರೆ ಜನಿವಾರಗಳು ಮತ್ತು ಶಿವದಾರಗಳು; ಅನಂತರದಲ್ಲಿ ಮೋಜಾಗಿ ಕಂಡದ್ದು ಶಿವದಾರದಲ್ಲಿಯ ರಂಗುಗಳು.

ಸೇಂದಿ ಮತ್ತು ದಾರು (ಶರಾಯಿ)ಗಳ ಅಂಗಡಿ ಆಗ ಊರಲ್ಲಿ ಇರಲಿಲ್ಲವೆಂದು ತೋರುತ್ತದೆ. ಇವು ನಮ್ಮ ಕೇರಿಯಲ್ಲಿಯೇ ಬತ್ತದ ಬಾವಿಗಳಾಗಿ ನಿಂತಿದ್ದವು ಎನ್ನುವುದರಲ್ಲಿ ಸಂದೇಹವೇ ಇಲ್ಲ. ಇವು ಹಗಲಿರುಳೆನ್ನದೆ ನಮ್ಮ ಸೇವೆಯನ್ನು ಅಷ್ಟೇ ನಿಷ್ಠೆಯಿಂದ ಸಲ್ಲಿಸುತ್ತಿದ್ದವು. ಅದರಲ್ಲೂ ಕಂಟ್ರಿದಾರುಗಳ (ದೇಶೀಯ ದಾರು) ಸೇವೆ ನಡೆದರೂ ಅದು ನಿಗದಿತ ಸಮಯದಲ್ಲಿ ಮಾತ್ರ. ಪೊಲೀಸರ ಹೊಡೆತ ಬಡೆತಗಳ ನಡುವೆಯೂ ಈ ತೊರೆ ಬತ್ತದೆ ಹರಿದು ಬರುತ್ತಿತ್ತು. ಈ ಬಾವಿ ಹಾಗೂ ತೊರೆಗಳ ಭಕ್ತರು ಕೇವಲ ನಮ್ಮ ಕೇರಿಯವರೇ ಆಗಿರಲಿಲ್ಲ. ಊರಿನ ಮೇಲು ಜಾತಿಯವರು ಭಕ್ತರಾಗಿದ್ದಾಗಲೂ ಅಂತರಂಗದಲ್ಲಿ ಮಾತ್ರ ನಿಷ್ಠೆಯಿಂದ ಭಕ್ತಿಯನ್ನು ತೋರುತ್ತಿದ್ದರು. ಬಹಿರಂಗದಲ್ಲಿ ಅದು ಗೋಚರವಾಗುತ್ತಿರಲಿಲ್ಲ.

ಕಂಟ್ರಿತೊರೆಯನ್ನು ಹೀರಲು ಬರುವ ಮೇಲುಜಾತಿಯ ಗುಪ್ತ ಭಕ್ತರ ಜನಿವಾರ ಮತ್ತು ಶಿವದಾರಗಳೇ ನನಗೆ ಹೆಚ್ಚು ಕಾಡಿದ್ದು. ಇವರು ಎಂದೂ ತಮ್ಮ ಭಕ್ತಿಯನ್ನು ಬಹಿರಂಗಪಡಿಸದಿದ್ದರೂ ಅದು ನಮ್ಮ ಕೇರಿಯವರಿಗೆ ಬಹಿರಂಗದ ಗುಟ್ಟೇ ಆಗಿತ್ತು. ಇವರು ಎರಡಕ್ಕೆ ಅಥವಾ ಬಯಲುಕಡೆಗೆ ಹೋಗುವ ನೆಪದಲ್ಲಿ, ನೀರು ತುಂಬಿದ ತಂಬಿಗೆಯನ್ನು ಕೈಯಲ್ಲಿ ಹಿಡಿದುಕೊಂಡು ಗುಡ್ಡದ ಕಡೆಗೆ ಹೋಗುತ್ತಿದ್ದರು. ನೋಡುವವರ ಕಣ್ಣಿಗೆ ಈತ ಎರಡಕ್ಕೆ ಹೋಗುತ್ತಿದ್ದಾನೆ ಎನ್ನುವ ಭ್ರಮೆ. ಆದರೆ ಇವರು ಹೋಗುವುದು ಶರಾಯಿ ಭಟ್ಟಿ ಇಳಿಸುವ ಸ್ಥಾನಕ್ಕೆ. ಹೋಗುವಾಗ ತಂಬಿಗೆಯಲ್ಲಿ ನೀರಿದ್ದರೆ, ಬರುವಾಗ ಅದೇ ತಂಬಿಗೆಯಲ್ಲಿ ದಾರು! ನನಗೆ ಕಾಡಿದ್ದು ಇವರ ನಡವಳಿಕೆಯಲ್ಲ ಅಥವಾ ದಾರು ಅಲ್ಲ. ಅವರಲ್ಲಿರುವ ಶಿವದಾರ, ಜನಿವಾರಗಳು. ಅವರು ಬಯಲು ಕಡೆಗೆ ಹೋಗುವಾಗ ಬಗಲ-ಕೊರಳ ಈ "ದಾರ" ಕಿವಿಗೆ ತಳುಕು ಹಾಕಿಕೊಳ್ಳುತ್ತಿತ್ತು. ಇದು ಗುಡ್ಡಕ್ಕೆ ಹೋಗುವಾಗ ಮಾತ್ರ. ಊರಲ್ಲಿ ಹೋಗುವಾಗ ಹೀಗಿರುವುದು ನಾನೆಂದೂ ಕಾಣಲಿಲ್ಲ.

ಮೇಲುಜಾತಿಯವರಲ್ಲಿ ಕೆಲವರು ಶರಾಯಿ ಅಂಗಡಿಯನ್ನು ಪ್ರವೇಶ ಮಾಡುವವರೂ ಇದ್ದರು. ನಿಜವಾಗಿಯೂ ಇವರು ಬಂಡಾಯಗಾರರು! ಎಲ್ಲರ ಕಣ್ಣಿಗೆ ಕಾಣುವಂತೆ ಕುಡಿದು ಬದುಕುವ, ಬಿಂಕಬಿಗುಮಾನ ಬಿಟ್ಟ ಭಕ್ತರು. ಇವರು ಕುಡಿಯುವಾಗ ಮಾತ್ರ "ದಾರ"ವನ್ನು ಕಿವಿಗೆ ಸುತ್ತು ಹಾಕಿಕೊಂಡು, ಕಣ್ಣು-ಮೂಗು ಮುಚ್ಚಿಕೊಂಡು "ಗಟಕ್" ಎಂದು ಕುಡಿದು ಮುಗಿಸುವವರು. ಊರವರ ಪಾಲಿಗೆ ಭಂಡರು.

ಸ್ವಾತಂತ್ರ್ಯದ ಸಂದರ್ಭದಲ್ಲಿಯೇ ನಮ್ಮ ಮನೆಯವರು ವೀರಶೈವ ಮತಕ್ಕೆ ಮತಾಂತರ ಹೊಂದಿದವರು (ಇಲ್ಲಿ ನನಗೆ ಕ್ರೈಸ್ತ ಧರ್ಮ, ಹಿಂದೂ ಧರ್ಮ, ಪಾದ್ರಿಗಳು, ಗಾಂಧಿ, ಅಂಬೇಡ್ಕರ್ ಮುಂತಾದವರು ನೆನಪಾಗುತ್ತಾರೆ.) ಇವರಿಗೂ ಮೇಲು ಜಾತಿಯವರೆನಿಸಿಕೊಳ್ಳುವ ಬಯಕೆ. ಹೀಗಾಗಿ ದೀಕ್ಷೆಯನ್ನು ಪಡೆದುಕೊಂಡರು. ಶಿವದಾರದ ಜೊತೆಗೆ ಬಗಲಲ್ಲಿ ಲಿಂಗವೂ ಜೋತಾಡತೊಡಗಿತು.

ನಾನು ಕಾಲೇಜು ಕಟ್ಟೆ ಏರಿದ ದಿನಗಳವು. ನನಗೆ ಚೆನ್ನಾಗಿ ನೆನಪಿದೆ. ನಮ್ಮ ಮನೆಗಳಲ್ಲೊಂದು ದೇವರ ಕೋಣೆ, ನೆಲದಿಂದ ಒಂದು ಅಡಿ ಎತ್ತರದ ಗೋಡೆಯಲ್ಲೊಂದು ಮಾಡು, ಆ ಮಾಡಿನಲ್ಲೊಂದು ಡಬ್ಬಿ, ಆ ಡಬ್ಬಿಯೊಳಗಡೆ ಈ ಲಿಂಗಗಳು! ನೆಲಕ್ಕೆ ಸುರುವಿದರೆ ರಾಶಿಯಾಗಿ ಬಿದ್ದು ಬಿಡುತ್ತಿದ್ದವು. ಅವುಗಳೊಂದಿಗೆ ಒಂದೆರಡು ವಂಕಿ, ಉಡುದಾರ, ಕಾಲಲ್ಲಿ ಹಾಕಿಕೊಳ್ಳುವ ಚೈನು, ತಾಯಿತಗಳು ಇರುತ್ತಿದ್ದವು. ಇವೆಲ್ಲ ಬೆಳ್ಳಿಯಿಂದ ಮಾಡಿದ್ದವು. ಅದರಲ್ಲೂ ಅವು ಶುದ್ಧ ಬೆಳ್ಳಿಯ ಆಭರಣಗಳೂ ಅಲ್ಲ! ಆದರೆ ಆಗ ಅವೇ ನಮ್ಮ ಮನೆಯವರಿಗೆ ದೊಡ್ಡ ಆಸ್ತಿ! ಈ ಎಲ್ಲಾ ವಸ್ತುಗಳನ್ನು ಡಬ್ಬಿಯಲ್ಲಿ ಹಾಕಿ ಡಬ್ಬಿಗೆ ಕೀಲಿ ಹಾಕುತ್ತಿದ್ದರು. ಗೋಡೆಯ ಮಾಡಿನಲ್ಲಿಟ್ಟು ಮಾಡಿಗೊಂದು

ತೆಳ್ಳನೆಯ ಕಲ್ಲಿಟ್ಟು ಮುಚ್ಚಿ ಬಿಡುತ್ತಿದ್ದರು. ಮೇಲೆ ಕೆಸರು ಮೆತ್ತಿ ಹೆಂಡಿಯನ್ನು ಸಾರಿಸಿದರೆ ಮುಗಿಯಿತು ಅಲ್ಲೊಂದು "ಮಾಡು" ಇತ್ತು ಎನ್ನುವುದೂ ಗೊತ್ತಾಗುತ್ತಿರಲಿಲ್ಲ. ಈ ಅಮೂಲ್ಯವಾದ ವಸ್ತುಗಳನ್ನು ಕಳ್ಳರು ಕದ್ದಾರೆಂಬ ಭಯದಿಂದ ಈ ಭದ್ರತೆ! ಗೋಡೆಯೇ ಒದ್ದರೆ ಬೀಳುವಂತಹದ್ದು. ಡಬ್ಬಿಯೋ ಗುದ್ದಿದರೆ ಸಾಕು ಒಡೆದು ಹೋಗುವಂತಹದು! ಆದರೆ ಈ ಡಬ್ಬಿ ವರ್ಷಕ್ಕೊಮ್ಮೆ ಹಿರಿಯರ ಪೂಜೆ ಮಾಡುವಾಗ ಮಾತ್ರ ಹೊರಬರುತ್ತಿತ್ತು.

ಇಂದು ಮನೆಯಲ್ಲಿರುವುದು ಒಂದೇ ಒಂದು ಲಿಂಗು. ಅದು ಈಗ ನನ್ನ ತಾಯಿಯ ಕೊರಳಲ್ಲಿದೆ. ಅದರಲ್ಲಿ "ಕಾಂತಿ"ಯೂ ಇಲ್ಲ. ಖಾಲಿ ಡಬ್ಬಿ ಮಾತ್ರ ಜೋತಾಡುತ್ತಿದೆ. ಅಂದು ಬೆಲೆಯುಳ್ಳ ವಸ್ತುಗಳಾಗಿದ್ದ ಆ ಲಿಂಗುಗಳು, ನಾನು ಕಾಲೇಜು ಕಟ್ಟೆಯನ್ನು ಇಳಿಯುವಾಗಲೇ ಕಾಲಲ್ಲಿಯ ಕಸವಾಗಿದ್ದವು! ಹಳೆಯ ಆ ಮಾಡು ಈಗ ಕಬ್ಬಿಣದ ವಸ್ತುಗಳನ್ನು ಇಡಲು ಬಳಸಲಾಗುತ್ತಿದೆ. ಅದರಲ್ಲಿ ಹುಡುಕಿದರೆ ಲಿಂಗುಗಳು ಸಿಗುವುದಿಲ್ಲ. ಮಾರಾಟ ಮಾಡಿದರೆ ಹಣ ಬಾರದ ಲಿಂಗುಗಳು, ತಂಗಡಗಿಯ ಕೂಡಲ ಸಂಗಮ ಹೊಳೆಯಲ್ಲಿ ಬಸವಣ್ಣನಂತೆ ಅವೂ ಐಕ್ಯವಾಗಿವೆ!

ನಮ್ಮದು ಅವಿಭಕ್ತ ಕುಟುಂಬ. ನನಗೆ ನೆನಪಿದ್ದಂತೆ ಮನೆಯವರೆಲ್ಲಾ ಆಗ ಲಿಂಗುವನ್ನು ಧರಿಸುತ್ತಿರಲಿಲ್ಲ. ಕೆಲವೇ ಕೆಲವರು ಧರಿಸುತ್ತಿದ್ದರು. ಅವುಗಳಲ್ಲಿ ನನಗೆ ಕಾಡಿದ ಲಿಂಗುಗಳು ಮೂರು. ಒಂದು, ನನ್ನ ಚಿಕ್ಕಜ್ಜಿ ಚೆನ್ನಮಲ್ಲವ್ವ ಅಜ್ಜಿಯ ಕೊರಳಲ್ಲಿಯ ಲಿಂಗು. ಎರಡು, ಚಿಕ್ಕಪ್ಪ ಬಳಸುವ ಲಿಂಗು. ಮೂರು, ನನ್ನ ತಾಯಿಯ ಕೊರಳಲ್ಲಿಯ ಲಿಂಗು.

ನನ್ನಜ್ಜಿ ಮತ್ತು ನನ್ನ ತಾಯಿ ಲಿಂಗುವಿನ ಸುತ್ತ ಎದ್ದು ನಿಂತ ಸಂದರ್ಭಗಳನ್ನು ಕತೆ ಮಾಡಿ ಹೇಳುತ್ತಾರೆ! ಲಿಂಗ ದೀಕ್ಷೆಯನ್ನು ಕೊಡುವಾಗ, ಸೇಂದಿ, ದಾರು ಕುಡಿಯಬಾರದು. ಮಾಂಸ ತಿನ್ನಬಾರದೆಂದು ಮುಂತಾಗಿ ಭಾಷೆ ತೆಗೆದುಕೊಂಡಿದ್ದರಂತೆ. ಇದನ್ನು ನಿಭಾಯಿಸಲಾಗದೆ ಕೆಲವರು ಲಿಂಗು ತೆಗೆದುಬಿಟ್ಟರಂತೆ. ನನ್ನ ತಂದೆ ಕೆಲಕಾಲ ಲಿಂಗುವಿನ ಕಟ್ಟಾ ಅಭಿಮಾನಿಯಾಗಿದ್ದರಂತೆ. (ಶಾಲೆಯಲ್ಲಿ ಮಾಸ್ತರ ಕೆಲಸ ಮಾಡುತ್ತಿದ್ದರು) ಅವರ ಸ್ನೇಹಿತರೆಲ್ಲ ಸೇರಿ ಮೇಲು ಜಾತಿಯ ಬಂಡಾಯಗಾರರ ಮಾದರಿಯನ್ನು ಮುಂದಿಟ್ಟು ಬಲವಂತದಿಂದ ಕುಡಿಸಿ ತಿನಿಸಿದರಂತೆ. ಅಂದಿನಿಂದ ನಮ್ಮ ತಂದೆ ಆ ಲಿಂಗುವಿನ ಭಕ್ತಿಯಿಂದ ಹೊರಬಂದರು.

ನನ್ನ ತಾಯಿ ಮೊದಲ ಹೆರಿಗೆಯ ಸಂದರ್ಭದವರೆಗೆ ಅಷ್ಟೇ ಕಟ್ಟುನಿಟ್ಟಾದ ಶರಣೆ. ಹೆರಿಗೆಯಾದಾಗ ಪೌಷ್ಠಿಕ ಆಹಾರದ ಕೊರತೆ. ಕೇವಲ ರೊಟ್ಟಿ-ಬೇಳೆ ತಿಂದು ಮರುಶಕ್ತಿ ಸಂಪಾದಿಸುವುದು ಕಷ್ಟವೆನಿಸತೊಡಗಿತು. ಮಗುವಿನ ಆರೋಗ್ಯಕ್ಕಾಗಿ ಮತ್ತು ಇನ್ನುಳಿದವರ

ಒತ್ತಾಯ, ಸಲಹೆಗೆ ಮಣಿದು ಮಾಂಸ ತಿಂದಳು. ಆಗ ಹೆರಿಗೆಯಾಗಿ ಇಪ್ಪತ್ತು ದಿನ. ಮರುದಿನವೇ ಮೊಲೆ ಹಾಲು ನಿಂತುಹೋದವು. ಮಾಂಸ ತಿನ್ನುವಾಗಲೇ ತಾಯಿಯ ಮನದಲ್ಲಿ ಅಪರಾಧಿ ಪ್ರಜ್ಞೆ. ಮೊಲೆಹಾಲು ನಿಂತ ಮೇಲೆ ಅದು ಇನ್ನೂ ಹೆಚ್ಚಾಯಿತು. ಮಾಂಸ ತಿಂದದ್ದೇ ಘೋರ ಅಪರಾಧವೆನಿಸಿತು. ಮತ್ತೆ ಅಯ್ಯನವರಿಗೆ ಕೇಳಿದಾಗ, ಕನಿಷ್ಟ ಪಕ್ಷ ಸೋಮವಾರ ದಿನವಾದರೂ ಮಾಂಸ ತಿನ್ನದೇ ಶುಚಿಯಾಗಿದ್ದು ಪೂಜೆ ಮಾಡಬೇಕೆಂದು ಹೇಳಿದರಂತೆ. ಈ ರಿಯಾಯ್ತಿ ನಡವಳಿಕೆಯಿಂದಲೇ ಎರಡನೇ ಮಗುವಿಗೆ ಸಂಪೂರ್ಣ ಮೊಲೆ ಹಾಲು ಕೊಡಲು ಸಾಧ್ಯವಾಯಿತು ಎನ್ನುವುದು ನನ್ನ ತಾಯಿಯ ನಂಬಿಕೆ. ಹೀಗಾಗಿ ನನ್ನ ತಾಯಿಯ ತಲೆಗೂದಲು ಬೆಳ್ಳಗಾಗಿ ಮೊಮ್ಮಕ್ಕಳನ್ನು ಕಂಡರೂ ಸೋಮವಾರ ದಿನದ ಉಪವಾಸ ವ್ರತ ಇನ್ನೂ ಬಿಟ್ಟಿಲ್ಲ!

ಲಿಂಗುವಿನ ವಿಚಾರದಲ್ಲಿ ಸಾಯುವವರೆಗೆ ಚಾಚೂ ತಪ್ಪದೆ ನಡೆದುಕೊಂಡವಳು ನನ್ನ ಚಿಕ್ಕಜ್ಜಿ. ಎಲ್ಲವನ್ನೂ ತ್ಯಜಿಸಿ ಸಾತ್ವಿಕಳಂತೆ ಬದುಕಿ ತೋರಿಸಿದಳು. ಅಷ್ಟೊಂದು ಭಯ ಭಕ್ತಿ ಆ ಲೋಹದ ಲಿಂಗುವಿನ ಮೇಲೆ.

"ನೀನು ನಮ್ಮ ಜಾತ್ಯಾಗ ತಪ್ಪಿ ಹುಟ್ಟಿದಿ
ನೀನು ಬ್ರಾಹ್ಮಣರ ಮನ್ಯಾಗ ಹುಟ್ಟಬೇಕಾಗಿತ್ತು"

ಎಂದು ನೆರಮನೆಯವರು ಹೇಳಿದ್ದರಂತೆ. "ಬದುಕಿದರೆ ಬದುಕಬೇಕು ಚೆನ್ನಮಲ್ಲವ್ವನಾಂಗ" ಎಂದು ಅಯ್ಯನವರು ಮಾತಿನಲ್ಲಿಯೇ ಪ್ರಶಸ್ತಿಯನ್ನು ಕೊಟ್ಟಿದ್ದರಂತೆ.

ಮೂರು ತಲೆಮಾರುಗಳಲ್ಲಿ ಈ ಲಿಂಗುವಿನ ಬಗ್ಗೆ ವ್ಯಕ್ತವಾದ ವಿಚಾರಗಳು ಎಷ್ಟೊಂದು ಭಿನ್ನವೆನಿಸುತ್ತವೆ. ನಮ್ಮ ತಾತ ಭಯ ಭಕ್ತಿಯಿಂದ ಇದನ್ನು ಗ್ರಹಿಸಿದರೆ ಇನ್ನೊಬ್ಬ ತಾತ ಮಾಂಸ-ಮದ್ಯ ತ್ಯಜಿಸಿಲಾಗದೆ ಲಿಂಗುವಿಗೆ ನಮಸ್ಕಾರ ಮಾಡಿದ. ತಾತ ಹೇಳುತ್ತಿದ್ದರಂತೆ, "ನಾವು ಮುಚ್ಚುಗರು (ಜಾತಿಯ ಹೆಸರು). ನಾವು ಮುಚ್ಚು ಪಾವಡದಲ್ಲಿ ನೀರು ತರುವವರು. ನಮಗೂ ಲಿಂಗು ಇದೆ. ನಾವು ವೀರಶೈವರೇ, ಇದೆಲ್ಲ ಹರಳಯ್ಯನ ಕಾಲದಿಂದಲೂ ನಡೆದುಬಂದಿದೆ. ಮುಚ್ಚುಪಾವಡದಲ್ಲಿ ನೀರು ತರುವುದೆಂದರೆ ಹೊಳೆ ಹಳ್ಳಗಳಲ್ಲಿ ಹೊಸತಾಗಿಯೇ ಹೊಂಡ ತೆಗೆದು, ಅದರಲ್ಲಿ ಬಂದ ಹೊಸ ತಿಳಿನೀರು ತುಂಬಿಕೊಂಡು ಪುನಃ ಆ ಹೊಂಡದ ನೀರು ಯಾರೂ ತೆಗೆದುಕೊಳ್ಳದಿರಲೆಂದು ಮುಚ್ಚಿ ಬಿಡುತ್ತಿದ್ದರು. ನೀರು ತರುವ ಕೊಡದ ಮೇಲೆ ಬಿಳಿ ಪಾವಡವನ್ನು ಮುಚ್ಚಿ ಕೊಡ ಮನೆಗೆ ತರುತ್ತಿದ್ದರು. ಅಂತಹದೂ ನಮ್ಮ ಜಾತಿ" ಎಂದು ಹೇಳಿ ಹೆಮ್ಮೆ ಪಟ್ಟುಕೊಳ್ಳುತ್ತಿದ್ದರಂತೆ. ಅನಂತರ ಅವರ ಮಕ್ಕಳು ಈ ಲಿಂಗುವನ್ನು ಅಷ್ಟೇ ವ್ಯವಹಾರಿಕವಾಗಿ ಬಳಸಿಕೊಂಡದ್ದು!

ನನ್ನ (ಚಿಕ್ಕಪ್ಪ) ತಂದೆ ಸಬ್-ರಿಜಿಸ್ಟ್ರಾರ್ ಕಛೇರಿಯಲ್ಲಿ ರೈಟರ್ ಆಗಿ ಕೆಲಸ ಮಾಡುತ್ತಿದ್ದರು. ಅವರಿಗೆ ಹುನಗುಂದಕ್ಕೆ ವರ್ಗವಾದಾಗ ಬಾಡಿಗೆಗೆ ಮನೆ ಸಿಗಲಿಲ್ಲ.

ಲಿಂಗ ಬಳಸುವುದನ್ನು ನಿಲ್ಲಿಸಿದ್ದ ತಂದೆ, ಪುನಃ ಬಳಸಲು ಆರಂಭಿಸಿದರಂತೆ! ಬಾಡಿಗೆಗೆ ಇದ್ದ ಮನೆಯ ಬಾಗಿಲ ಎದುರು ಗೋಡೆಗೆ ಒಂದು ಮೊಳೆ ಒಡೆದು, ದಾರಿಗೆ ಹೋಗುವವರಿಗೆ ಬರುವವರಿಗೆ ಕಾಣುವಂತೆ ಲಿಂಗುವನ್ನು ಗೂಟಕ್ಕೆ ತೂಗುಬಿಟ್ಟಿದ್ದರಂತೆ.

ನಾನು ಸೋಲಾಪುರದಲ್ಲಿ ಕೆಲ ಕಾಲ ಶಾಲೆ ಓದಿದ ಬಗ್ಗೆ ಹಿಂದಿನ ಒಂದು ಸಂದರ್ಭದಲ್ಲಿ ಹೇಳಿದ್ದೇನೆ. ನಾನು ಕಳೆದ ಆ ದಿನಗಳು ನನ್ನ ಎರಡನೆಯ ಚಿಕ್ಕಪ್ಪನ ಮನೆಯಲ್ಲಿ, ಅವರು ರೈಲ್ವೆ ಆರಕ್ಷಕ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದರು. ಹೀಗಾಗಿ ಸರ್ಕಾರಿ ವಸತಿ ಗೃಹದಲ್ಲಿಯೇ ಅಂದರೆ, ನಾಲ್ಕು ಅಂತಸ್ತಿನ ಕಟ್ಟಡದಲ್ಲಿ ವಾಸವಾಗಿದ್ದರು. ಇವರೂ ತಮ್ಮ ಜಾತಿಯನ್ನು ನೇರವಾಗಿ ಹೇಳಿಕೊಳ್ಳಲು ಹಿಂಜರಿಯುವ ಪ್ರವೃತ್ತಿಯವರು. ತಮ್ಮ ಜಾತಿಯನ್ನು ಗೌಪ್ಯವಾಗಿಡುವುದರ ಜೊತೆಗೆ ಮಾಂಸ ತಿನ್ನುವುದನ್ನು ಗೌಪ್ಯವಾಗಿಟ್ಟಿದ್ದರು. ಕೇಳಿದವರಿಗೆಲ್ಲ ನಾವು ವೀರಶೈವರೆಂದೂ, ಒಕ್ಕಲಿಗರೆಂದೂ ಹೇಳಿಕೊಳ್ಳುತ್ತಿದ್ದರು! ಆದರೆ ಮೂಳೆ ಕಡಿಯುವ ರುಚಿ ಮಾತ್ರ ಮರೆತಿರಲಿಲ್ಲ. ವಾರಕ್ಕೆ ಒಮ್ಮೆ ಮಾಂಸ ತಂದೇ ತರುತ್ತಿದ್ದರು. ಇದೆಲ್ಲ ಕದ್ದು ಮುಚ್ಚಿ ಅಂಜುತ್ತ ಅಳುಕುತ್ತಲೇ ನಡೆಯುತ್ತಿತ್ತು. ಮಾಂಸ ತಿಂದಾದ ಮೇಲೆ ಎಲುಬುಗಳನ್ನು ಹೊರಗೆ ಎಸೆಯುವುದು ಸಮಸ್ಯೆಯಾಗಿತ್ತು. ತಿನ್ನದೇ ಉಳಿದ ಎಲುಬು-ಮೂಳೆಗಳನ್ನೆಲ್ಲಾ ಒಂದು ಪೇಪರಿನಲ್ಲಿ ಕೂಡಿ ಹಾಕಿ ಕಟ್ಟಿ ಇಡುತ್ತಿದ್ದರು. ಮರುದಿನ ನಾನು ಶಾಲೆಗೆ ಹೋಗುವಾಗ ಆ ಕಾಗದದಲ್ಲಿ ಕಟ್ಟಿದ ಗಂಟು ಮರೆಯದೆ ನನ್ನ ಚಿಕ್ಕಮ್ಮ, ನನ್ನ ಪುಸ್ತಕದ ಚೀಲದಲ್ಲಿ ಇಡುತ್ತಿದ್ದರು. ಮನೆಯಿಂದ ಸುಮಾರು ದೂರ ಹೋದ ಮೇಲೆ ಆ ಗಂಟು ಗಂಟಾಗಿಯೇ ಎಸೆದು ಮುಂದೆ ಹೋಗುತ್ತಿದ್ದೆ. ಯಾವ ಮಹಾನುಭಾವ ಬಿಚ್ಚಿ ನೋಡುವ ಸಾಹಸಕ್ಕೆ ಕೈಹಾಕುತ್ತಿದ್ದನೋ ಏನೋ ನನಗೆ ಗೊತ್ತಿಲ್ಲ!

ಈಗ ಎಲ್ಲೆಂದರಲ್ಲೇ ನಾನು ಡಂಗುರ ಸಾರಿದಂತೆ ನಾನು ಜಾತಿಯನ್ನು ಹೇಳಿಕೊಂಡು ತಿರುಗುತ್ತೇನೆ. ಮನೆಗೆ ಬಂದಾಗಲೆಲ್ಲ ನನ್ನ ತಾಯಿಯ ಕೊರಳಲ್ಲಿರುವ ಆ ಲಿಂಗು ನನ್ನನ್ನು ಸತಾಯಿಸುತ್ತದೆ. ಅದು ಹಗ್ಗಕ್ಕೆ ನೇಣು ಹಾಕಿಕೊಂಡವರಂತೆ ಜೋತಾಡುತ್ತಿರುತ್ತದೆ. ಅದನ್ನು ತೆಗೆದೊಗೆಯಲು ನನ್ನ ತಾಯಿಗೆ ಸಾಕಷ್ಟು ಬಾರಿ ಹೇಳಿದ್ದೇನೆ. ಇನ್ನೂ ಹೆಚ್ಚಿನ ಒತ್ತಾಯ ನನ್ನಿಂದ ಸಾಧ್ಯವಾಗಿಲ್ಲ. ನನ್ನ ವರ್ತನೆ ನನ್ನ ತಾಯಿಗೆ ಸಾಕಷ್ಟು ಬೇಸರ ತಂದಿದೆ ಎನ್ನುವುದರಲ್ಲಂತೂ ಸಂದೇಹವಿಲ್ಲ. ಇದೊಂದೇ ವಿಷಯದಲ್ಲಿ ಭಿನ್ನಾಭಿಪ್ರಾಯ ಎಂದಲ್ಲ. ಇಂಥ ಎಷ್ಟೋ ವಿಷಯಗಳು ನನ್ನನ್ನು ನನ್ನ ಮನೆಯವರಿಂದ ದೂರ ಸರಿಸಿವೆ. ಲಿಂಗುವಿನ ವಿಷಯದ ಬಗ್ಗೆ ತಾಯಿಗೆ ಹೇಳಿದಾಗ ಯಾವಾಗಲೂ ಗುಬ್ಬಣ್ಣಾ ಎಂದು ಆತ್ಮೀಯವಾಗಿ ಕರೆಯುವ ನನ್ನ ತಾಯಿ ನನಗೆ ಮಾರ್ಗದರ್ಶನ ಕೊಟ್ಟದ್ದು ಹೀಗೆ:

"ಏ ಹಂಗೆಲ್ಲ ಹೇಳಬಾರ್ದು
ಅದು ದೀಕ್ಷಾ ತಗೊಂಡು
ಹಾಕ್ಕೊಂಡದ ಗುಬ್ಬಣ್ಣಾ
ನೀನು ಒಂದು ಹಾಕ್ಕೊ............"

1

1

# ಹಂಡ್ಯಾನ ಲಾಳಿ ಕತ್ತರಿಸಿದ ಪ್ರಸಂಗ

ನಮ್ಮೂರ ಕೇರಿಯಲ್ಲಿ ನಾಯಿಗಳಿಗೇನು ಬರಗಾಲವಿರಲಿಲ್ಲ. ಅದರಲ್ಲಿ ಒಳ್ಳೇ ತಳಿಯ ನಾಯಿಗಳಿದ್ದಂತೆ ಬಡಕಲು ಹುರುಕುಕಜ್ಜಿಯಿಂದ ಕೂಡಿದ ನಾಯಿಗಳೂ ಇದ್ದುವು. ಒಳ್ಳೆಯ ತಳಿಯ ನಾಯಿ ಗಬ್ಬಾಗಿದೆ. ಎಂದರೆ ಸಾಕು, ಅದರ ಕುನ್ನಿ ಬೇಕು ಎಂದು ಮುಂಚಿತವಾಗಿಯೇ ಊರ ಜನ "ಬುಕ್ಕಿಂಗ್"ಗೆ ಹಾತೊರೆಯುತ್ತಿದ್ದರು.

ನಾಲ್ಕೈದು ಜನ ಸ್ನೇಹಿತರು ಸೇರಿ ನೀರಿಗೆ ಹೊರಟಿದ್ದೆವು. ನನ್ನ ಹೆಗಲ ಮೇಲೆ ಜೋಡಿ ಕೊಡಗಳಿದ್ದವು. ಕೇರಿಯಲ್ಲಿ ನಾವು ಸ್ವಲ್ಪ ಬಲ ಉಳ್ಳವರು. ಹೀಗಾಗಿ ನನ್ನ ಹೆಗಲ ಮೇಲೆ ಇದ್ದದ್ದು ಕಂಚಿನ ಕೊಡಗಳು. ಅವೇನು ಕೊಂಡು ತಂದ ಕೊಡಗಳಲ್ಲಾ ಕದ್ದು ತಂದ ಕೊಡಗಳೂ ಅಲ್ಲಾ. ಅಜ್ಜಿ ಬೇರೆಯವರಿಂದ ಅಡವಿಟ್ಟುಕೊಂಡ ಕೊಡಗಳು. ಅಡವಿಟ್ಟವರಾದರೂ ಯಾರು? ಅವರೂ ನಮ್ಮ ಜನಗಳೇ ಆಗಿದ್ದರು. ಇನ್ನುಳಿದ ಕೆಲವರು ಕಂಚಿನ ಕೊಡಗಳನ್ನು ತಂದಿದ್ದರು. ಅಜ್ಜಿಯ ಸ್ವಭಾವವೇ ಬೇರೆ. ಹೊಟ್ಟೆ ಬಾಯಿ ಕಟ್ಟಿ ಗಂಟು ಹಾಕಿ ಇಡುವವಳು. ಇದೇ ಹಣ ಅಡವಿಟ್ಟುಕೊಳ್ಳಲು ಉಪಯೋಗಿಸುತ್ತಿದ್ದಳು. ಇದಕ್ಕಾಗಿ ಚಿಕ್ಕಪ್ಪ "ಜಗಳ ಮಾಡಿದ" ಪ್ರಸಂಗಗಳೂ ಸಾಕಷ್ಟು;

ಹೊಟ್ಟೆ ಕಟ್ಟಿ ಅದ್ಯಾಕ ಮಾಡಬೇಕು? ಎಂದರೆ
"ಬಾಳೆ ಮಾಡ್ತಿರ್ಯಾ? ನೀವೇನು ಬಾಳೆ ಮಾಡ್ತೀರಿ?
ತಲೆ ಮ್ಯಾಲೆ ಮೂರು ಬಗಸಿಮಣ್ಣ್ ಹಾಕ್ಕೊಂಡು ಹೋಗೋದ
ಏನ ತಿಂದರು ಏನ ಆಕೈತಿ
ಹೊಟ್ಯಾಗ ಹೇಲ ಅಕ್ಕದ ಬಂಗಾರ ಆಗಂಗಿಲ್ಲ" ಎನ್ನುತ್ತಿದ್ದಳು.

ಇವೆಲ್ಲಾ ತೆರೆಯ ಮರೆಯಲ್ಲಿ ನಡೆಯುತ್ತಿದ್ದವು.

ನಮ್ಮೊಂದಿಗೆ ನೀರಿಗೆ ಬರುವವರಲ್ಲಿ ಮಣ್ಣಿನ ಕೊಡಗಳು ಇದ್ದವು. ನೀರಿಗೆ ಹೊರಟ ಸಮಯದಲ್ಲಿ ಸಾಕಿದ ನಾಯಿಗಳು ಹಿಂದೆ ಬೆನ್ನು ಹತ್ತಿ ಬರುವುದು ಅವುಗಳನ್ನು ಮರಳಿ ಓಡಿಸುವುದು ಸಾಮಾನ್ಯವಾದ ದೃಶ್ಯ.

ಆವತ್ತು "ಹಂಡ್ಯಾ" ನಮ್ಮ ಬೆನ್ನ ಹತ್ತಿ ಬರುತ್ತಿದ್ದ. ನನ್ನ ಸ್ನೇಹಿತ ಅದನ್ನು ಹೊಡೆದು ಓಡಿಸಿ ಬಂದ. ಸ್ವಲ್ಪ ದಾರಿ ಕ್ರಮಿಸಿ ಮರಳಿ ನೋಡಿದರೆ, ಮತ್ತೆ ಹಿಂದೆ ಬರುತ್ತಿತ್ತು.

"ಏ ನಿಮ್ಮಾ್ಮವನ ನಾಯಿಗಿ ಹುಟ್ಟಿದ್ದ"

ಎಂದು ಮಂತ್ರಗಳನ್ನು ಹೇಳುತ್ತ ಮತ್ತೆ ಬೆನ್ನಟ್ಟಿದ. ಕೊನೆಗೂ "ಹಂಡ್ಯಾ" ತನ್ನ ಹಟವನ್ನೇ ಸಾಧಿಸಿದೆ.

"ಥೂ ಸೂಳೆ ಮಗನೆ ಹಾಳಬಾವಿ ಬೀಳು"

"ಹೊಡ್ಸಗೊಂಡು ಸಾಯಿ"

ಎಂದು ಹೇಳಿ ಮುಂದೆ ಹೊರಟೆವು. ಬೆಳಗಿನ ಜಾವ ಮಳೆಗಾಲದ ಸಂದರ್ಭ ಬೇರೆ. ಒಂದು ಹೆಣ್ಣು ನಾಯಿ ಹಿಂದೆ, ಎಂಟು ಹತ್ತು ನಾಯಿಗಳು ಸುತ್ತು ತಿರುಗುವುದೂ ಅಷ್ಟೇ ಸಾಮಾನ್ಯವಾದ ನೋಟವಾಗಿತ್ತು.

"ಥೂ ಹೋಯಿತಪ್ಪೊ ನಾಯಿಗಳೆಲ್ಲಾ ಕಡ್ದು

ಸತ್ತೆ ಹೊಡಿತಾವ ಇದ್ಕ............ ಸಾಯಲಿ ಬಿಡು............"

ಎನ್ನುತ್ತ ಪಯಣಿಸಿದೆವು.

ನೀರು ತುಂಬಿಕೊಂಡು ಮನೆಗೆ ಹೋಗುವ ಸಂದರ್ಭ. ಆಗಲೇ ಹಂಡ್ಯಾ ಹೆಣ್ಣು ನಾಯಿಯ ಸ್ನೇಹವನ್ನು ಸಂಪಾದಿಸಿಕೊಂಡಿತ್ತು. ಇನ್ನುಳಿದ ನಾಯಿಗಳಿಗೆ ತನ್ನ ಗರಗಸದಂತಹ ಹಲ್ಲುಗಳನ್ನು ತೋರಿಸುತ್ತ "ಇವಳ ಹತ್ತಿರವಾದರೂ ಬಾ ನೋಡೋಣ" ಎಂದು ಸವಾಲು ಒಡ್ಡುತ್ತಿತ್ತು. ಆಗಾಗ ಕಾಲೆತ್ತಿ ಕಲ್ಲುಗಳಿಗೆ ಅಭಿಷೇಕ ಮಾಡುತ್ತ ತನ್ನ "ಶ್ವಾನತ್ವ"ವನ್ನು ತೋರಿಸುವಂತೆ ಭಾಸವಾಗುತ್ತಿತ್ತು. ತುಂಬಿದ ಕೊಡಗಳನ್ನು ಹೊತ್ತ ನಾವು, ಆ ನಾಯಿಯನ್ನು ಓಡಿಸಿಕೊಂಡು ಹೋಗುವ ಸ್ಥಿತಿಯಲ್ಲಿ ಇರಲಿಲ್ಲ. ಕೊಡದಲ್ಲಿಯ ನೀರು ಮನೆಯಲ್ಲಿ ಸುರುವಿ ಇನ್ನೊಮ್ಮೆ ಬರುವಾಗ ಮನೆಗೆ ಓಡಿಸಿದರಾಯಿತು ಎಂದು ತೀರ್ಮಾನಿಸಿ ಮುನ್ನಡೆದೆವು.

ಖಾಲಿ ಕೊಡಗಳನ್ನು ಹೊತ್ತು ಮತ್ತೆ ನೀರಿಗೆ ಹೋಗುವಾಗ ನೋಡಿದರೆ ಹಂಡ್ಯಾ ತನ್ನ ಗಂಡುತನವನ್ನು ತೋರಿಸಿಯೇ ಬಿಟ್ಟಿದ್ದ. ಶ್ವಾನ ರಾಣಿಯೊಂದಿಗೆ ತೂಗು ಮಂಚದ ಉಯ್ಯಾಲೆಯ ಹಾಸಿಗೆಯಲ್ಲಿ ಸ್ವರ್ಗ ಸುಖವನ್ನು ಅನುಭವಿಸುತ್ತಿದ್ದ! ನಮ್ಮ ಜೊತೆಗಿದ್ದು ಹಾಗೂ ದಾರಿಯಲ್ಲಿ ಹೋಗುವ ಬರುವ ಹೆಂಗಸರು ಕಳ್ಳಗಣ್ಣಿನಿಂದ ನೋಡುತ್ತ "ಟಸ್ಸಕ್"ನೇ ನಕ್ಕು ತಮ್ಮತಮ್ಮಲ್ಲಿ ಕಣ್ಣಲ್ಲೇನೋ ಮಾತನಾಡಿಕೊಳ್ಳುತ್ತ ಮುಖ ಮುಚ್ಚಿಕೊಂಡು ನಡೆದಿದ್ದರು. ನಾವೂ ನೋಡಿ ನೋಡದಂತೆ, ಹಲ್ಲು ಕಡೆಯುತ್ತ ಆ ಭೋಗ ತಾಣವನ್ನು ದಾಟಿ ಬಂದೆವು.

ಮರಳಿ ಹೋಗುವಾಗ ದಾರಿಯಲ್ಲಿ ಹಂಡ್ಯಾ ಕಾಣಲಿಲ್ಲ. ಇನ್ನೊಮ್ಮೆ ನೀರು ತುಂಬಿಕೊಂಡು ಹೋಗುವಾಗ, ಊರ ಕಸಗುಡಿಸಲು ಹೋದ ಹೆಂಗಸರಲ್ಲಿ ಅಕ್ಕ ದ್ಯಾಮವ್ವ ನಾಯಿಯ ಕಾಲಿಗೆ ಹಗ್ಗ ಕಟ್ಟಿಕೊಂಡು ಎಳೆದೊಯ್ಯುತ್ತಿದ್ದಳು. ಆ ನಾಯಿ ಬೇರೆ ಯಾವುದೋ ಆಗಿರಲಿಲ್ಲ. ಹಂಡ್ಯಾನೇ ಆಗಿತ್ತು!

ಕೇರಿಯಲ್ಲಿ ಅಕ್ಕ ದ್ಯಾಮವ್ವ ಹೇಳತೊಡಗಿದಳು:

ಆ.......... ವಾರ ಸಾಹುಕಾರ ಮಗ ಇದ್ದಾನಲ್ಲಾ............ ಗ್ಯಾ ಅವನ ಗೆಜ್ಜಾಗ ಹುಳಾ ಬೀಳಾ. ಹೀಗಾಗೆ ಓಸಿಗೆ ಗಂಡನೋದಿಲ್ಲ. ಏನು ತಾನು ಎಲ್ಲೆಂದರಲ್ಲೇ ತಗ್ಗನ್ಯಾಗ ಬೀಳಂಗಿಲ್ಲಾ? ಹೇಳಿ ಕೇಳಿ ನಾಯಿ. ತಮ್ಮ ನಾಯಿ ಮ್ಯಾಲೆ ಹತ್ತಸದ ಇದ್ರ, ನಾಯಿಗಿ ಮನ್ಯಾಗ ಕಟ್ಟಿ ಹಾಕಬೇಕು. ಹಂತವ್ರು, ಹೊರಾಗ ಯಾಕ ಬಿಡಬೇಕು?............ ಹೌದು, ನಾಯಿ ಅಂದ್ರ ಒಂದು ನಾಯಿ ಐತಿ, ನಾನು ಇಂಥಾ ಕೆಳ ಜಾತಿಯವರಿಗೆ ಸೇರದವನು, ಅದರ ಮ್ಯಾಲೆ ಹತ್ತ ಬಾರದು ಅದು ಮ್ಯಾಲಿನ ಜಾತಿಯವರು ಸಾಕಿದ್ದು ಅಂತ ಅದಕ್ಕೇನ ತಿಳೀತದಾ? ಮಾತ ತಿಳಂಗಿದ್ರ ನಾವರ ಹೇಳೇವು. ಹೋಗಿ ಹೋಗಿ ಮೂಕ ಪ್ರಾಣಿ. ಅಲ್ಲ ಯಕ್ಕಾ ಏನು ಹೋಗ್ಲಿ ಬಿಡು ಅಂತ ಹೇಳ್ತಿ ನೀನು. ಹೊಲಕ ಹೊಂಟವಾ ತಾ ಸೀದಾ ಹೊಲಕ ಹೋಗಬೇಕು. ನಾಯಿ ಪಿಟ್ಟೆ ಹಾಕಿ ನಿಂತಾವು. ನನ್ನ ಕಣ್ಣ ಎದುರಿಗೆ ಕೆಳಗಿನೋರ ನಾಯಿಯಂತ ಕೈಯಾಗ ಕುಡಗೋಲಲೆ ಲಾಳಿ (ಶಿಶ್ನ) "ಕರ್ಕ್" ಅಂತ ಕೊಯ್ದು ಬಿಡಬೇಕಾ? ಅವನ ಬಾಯಾಗ ಹುಳ ಬೀಳಾ, ನೆಲಕ ಬಿದ್ದು ಒದ್ದಾಡಕತ್ರು ಆಳಿಗೊಂದ ಕಲ್ಲಹಾಕಿ ಸತ್ತ ಹೊಡದ್ರು.

ಕೇರಿಗೆ ಬೇಟೆಯ ನಾಯಿ ಎಂದು ಹೆಸರಾದದ್ದು; ಬೇಟೆಯಾಡಲು ಹೋದಾಗೆಲ್ಲಾ ಕೇರಿಗೆ ಕೀರ್ತಿ ತಂದು ಕೊಟ್ಟ ಹಂಡ್ಯಾ ಊರವರ ಕುಡಗೋಲಿಗೆ ಬೇಟೆಯಾಗಿ, ಮಣ್ಣಾದ. ಆ ಸಾಹುಕಾರರ ಹೆಣ್ಣು ನಾಯಿ ನಮ್ಮ ಕೇರಿಯಿಂದಲೇ "ಬುಕ್" ಮಾಡಿ ತೆಗೆದುಕೊಂಡು ಹೋದದ್ದೇ ಆಗಿರಬೇಕು. ಏಕೆಂದರೆ, ಊರ ನಾಯಿಗಳಿಗೆಲ್ಲ ನಮ್ಮ ಕೇರಿಯೇ ತವರು ಮನೆ!

ಸತ್ತ ನಾಯಿ ಮಾಡಿದ ಪಾಪವಾದರೂ ಏನು?

l

l

# ನನ್ನ ಕೇರಿ ನನ್ನ ಓದು

ಹಳ್ಳಿಯಲ್ಲಿ ಹೆಂಗಸರು ಬೀಡಿ ಸೇದುತ್ತಾರೆಂದರೆ ನನಗೇನೂ ಆಶ್ಚರ್ಯವಿಲ್ಲ. ಆದರೆ ಬಾಲ್ಯದ ದಿನಗಳಲ್ಲಿ ಇಂಥ ಹೆಂಗಸರನ್ನು ಕಂಡರೆ ತದೇಕ ಚಿತ್ತದಿಂದ ಕಣ್ಣರಳಿಸಿ ಬಾಯಿ ತೆರೆದು ಅವರನ್ನೇ ನೋಡುತ್ತಿದೆ. ಇಂತಹವೇ ದೃಶ್ಯಗಳು ಮಂಗಳೂರಿನಂತಹ ನಗರದ ಪ್ರತಿಷ್ಠಿತ ಮನೆಗಳಲ್ಲಿ ಕಂಡಾಗ, ಮತ್ತೆ ನನಗೆ ಬಾಲ್ಯದ ಮನಸ್ಸು ಮರುಕಳಿಸಿದ್ದೂ ಇದೆ. ಆದರೆ ಘನವಾದ ವ್ಯತ್ಯಾಸವೆಂದರೆ ಹಳ್ಳಿಯಲ್ಲಿ ಬಿಡೆ ಇಲ್ಲದೆ ಬೀಡಿ ಸೇದುವ ಪ್ರವೃತ್ತಿ ಕಂಡಿದ್ದೆ. ಆದರೆ ಅದು ನಗರದ ಹೆಂಗಸರಲ್ಲಿ ಕಾಣದಿರುವಾಗ ನನ್ನಷ್ಟಕ್ಕೆ ನಾನೇ ಈ ಕಳ್ಳ ಹೆಂಗಸರನ್ನು ಕಂಡು ನಕ್ಕಿದ್ದೇನೆ. ಹೆಂಗಸರು ಬೀಡಿ ಸೇದುವ ಇಂಥ ಒಂದು ಚಿತ್ರ ನನ್ನ ಮನಸ್ಸಿನಲ್ಲಿ ಅಚ್ಚಳಿಯದೇ ಉಳಿದು ಈಗಲೂ ಅಂಥದ್ದೇನಾದರೂ ಕಂಡರೆ ಕುತೂಹಲದಿಂದ ಗಮನ ಸೆಳೆಯುವ ವಸ್ತುವಾಗುತ್ತದೆ ಎಂದು ಕೊಂಡಿರಲಿಲ್ಲ.

ಸೂಳೆಯರ ಕೇರಿ. ಇಲ್ಲಿ ಹಲವಾರು ಮನೆಗಳಲ್ಲಿ ಆ ಕೇರಿಗೆ ಹೊಂದಿಕೊಂಡದ್ದು ನಮ್ಮದೂ ಒಂದು ಮನೆ. ನನಗಾಗ ಪ್ರಾಥಮಿಕ ಶಾಲೆಯಲ್ಲಿ ಓದುವ ವಿದ್ಯಾರ್ಥಿಯ ವಯಸ್ಸು. ಹದಿಹರೆಯದ ಜಿಂಕೆಯಂತೆ ಓಡಾಡುವ ಒಂದು ಹೆಣ್ಣು, ಇವಳು ನಮ್ಮ ಕೇರಿಯವಳೇ ಎಂದು ಬೇರೆ ಹೇಳಬೇಕಾಗಿಲ್ಲ. ಯಾವಾಗ ನಾನು ಕಾಲೇಜು ಕಟ್ಟೆಯನ್ನು ಏರಿದೆನೋ, ಇವಳ ಕುರಿತಾಗಿ ನನಗನಿಸಿದ್ದು ಇಷ್ಟು: ಅದೊಂದು ಸಾದಗಪ್ಪಿನ ಹೆಣ್ಣು. ತೀಡಿ ತುಂಬಿದ ಮೈಮಾಟ, ಅಷ್ಟೇನೂ ಎತ್ತರವಿಲ್ಲದಿದ್ದರೂ ಆ ಕೇರಿಯ ಎಲ್ಲ ಮುದುಕಿಯರ ಮುಖ ಲಕ್ಷಣವನ್ನು ಕದ್ದಂತೆ ಇದ್ದಳು. ಹಾಗಾಗಿ ಊರಿನಲ್ಲಿ ಅಷ್ಟೇ ಅಲ್ಲದೇ ಊರ ಹೊರಗಿನ ಹಳ್ಳಿಯಿಂದಲೂ ಜನ ಅವಳಿಗೆ ಹಂಬಲಿಸಿ ಬರುತ್ತಿತ್ತು. ಈ ಸಾದಾಗಪ್ಪಿನ ಹೆಣ್ಣಿನೊಂದಿಗೆ ನನಗೆ ಚಿಕ್ಕಂದಿನಿಂದಲೂ ನಂಟು. ಆಕೆ ನೀರಿಗೆ ಹೊರಟರೆ ಆಕೆಯೊಟ್ಟಿಗೆ ನೀರೆಳೆಯುವ ಹಗ್ಗವನ್ನು ಹಿಡಿದುಕೊಂಡು ಕೆಲಬಾರಿ ಹೋಗುತ್ತಿದ್ದೆ. ಆಕೆ ಕೊಡಿಸುವ ಚುರುಮುರಿ ಉಂಡೆಯ ಆಸೆಗಾಗಿ ಈ ಕೆಲಸ. ಮುಂದೆ ನಾ ಬೆಳೆದಂತೆ ಆಕೆಯ ಮನೆಯ ನಿಕಟ ಕೆಲಸಗಳು ತಪ್ಪಿದರೂ, ಮಾತುಗಳು ತಪ್ಪಿರಲಿಲ್ಲ.

ಎಂ.ಎ. ಮುಗಿಸಿ ಊರಿಗೆ ಹೋದಾಗ ಆಕೆಯ ಅವತಾರ ಸಂಪೂರ್ಣ ಬದಲಾಗಿತ್ತು. ಹುರುಕು ಹತ್ತಿದ ನಾಯಿಯಂತೆ ಸದಾ ತನ್ನ ಮೈಯನ್ನು ತುರಿಸಿಕೊಳ್ಳುತ್ತಿದ್ದಳು. ಊರ ನಾಯಕರುಗಳ ಇತಿಹಾಸವನ್ನೇ ತನ್ನ ಮಡಿಲಲ್ಲಿ ಬಚ್ಚಿಟ್ಟುಕೊಂಡಿದ್ದಳು.

ನನ್ನ ಕೇರಿಯಲ್ಲಿ ಒಬ್ಬೊಬ್ಬರದು ಒಂದೊಂದು ಕಥೆ. ಎಲ್ಲಮ್ಮ ದೇವಿಯ ಪಾದಗಳನ್ನು ಕೊರಳಲ್ಲಿ ಕಟ್ಟಿಕೊಂಡು ಬದುಕುವವರು ಕೆಲವರು. ಗಂಡ ಬಿಟ್ಟಿದ್ದಕ್ಕೆ ಬಂದು ನೆಲೆಯೂರಿದವರು ಇನ್ನೂ ಕೆಲವರು, ಪರಂಪರೆಯ ವೃತ್ತಿಯನ್ನು ಮುಂದುವರೆಸಿಕೊಂಡು ಹೋಗುವವರು ಇನ್ನೂ ಕೆಲವರು.

ಹೀಗೆಯೇ ಬಾಲ ಬೆಳೆಯುತ್ತದೆ. ಇವರೊಂದಿಗೆ ಜೋಗುತಿ, ಜೋಗಪ್ಪಗಳು; ಸೀರೆಯುಟ್ಟ ಜೋಗಪ್ಪಗಳು. ಈಗೆ ವೈವಿಧ್ಯಮಯ ಕಥಾನಕಗಳನ್ನು ಹೊತ್ತವರ ಬೀಡು. ಇವರಲ್ಲಿಯ ಕಲೆ ಎನ್ನುವುದು ದೇವಿಯ ಹೆಸರಿಂದ ಹೊರಬಿದ್ದರೂ ಕಲೆಗಿಂತ ಭಿನ್ನವಾದುದನ್ನೇ ಊರ ಜನರ ಕಣ್ಣು ಅಲ್ಲಿ ಅರಸುತ್ತಿದ್ದವು.

ರಾತ್ರಿಯಾದರೆ ಸಾಕು ಈ ಕೇರಿಗೆ ಜೀವ ಬರುತ್ತಿತ್ತು. ಹಗಲಾದರೆ ಬಿಕೋ ಎನ್ನುತ್ತಿತ್ತು. ಕುಡಿಯುವ ತೆಕ್ಕೆಗೆ ಬಿದ್ದು ಅಳುವ, ನೆಲಬಡಿದು ಶಾಪ ಕೊಡುವ, ಮಣ್ಣು ತೂರುವ, ಕಚ್ಚೆ ಹಾಕಿ ಕದನಕ್ಕೆ ನಿಲ್ಲುವ ಕಚಾ-ಕಚಿ, ಕೇಶಾ–ಕೇಶಿ ಯುದ್ಧಗಳು ನಡೆಯುತ್ತಿದ್ದವು. ಈ ಕೇರಿಯಲ್ಲಿ ಶಾಲೆ ಓದಿದವರು ಎಂದರೆ ಸ್ವಲ್ಪ ನಮ್ಮ ಮನೆಯಲ್ಲಿಯೇ. ಹೀಗಾಗಿ, ಈ ಕೇರಿಯನ್ನು "ಮಾಲಗತ್ತಿಯವರ ಕೇರಿ" ಎಂದು ಗುರುತಿಸುವುದು ಸಾಮಾನ್ಯವಾಗಿತ್ತು.

ನಾನು ಸಾಮಾನ್ಯವಾಗಿ ಓದುವುದು ರಾತ್ರಿ ವೇಳೆಯಲ್ಲಿ. ಈ ಕೇರಿಗೆ ಜೀವಂತಿಕೆ ಬಂದಾಗ ಪಿತ್ತ ನೆತ್ತಿಗೇರುತ್ತಿತ್ತು. ಹೀಗಾಗಿ ಇವರೊಂದಿಗೆ ಕದನ. ಓದು ಪರೀಕ್ಷೆ ಹತ್ತಿರ ಬಂದಾಗ ಮಾತ್ರ ಇರುತ್ತಿತ್ತು. "ನಾವು ಓದುತ್ತಿದ್ದೇವೆ" ಎನ್ನುವ ಅಹಂ ತೋರಿಕೆಯದ್ದೇ ಹೆಚ್ಚಾಗಿರುತ್ತಿತ್ತು. ಕೆಲವು ಬಾರಿ ಪೊಲೀಸ್ ಸ್ಟೇಷನ್‌ವರೆಗೂ ಹೋಗಿದ್ದೂ ಇದೆ. ಆದರೆ ಅದರ ಪರಿಣಾಮ ಮಾತ್ರ ಸೊನ್ನೆಯಾಗಿರುತ್ತಿತ್ತು. ಏಕೆಂದರೆ ಪೊಲೀಸರು ಇಲ್ಲಿಯ ತಾಂಬೂಲಿನ ರುಚಿಗೆ ತಮ್ಮನ್ನೇ ಮಾರಿಕೊಂಡವರು. ಹೀಗಾಗಿ ಪೊಲೀಸರ ಚೊಣ್ಣಕ್ಕೆ ಇಲ್ಲಿ ಬೆಲೆಯೇ ಇರಲಿಲ್ಲ.

ನನ್ನ ಓದಿನ ಆತ್ಮೀಯ ಸ್ಥಳವೆಂದರೆ "ಪದ್ಮಾವತಿಯ ಗುಡ್ಡ". ಪದ್ಮಾವತಿಯ ದೇವಸ್ಥಾನ ಜೈನರಿಗೆ ಸಂಬಂಧಿಸಿದ್ದು. ಪ್ರಶಾಂತವಾದ ಸ್ಥಳವಿದು. ದೊಡ್ಡ ದೊಡ್ಡ ಕಲ್ಲುಬಂಡೆಗಳಿಂದ ತುಂಬಿದೆ. ಇಲ್ಲಿಯ "ಅಳಬುರಕ ಕಲ್ಲು" ಹೆಸರುವಾಸಿ (ಇದರ ಕುರಿತು ಪ್ರತ್ಯೇಕವಾದ ಒಂದು ಲೇಖನವನ್ನೇ ಬರೆದಿರುವೆ) ಈ ಸ್ಥಳಕ್ಕೆ ಜನ ಬರಲು ಹೆದರುತ್ತಿದ್ದರು. ಮೊದ ಮೊದಲು ನಮ್ಮ ಕೇರಿಯ ಒಬ್ಬನೇ ಒಬ್ಬ ವ್ಯಕ್ತಿ ಇಲ್ಲಿಗೆ ಓದಲು ಬರುತ್ತಿದ್ದ. ಜೊತೆಗೋಸ್ಕರ ಕೆಲವೊಮ್ಮೆ ನನ್ನನ್ನೂ ಕರೆದು ತರುತ್ತಿದ್ದ. ಆತನ ಹೆಸರು ಇಟ್ಟಪ್ಪ. ಈಗ ಆತ ಬ್ಯಾಂಕೊಂದರಲ್ಲಿ ಕೆಲಸಕ್ಕಿದ್ದಾನೆ. ಈತನ ಓದುವ ಹವ್ಯಾಸವೇ ನನ್ನನ್ನೂ ಓದುವಂತೆ ಆನಂತರ ಪ್ರೇರೇಪಿಸಿತು. ಈತನ ಓದು ಮುಗಿದ ನಂತರ ನಾನೊಬ್ಬನೇ ಎಷ್ಟೋ ಬಾರಿ

ಅಲ್ಲಿಗೆ ಓದಲು ಹೋಗುತ್ತಿದ್ದೆ. ಈಗಂತೂ ಅದು ಓದುಗರ ಪವಿತ್ರ ಸ್ಥಳವಾಗಿದೆ. ಎಲ್ಲೆಂದರಲ್ಲಿ ಆ ಗುಡ್ಡದ ತುಂಬೆಲ್ಲ ಓದುಗರಿರುವುದು ನೋಡಿ ನನಗಂತೂ ಎಲ್ಲಿಲ್ಲದ ಹೆಮ್ಮೆ.

ನನ್ನೊಬ್ಬನ ಓದಿನ ದಿನಗಳಲ್ಲಿ ಕೇರಿಯ ಸ್ನೇಹಿತರೆಲ್ಲಾ ನನಗೆ ಹಂಗಿಸುತ್ತಿದ್ದರು. "ನಾಳೆ ಇಂವ ಚೌಕಟ್‌ನ್ಯಾಗ ಬರ್‍ತಾನಪ್ಪಾ" ಎನ್ನುತ್ತಿದ್ದರು. "ಮತ್ತೇನಪ್ಪಾ ಚೌಕಟ್" ಎಂದೇ ಮಾತನ್ನಾರಂಭಿಸುತ್ತಿದ್ದರು. ಎಂದರೆ ಓದಿ ರ್‍ಯಾಂಕ್ ಬರ್‍ತಾನೆ. ಆಗ ಈತನ ಫೋಟೋ ಪತ್ರಿಕೆಯಲ್ಲಿ ಬರುತ್ತದೆಂದು ಗೇಲಿ ಮಾಡುತ್ತಿದ್ದರು. ಆದರೆ ಪ್ರತೀ ವರ್ಷ ಪಾಸಾಗುತ್ತಾ ಹೋದಾಗ ಅನಂತರ ಅವರು ನನ್ನ ಹಾದಿಯನ್ನೇ ತುಳಿದರು. ನನ್ನ ಹಿಂದೆ ನನ್ನ ಕೇರಿಯ ಜನ; ಕೇರಿಯ ಜನಗಳ ನಂತರ ಊರಜನವೇ ಪದ್ಮಾವತಿಯ ಗುಡ್ಡಕ್ಕೆ ಬರಲು ಪ್ರಾರಂಭಿಸಿದರು.

ಗುಡಿಯ ಸುತ್ತಲೂ ಮೂರು ಬಾವಿಗಳಿದ್ದವು. ಎರಡು ಬಾವಿಯ ನೀರು ಕೊಳಕಾಗಿ ಹೋಗಿದ್ದವು. ಮೊದಮೊದಲು ನಾನು ಪದ್ಮಾವತಿ ಗುಡ್ಡಕ್ಕೆ ಹೋಗುವಾಗ ಅದೊಂದು ದೆವ್ವಗಳ ತಾಣವೆಂದೇ ಹೆಸರುವಾಸಿ. ಸುತ್ತೆಲ್ಲ ಹಾಸಿ ನಿಂತ ಬಂಡೆಗಳು, ಅದರ ಮೇಲೆ ನರ್ತನದ ಭಂಗಿಯಲ್ಲಿ ನಿಂತ ವಿಭಿನ್ನಾಕಾರದ ಕಲ್ಲು ಬಂಡೆಗಳು. ಅದರಲ್ಲಿಯೇ ಗುಹೆಗಳು ಕಾಡುಪ್ರಾಣಿಗಳು ಇವೆಲ್ಲವೂ ಹೆಚ್ಚು ಮನ ಸೆಳೆಯುವಂತಹವು. ನಾನಂತೂ ಕಲ್ಲು ಪೊರಟೆಯ ಒಳಗೆ ಮಲಗಿ ಓದುತ್ತಿದ್ದೆ. ಐದು ಗಂಟೆಯೊಳಗಾಗಿಯೇ ಮನೆಯಲ್ಲಿರುತ್ತಿದ್ದೆ. ಒಮ್ಮೆ ನಿದ್ದೆ ಬಂದು ಕಲ್ಲಿನ ಬಂಡೆಯಡಿಯಲ್ಲಿಯೇ ಮಲಗಿಬಿಟ್ಟಿದ್ದೆ. ಎಚ್ಚರ ಆದಾಗ ಕತ್ತಲಾಗಿ ಹೋಗಿದೆ! ಎಚ್ಚರಾಗಿ ಎದ್ದು ಕುಳಿತಾಗ ಎದೆಯೊಡೆದು ನೀರಾಯಿತು. ಆ ಕಲ್ಲು ಗುಡ್ಡದ ನಡುವೆ ಎದ್ದೆನೋ ಬಿದ್ದೆನೋ ಎನ್ನುವುದು ಖಬರಿಲ್ಲದೆ ಸತ್ತೆನೋ ಕೆಟ್ಟೆನೋ ಎಂದು ಓಡೋಡಿ ಬಂದಿದ್ದೆ.

ಪರೀಕ್ಷೆ ಹತ್ತಿರ ಬಂತೆಂದರೆ ಸಾಕು. ನಾನು ಸಂಪೂರ್ಣವಾಗಿ ತಲೆ ಬೋಳಿಸಿಕೊಳ್ಳುತ್ತಿದ್ದೆ. ಏಕೆಂದರೆ, ಇದರಿಂದ ತಿರುಗಾಡುವುದಕ್ಕೆ, ಇನ್ನೊಬ್ಬರಿಗೆ ಮುಖ ತೋರಿಸುವುದಕ್ಕೆ ನಾಚಿಕೆಯಾಗುತ್ತಿತ್ತು. ಒಂದೆಡೆ ಹೆಚ್ಚು ಹೊತ್ತು ಕುಳಿತುಕೊಳ್ಳುವುದು ಅನಿವಾರ್ಯವಾಗುತ್ತಿತ್ತು. ಹೀಗಿದ್ದಾಗಲೂ ಊರಲ್ಲಿ ಅವಶ್ಯವಾಗಿ ಹೋಗಬೇಕಾಗಿ ಬಂದಾಗ ತಲೆಗೆ ಟೋಪಿ ಹಾಕಿ ಅದರ ಮೇಲೆ ಸ್ಕಾರ್ಫ ಸುತ್ತಿಕೊಳ್ಳುತ್ತಿದ್ದೆ. ಪರೀಕ್ಷೆಗೆ ಸಂಬಂಧಿಸಿದ ಪತ್ರಗಳನ್ನು ತರಲು ಕಾಲೇಜಿಗೆ ಹೋಗುವಾಗಲೂ ಇದೇ ರೀತಿ ಇರುತ್ತಿದ್ದೆ. ಆಗ ಗುರುಗಳು "ಏನು ಮಾಲಗತ್ತಿ, ಮೈಯಾಗ ಆರಾಮಿಲ್ಲೇನು?" ಎಂದು ವಿಚಾರಿಸಿದರೆ ಗತ್ತಿನಿಂದ "ಹೌದು ಸರ್" ಎನ್ನುತ್ತಿದ್ದೆ. ಏಕೆಂದರೆ, ತಲೆ ಬೋಳಿಸಿಕೊಂಡಿದ್ದಕ್ಕೆ ನಿಜ ಕಾರಣ ಕೊಡಲು ಮನಸ್ಸು ಹಿಂಜರಿಯುತ್ತಿತ್ತು.

ಕಾಲೇಜಿನ ಪರೀಕ್ಷೆಯ ಓದು ಗಂಭೀರವಾಗಿ ಪ್ರಾರಂಭವಾಗುವುದು ಪರೀಕ್ಷೆ, ಒಂದು ಎರಡು ತಿಂಗಳು ಇದೆ ಎನ್ನುವಾಗ. ವಿದ್ಯುತ್ ದೀಪ ಕೇರಿಗೆ ಪ್ರವೇಶವಾಗಿತ್ತು. ಆದರೆ ಇನ್ನೂ ಯಾರ ಮನೆಯೊಳಗೂ ಪ್ರವೇಶವಾಗಿರಲಿಲ್ಲ. ಹೀಗಾಗಿ ನಾನು ರಸ್ತೆಯ ವಿದ್ಯುತ್ ದೀಪದ ಬೆಳಕಿನಲ್ಲಿ ಕುಳಿತು ಓದುವ ರೂಢಿ ಮಾಡಿಕೊಂಡೆ. ಕೆಲವೊಮ್ಮೆ ವಿದ್ಯುತ್‌ಚ್ಛಕ್ತಿ ಹೊರಟುಹೋದಾಗಲೂ ಬುಡ್ಡಿ ಲ್ಯಾಂಪನ್ನು ಹಚ್ಚಿ ಅದೇ ವಿದ್ಯುತ್ ಕಂಬದ ಅಡಿಯಲ್ಲಿಯೇ ಕುಳಿತು ವಿದ್ಯುತ್ತಿನ ನಿರೀಕ್ಷೆಯಲ್ಲಿಯೇ ಓದುವ ವಾಡಿಕೆ ಇತ್ತು.

ಇದ್ದಕ್ಕಿದ್ದಂತೆ ಒಂದು ದಿನ ನಾನು ಓದುವ ಕಂಬದ ದೀಪ ಹತ್ತಲೇ ಇಲ್ಲ. ಆ ಕಂಬ ಅಲುಗಾಡಿಸಿದರೆ ಸಾಕು, ದೀಪ ಹತ್ತುವ ಸಾಧ್ಯತೆ ಮತ್ತು ನಂದುವ ಸಾಧ್ಯತೆಗಳೂ ಇದ್ದುವು. ಏನೆಲ್ಲಾ ಮಾಡಿದರೂ ದೀಪ ಹತ್ತಲೇ ಇಲ್ಲ. ಬಲ್ಬು ಹೋಗಿದೆ ಎಂದು ಪಂಚಾಯಿತಿಗೆ ಹೋಗಿ ದೂರು ಸಲ್ಲಿಸಿದೆ. ಮಾರನೇ ದಿನ ದೀಪ ಹತ್ತಿತು. ರಾತ್ರಿ ಒಂದು ಗಂಟೆಯ ಸಮಯಕ್ಕೆ ನಿದ್ದೆ ಕಳೆಯಲೆಂದು ಹೀಗೆ ಸುತ್ತುತ್ತಾ ಹರಕು ಪರದೆಯ ಟೂರಿಂಗ್ ಟಾಕೀಸಿನ ಎಡೆಗೆ ಸುತ್ತಿ ಬಂದು ನಾಲ್ಕು ಐದು ಗಂಟೆಯವರೆಗೆ ಓದುವ ಅಭ್ಯಾಸವಿತ್ತು.

ಮತ್ತೆರಡು ದಿನಗಳಲ್ಲಿಯೇ ಮತ್ತೆ ಬಲ್ಬು ನಂದಿಹೋಯಿತು. ಹೀಗಾದಾಗ ಬುಡ್ಡಿ ಲ್ಯಾಂಪಿನ ಅಡಿಯಲ್ಲಿ ಓದುವುದೂ ಬೇಸರವಾಗುತ್ತಿತ್ತು. ಆಗ ಹದಿನೈದು ದಿನಗಳಲ್ಲಿಯೇ ಹೀಗೆ ಮೂರು ಬಲ್ಬುಗಳು ಹೋದವು. ಪಂಚಾಯತಿಯ ಬಲ್ಬಿಗೆ ಸಂಬಂಧಿಸಿದ ಅಧಿಕಾರಿಗಳಿಗೆಲ್ಲಾ ಸಲಾಮು ಹೊಡೆದು ಅಂಗಲಾಚಿ ಇನ್ನೊಮ್ಮೆ ಹಾಗೆ ಆಗದ ಹಾಗೆ ನೋಡುವೆ ಇದೊಂದು ಬಾರಿ ಬಲ್ಬು ಹಾಕಿ ಎಂದು ಬೇಡಿಕೊಂಡೆ-

ಏನೋ ಹೀಂಗ ಹೇಳಾಕತ್ತ ಎಷ್ಟು ಸಾರಿ ಆಯ್ತು ನೀ?

ಓದ್ತೀಯೋ? ಕಂಬದ ಜೋಡಿ ಆಟಾ ಆಡ್ತೀಯಾ?

ಎಂದರು ಚೇರಮನ್ನರು.

"ಇಲ್ಲ ಸರ್, ಆ ಕಂಬದಲ್ಲಿ ಲೈಟಿನ ವಾಯರ್ ಲೂಸ್ ಆಗಿದೆ ಅಂತಾ ಕಾಣ್ತದೆ. ಆ ವಾಯರ್ ಬಿಗಿ ಮಾಡಿಸಿ ಬಲ್ಬು ಹಾಕಿದರೆ ಸರಿಯಾಗಬಹುದು ಸರ್" ಎಂದೆ.

"ಕೆ.ಇ.ಬಿ. ಯವರ ಹತ್ತಿರ ಹೇಳು" ಎಂದರು.

ಕೆ.ಇ.ಬಿ. ಆಫೀಸ್ ಇನ್ನೂ ಬಂದಿರಲಿಲ್ಲ. ಅದರ ಕುರಿತು ಕೆದಕಿ ಬರಬೇಕಾದ ಒಂದು ಬಲ್ಬು ಕಳೆದುಕೊಳ್ಳುವುದಕ್ಕೆ ಮನಸ್ಸು ಒಪ್ಪದೆ ಮೌನವಾಗಿದ್ದೆ. ಕೊನೆಗೆ ಅಧಿಕಾರವಾಣಿಯಿಂದ ಬಂದದ್ದು

"ಏ ಇದೊಂದು ಸರೆ ಹಾಕಂತ ಹೇಳೋ"

ಎಂದು ಹೇಳಿದಾಗ ಅಲ್ಲಿಂದ ಬೆನ್ನು ತೋರಿದೆ. ಮರುದಿನ ಕಂಬದ ದೀಪ ಹತ್ತಿತು ಎಂದು ಸಂತಸಪಟ್ಟರೆ ಮತ್ತೊಂದು ದಿನ ಮತ್ತೊಂದು ಘಟನೆ!

ಸುಮಾರು ರಾತ್ರಿಯ ಒಂದೂವರೆಯ ಸಮಯ. ಟಾಕೀಜಿನೆಡೆಗೆ ಸುತ್ತಿ ಅಗಸೆಯ ದಿನ್ನೆಯೇರಿ ಬರುತ್ತಿರಬೇಕಾದರೆ ಭೂತಗಳಂತೆ ಕಾಣುವ ಎರಡು ದೇಹಗಳು ನಾನು ಕುಳಿತು ಓದುವ ಕಂಬವನ್ನು ಹಿಡಿದು ಅಲುಗಾಡಿಸುತ್ತಿದ್ದವು! ನಾನು "ಎ್ರ........ಎ್ರ......" ಎಂದು ದೂರದಿಂದ ಓಡಿಬರುತ್ತಿದ್ದಂತೆ ತಮ್ಮ ಕೆಲಸದಲ್ಲಿ ಆ ಭೂತಗಳು ಸಫಲವಾಗಿದ್ದವು. ಕಂಬ ಅಲುಗಾಡಿಸುವುದರಿಂದ ಪ್ರಮುಖ ತಂತಿಯೊಂದಿಗೆ ಸುತ್ತಿದ ಬಲ್ಬಿನ ವಾಯರ್ ಅಲುಗಿ ಅಲುಗಿ ಚಿಟಚಿಟನೆ ಬೆಂಕಿ ಹೊರಟು ದೀಪ ನಂದುವುದು ನಾನೇ ಕಣ್ಣಾರೆ ಕಂಡೆ. ಕತ್ತಲಲ್ಲಿ ಆ ಕಪ್ಪು ದೇಹಗಳು ಮಾಯವಾದವು.

ಯಾರಿರಬೇಕು ಇವರು? ಹೀಗೆ ದೀಪ ಆರಿಸುವುದಕ್ಕೆ ನಾನೇನು ಇವರಿಗೆ ಕೇಡು ಮಾಡಿದ್ದೆ ಎಂದು ಆ ಬುಡ್ಡಿ ದೀಪದ ಕೆಳಗೆ ಕುಳಿತು ಚಿಂತಿಸುತ್ತಿರಬೇಕಾದರೆ, ಈ ಹಿಂದಿನ ಘಟನೆಯೊಂದು ಹೊಳೆಯಿತು.

ಒಂದು ರಾತ್ರಿ ವಿದ್ಯುತ್‌ಚ್ಛಕ್ತಿ ಹೊರಟುಹೋಯಿತು. ಮಧ್ಯ ರಾತ್ರಿಯ ಸಮಯ ಬೇರೆ. ಬುಡ್ಡಿ ಲ್ಯಾಂಪ್ ಜೊತೆಗಿದ್ದರೂ ಲ್ಯಾಂಪ್ ಹೊತ್ತಿಸಲು ದೀಪದ ಕಡ್ಡಿ ಇರಲಿಲ್ಲ. ದಾರಿಯಲ್ಲಿಯೇ ನಿಂತು ಆಗಂತುಕರಿಗಾಗಿ ಕಾಯುತ್ತಿದ್ದೆ. ನನಗಾಗಿಯೇ ಏನೋ, ಇಬ್ಬರು ವ್ಯಕ್ತಿಗಳು ಬೀಡಿ ಸೇದುತ್ತಾ ಬರುತ್ತಿದ್ದರು. ನಡಿಗೆ ತೀವ್ರಗೊಳಿಸಿ ಅವರ ಹತ್ತಿರ ಹೋದೆ. ಅವರ ಮಾತುಗಳು ಮಾಯವಾದವು ಆ ಇಬ್ಬರೂ ವ್ಯಕ್ತಿಗಳು ಗಕ್ಕನೆ ನಿಂತುಬಿಟ್ಟರು. ಅವು ಗಂಡಾಗಿರಲಿಲ್ಲ-ಹೆಣ್ಣುಗಳು! ಇಸ್ಲಾಮಿ ಹೆಣ್ಣುಗಳು! ಇಬ್ಬರೂ ಬುರುಕಾ ಹಾಕಿದ್ದರು. ಆದರೂ ಬೀಡಿ ಸೇದುತ್ತಿದ್ದರು. ಹೇಳಿಕೊಳ್ಳುವಂತಹ ಚಂದ್ರನ ಬೇಳಕೇನೂ ಅದಾಗಿರಲಿಲ್ಲ. ಕೇಳಬೇಕೋ ಕೇಳಬಾರದೋ ಎನ್ನುವ ಅನುಮಾನದಿಂದಲೇ "ಒಂದು ಕಡ್ಡಿ ಕೊಡಿ" ಎಂದು ಕೇಳಿದ್ದೇ ತಡ ಮುಖ ಮುಚ್ಚಿಕೊಂಡವರೇ ಬಿರಬಿರನೆ ಓಡುವುದೊಂದೆ ಕೆಲಸ! ಆ ನಡಿಗೆ ಮಾತ್ರ ಹೆಂಗಸರದ್ದಾಗಿರಲಿಲ್ಲ. ಆಗ ನನ್ನಷ್ಟಕ್ಕೆ ನಾನೇ ಬಿದ್ದೂ ಬಿದ್ದೂ ನಕ್ಕಿದ್ದೆ. ಆದರೆ ಆ ಕುರಿತು ವಿಚಾರಿಸಿರಲಿಲ್ಲ. ಆ ವಿಚಾರ ಹೊಳೆದದ್ದು ಮತ್ತೆ ವಿದ್ಯುತ್ ದೀಪ ಹೋದಾಗ. ನನಗೆ ಸಿಕ್ಕ ಗುಟ್ಟುಗಳು ಹಿರಿಯರೆದುರು ಬಯಲುಮಾಡಿದಾಗ ಅವರು ಅದು ವಿಶೇಷವಲ್ಲ ಎನ್ನುವಂತೆ ನಕ್ಕರು. ನಾನು ಮೊದಲ ಬಾರಿಗೆ ನಮ್ಮ ಹಿರಿಯರೆದುರು ದೊಡ್ಡ ವಿಷಯವೇ ಬಿಚ್ಚಿಡುತ್ತಿದ್ದೇನೆ ಎನ್ನುವ ಭ್ರಮೆ ಜಾರಿ ಹೋಯಿತು. ಅವರು ಕಥೆ ಮಾಡಿ ಹೇಳಿದ ವಿಷಯವನ್ನೆಲ್ಲಾ ಅರಿತ ಮೇಲೆ ನನ್ನ ಟ್ಯೂಬ್‌ಲೈಟ್ ತಲೆಗೆ ಹೊಳೆದದ್ದು ಇಷ್ಟು.

ನಾನು ದಾರಿ ದೀಪದ ಅಡಿಯಲ್ಲಿ ಕುಳಿತು ಓದುವುದು ಕೆಲವರಿಗೆ ಬೇಡವಾಗಿತ್ತು. ಅದರಲ್ಲೂ ಊರ ಶ್ರೀಮಂತರಿಗೆ ಪ್ರಾಣ ಸಂಕಟ ತಂದಿತ್ತು. ರಾತ್ರಿ ಸೂಳೇಗೇರಿಗೆ ಮೋಜು ಮಾಡಲು ಬರುವ ಈ ಜನ ನನ್ನನ್ನು ಅಲ್ಲಿಂದ ಕದಲಿಸಬೇಕು ಎನ್ನುವ ಉದ್ದೇಶ

ಹೊಂದಿದವರಾಗಿದ್ದರು. ಎಷ್ಟೇ ವೇಷ ಮರೆಸಿಕೊಂಡು ಕೇರಿಗೆ ಬಂದರೂ ಅದು ಅಷ್ಟೇ ಬೇಗ ಕೇರಿಯಲ್ಲಿ ಜಾಹೀರಾಗುತ್ತಿತ್ತು. ನಡುರಾತ್ರಿಯಲ್ಲಿ ಕುಳಿತು ಓದುವ ನನ್ನ ಓದು ಊರವರಿಗೆ ಶಾಪವಾಗಿದ್ದರೂ, ಅವರು ಕೊಡುವ ಕಿರುಕುಳ ನನಗೆ ಇನ್ನಷ್ಟು ರಾತ್ರಿಯೇ ಓದುವಂತೆ ಪ್ರೇರೇಪಿಸಿತು. ಆಗ ನಾನು ಬಿ.ಎ. ಮೊದಲ ವರ್ಷದಲ್ಲಿ ಓದುತ್ತಿದ್ದೆ. ಪಿ.ಯು.ಸಿ.ಯಲ್ಲಿ ಒಂದು ವರ್ಷ ಲಾಗ ಹಾಕಿ ಮನೆಯಲ್ಲಿಯೇ ಕೊಳೆಯುತ್ತ ಕುಳಿತಿದ್ದರ ಪರಿಣಾಮದಿಂದಾಗಿ ರಾತ್ರಿ ಓದಿಗೆ ಬದ್ಧನಾಗಿದ್ದೆ. ಈಗಲೂ ಅಷ್ಟೇ ಹಗಲಿನ ಓದಿಗಿಂತ ರಾತ್ರಿಯ ಓದು ಹೆಚ್ಚು ಪ್ರಿಯವಾದುದು.

l

l

# ಗೌರ್ಮೆಂಟ್ ಬ್ರಾಹ್ಮಣನ ರಾಘವೇಂದ್ರ ಭಕ್ತಿ

"ದಲಿತ ಪ್ರಜ್ಞೆ" ಎಂಬ "ದಾಸದ ಭೂತ" ತಲೆಯಲ್ಲಿ ಹೊಕ್ಕಾಗ, ಬ್ರಾಹ್ಮಣರೆಂದರೆ ಸಾಕು ಬೆಂಕಿ ಕಾರುತ್ತಿದ್ದೆ. "ಮಾನವ ಸಮಾಜದಲ್ಲಿ ಮನುಷ್ಯ ಸಂಬಂಧಗಳೆಲ್ಲಾ ಸತ್ತುಹೋಗಿವೆ" ಎನ್ನುವ ತೀರ್ಮಾನಕ್ಕೆ ಬಂದು ನಿಂತಿದ್ದೆ. ಈ ಬಗೆಯ ತೀರ್ಮಾನಕ್ಕೆ, ನನ್ನ ಸೀಮೀತವಾದ ಓದು ಕಾರಣವಾಗಿತ್ತು. ಇದಲ್ಲದೆ ಆವೇಶಭರಿತವಾದ ಭಾಷಣಗಳನ್ನೇ ಕೇಳುವುದರಿಂದ, ಆವೇಶ ತರಿಸುವಂತಹ ಬರಹಗಳನ್ನೇ ನನ್ನ ಓದಿಗೆ ಆಯ್ಕೆ ಮಾಡಿಕೊಳ್ಳುವುದರಿಂದ ಈ ಬಗೆಯ ತೀರ್ಮಾನಕ್ಕೆ ಬಂದು ನಿಂತಿದ್ದೆ. ಓದಿನ ವ್ಯಾಪ್ತಿಯಿಂದಾಗಿ ನನ್ನ ಕೆಲವು ತೀರ್ಮಾನಗಳು ಬದಲಾಗಿವೆ. ಹೀಗೆಂದ ಮಾತ್ರಕ್ಕೆ ನಾನು ಓದುವ, ಓದಿದ ಬರವಣಿಗೆಗಳೆಲ್ಲಾ ಪರಿಪೂರ್ಣತೆಯಿಂದ ಅಥವಾ ಸಂಪೂರ್ಣ ಸತ್ಯತೆಯಿಂದ ಕೂಡಿದವು ಎನ್ನುವ ಭ್ರಮೆಯೂ ನನ್ನಲ್ಲಿಲ್ಲ. ಆದರೆ ಈ ಶೂದ್ರ ಮತ್ತು ಬ್ರಾಹ್ಮಣರ ಬರವಣಿಗೆಗಳು ಪರಸ್ಪರ ತೌಲನೀಕರಿಸಿ ಸತ್ಯಕ್ಕೆ ಯಾವುದು ಹತ್ತಿರ ಎನ್ನುವ ತೀರ್ಮಾನಕ್ಕೆ ಬರುವಲ್ಲಿ ಸಹಕರಿಸಿವೆ.

ಬದುಕಿನ ಈ ಪಯಣದಲ್ಲಿ ಸಿಕ್ಕ ಕೆಲವು ಮನುಷ್ಯ ಸಂಬಂಧಗಳು, ಸಾಮಾಜಿಕ ಪರಿಸರ, ನೋಡುವ ದೃಷ್ಟಿಕೋನವನ್ನೇ ಬದಲಾಯಿಸಿದವು. ಶತಮಾನಗಳ ಹಿಂದಿನ ದ್ವೇಷವನ್ನು ನೆನೆ ನೆನೆದು, ಸದ್ಯದ ಬದುಕನ್ನು ಬದಲಾಯಿಸಿಕೊಳ್ಳಲು ಅವಕಾಶವಿದ್ದರೂ ಬದಲಾಯಿಸಿಕೊಳ್ಳಲಾಗದೆ, ಆವೇಶವನ್ನು ಸ್ವಾಗತಿಸಿಕೊಂಡು ಆವೇಶ ಭರಿತರಾಗುವುದರಲ್ಲಿ ಅರ್ಥವಿಲ್ಲವೆನಿಸುತ್ತದೆ. ಶತಮಾನಗಳ ತಲೆಮಾರಿನ ದ್ವೇಷಗಳನ್ನು ಇಂದಿನ ತಲೆಮಾರಿನ ಕೆಲ ಜನಾಂಗದ ಮೇಲೆ ಮಾತ್ರ ಹೇರಿ ಕೆಂಡಕಾರುವುದು ಎಷ್ಟು ಸಮಂಜಸವಾದುದು ಎನ್ನುವ ಪ್ರಶ್ನೆಗಳು ನನ್ನನ್ನು ಕಾಡಿವೆ. ಈ ಸಮಾಜದಲ್ಲಿ ಮಾನವ ಸಂಬಂಧಗಳ ಕುರಿತು ಮಾತನಾಡುವಾಗ ದಲಿತರಿರಲಿ, ಶೂದ್ರರಿರಲಿ, ಬ್ರಾಹ್ಮಣರಿರಲಿ ಎಲ್ಲ ವ್ಯಕ್ತಿಗಳನ್ನು ಒಂದೇ ತಕ್ಕಡಿಯಲ್ಲಿಟ್ಟು ತೂಗಲಾಗುವುದಿಲ್ಲ. ಇಂತಹ ವ್ಯಕ್ತಿಗಳು ನನ್ನ ಒಡಲಿನಲ್ಲಿ ಸಾಕಷ್ಟು ಜನರಿದ್ದಾರೆ. ಆದರೆ ಎಲ್ಲರ ಕುರಿತೂ ಬರೆಯಲಾಗುವುದಿಲ್ಲ.

ನಾನು ಕಾಲೇಜು ಓದುವಾಗ ನನ್ನ ಬೆನ್ನ ಹಿಂದೆ ಮತ್ತು ಮುಖದ ಮುಂದೆಯೇ ನನ್ನ ಜಾತಿಯ ಹೆಸರೆತ್ತಿ ಕರೆಯುವ, ಹಿರಿಯ ಜಾತಿಯ ವಿದ್ಯಾರ್ಥಿಗಳನ್ನು ನಾನು ದ್ವೇಷಿಸಿದ್ದಕ್ಕಿಂತ ಅವರ ಸ್ನೇಹಕ್ಕೆ ಹಂಬಲಿಸಿದ್ದೇ ಹೆಚ್ಚು. ಅವರ ಸಾಮೀಪ್ಯವನ್ನು

ಪಡೆಯುವುದೆಂದರೆ ಸ್ವರ್ಗವನ್ನೇ ಗಳಿಸಿದ ಅನುಭವವಾಗುತ್ತಿತ್ತು. ಇಂಥ ಹಿರಿಯ ಜಾತಿಯ ಸ್ನೇಹಿತರು ನನಗಿದ್ದಾರೆ ಎಂದು ಹೇಳಿಕೊಳ್ಳುವುದೇ ಹೆಮ್ಮೆಯ ವಿಷಯವಾಗುತ್ತಿತ್ತು. ಆದರೆ ಆ ಪ್ರಯತ್ನಗಳೆಲ್ಲ ಮಣ್ಣುಪಾಲಾಗುತ್ತಿದ್ದರೂ, ನಾಯಿಯಂತೆ ಬಾಲ ಬಡಿಯುವ ಪ್ರವೃತ್ತಿ ಮಾತ್ರ ಕಡಿಮೆಯಾಗುತ್ತಿರಲಿಲ್ಲ. ಅವರೆಲ್ಲ ಮಾತಿನಲ್ಲಿಯೇ ಹಂಗಿಸುತ್ತಿದ್ದರು. ಸರಕಾರದ ಮೀಸಲಾತಿ ದೊರೆಯುತ್ತಿದ್ದುದರಿಂದ ಅವರೆಲ್ಲ ನನಗೆ "ಗೌರ್ಮೆಂಟ್ (government) ಬ್ರಾಹ್ಮಣ" ಎಂದು ಕರೆಯುತ್ತಿದ್ದರು. ಇಂಥ ಬಿರುದುಗಳನ್ನೆಲ್ಲ ನಾನು ಲಜ್ಜಾವಸ್ಥೆಯಲ್ಲಿಯೇ ಹಲ್ಲು ಕಿರಿಯುತ್ತ ಸ್ವೀಕರಿಸುತ್ತಿದ್ದೆ. ನಮ್ಮ ತಂದೆ (ಚಿಕ್ಕಪ್ಪ) ಹೊಲಿಸಿದ ಅರಿವೆಗಳನ್ನು ಧರಿಸಿಕೊಂಡು ಕಾಲೇಜಿಗೆ ಹೋದರೆ "ಏನಪ್ಪಾ, ಇಂದ್ರಮ್ಮ ಕೊಡಿಸಿದ ಡ್ರೇಸ್ಸಾ?" ಎಂದು ಕೇಳಿದರೂ ನಿಜವಾದ ಉತ್ತರ ನನ್ನ ಬಾಯಿಯಿಂದ ಬರುತ್ತಿರಲಿಲ್ಲ. ಏಕೆಂದರೆ, ಆ ಉತ್ತರ ಇನ್ನೊಂದು ರೀತಿಯ ಗೇಲಿಗೆ ಅವಕಾಶ ಮಾಡುಕೊಡುತ್ತಿತ್ತು. ಹೀಗಾಗಿ ನಾನು ಸಮರ್ಥನೆಗೆ ಸ್ಪರ್ಧಿಸುತ್ತಿರಲಿಲ್ಲ.

ಸಿನಿಮಾ ತಾರೆ ರಾಜಕುಮಾರ, ಆ ದಿನಗಳಲ್ಲಿ ನನ್ನೆದೆಯ ನಾಯಕನಾಗಿದ್ದ. ಎಲ್ಲಿಲ್ಲದ ಭಕ್ತಿ ಅವರ ಮೇಲೆ ನನಗಿತ್ತು. ಇವರು ಹಾಡಿದ ರಾಘವೇಂದ್ರನ ಭಕ್ತಿಗೀತೆಗಳು ನನ್ನನ್ನು ಆಕರ್ಷಿಸಿದ್ದವು. ಆ ಹಾಡಿನ ಲಯಕ್ಕೆ, ಭಕ್ತಿಯ ಭಾವಕ್ಕೆ, ಸಂಗೀತಕ್ಕೆ ಪರವಶನಾಗಿದ್ದೆ. ಮುಂದೆ ಭಕ್ತಿಯ ಬಾಲ ಬೆಳೆಯುತ್ತ ಹೋಗಿ ರಾಘವೇಂದ್ರರವರೆಗೆ ತಲುಪಿ, ರಾಘವೇಂದ್ರ ಸ್ವಾಮಿಗಳ ಭಕ್ತನೂ ಆದೆ. ನಮ್ಮೂರಲ್ಲಿ ಹೊಸತಾಗಿ ರಾಘವೇಂದ್ರ ಸ್ವಾಮಿಗಳ ಮಠವನ್ನು ನಮ್ಮೂರ ಶ್ರೀಮಂತರೊಬ್ಬರ ನೇತೃತ್ವದಲ್ಲಿ ಕಟ್ಟಲಾಗಿತ್ತು. ನಾನು ಭಕ್ತಿಯ ಹೊಸ ಭರಾಟೆಯಲ್ಲಿ ಬೃಂದಾವನದ ಮುಂದೆ ಎದ್ದು ನಿಂತ ರಾಘವೇಂದ್ರನ ಸುಂದರವಾದ ಭಾವಚಿತ್ರವೊಂದನ್ನು ಬರೆದು ತೆಗೆದೆ. ನನ್ನ ಕೇರಿಯ ರಾಜಕುಮಾರನ ಹಾಗೂ ರಾಘವೇಂದ್ರನ ಭಕ್ತರೆಲ್ಲಾ ಸೇರಿ, (ಕೇರಿಯ ದ್ಯಾಮವ್ವ, ದುರುಗವ್ವ, ಮರಗವ್ವನ ಭಕ್ತರಿಂದ ಬೇಗುಳ ತಿಂದು) ರಾಘವೇಂದ್ರ ಸ್ವಾಮಿಗಳ ಆ ಭಾವಚಿತ್ರಕ್ಕೆ ಗಾಜಿನ ಹರಳನ್ನು ಹಾಕಿಸಿದೆವು. ಅಷ್ಟೇ ಸಂಭ್ರಮದಲ್ಲಿ ಆ ಭಾವಚಿತ್ರವನ್ನು ಮಠಕ್ಕೆ ಅರ್ಪಿಸಿದೆವು. ಆಗ ನಾನು ನುಣ್ಣಗೆ ತಲೆಯನ್ನು ಬೋಳಿಸಿಕೊಂಡಿದ್ದೆ. ಕಟ್ಟಾ ಭಕ್ತನ ಲಕ್ಷಣಗಳೆಲ್ಲ ನನ್ನ ಮುಖದ ಮೇಲಿದ್ದವು. ಆ ಭಾವಚಿತ್ರ ಅರ್ಪಿಸಿದ ನಂತರ ನನ್ನ ಜನ್ಮ ಸಾರ್ಥಕವಾಯಿತೆಂದು ಕೃತಾರ್ಥನಾಗಿದ್ದೆ!

ಆ ಮಠದ ಆರಾಧಕ, ನನ್ನ ಸ್ನೇಹಿತ ಎನ್ನಬಹುದಾದ ಸ್ನೇಹಿತನ ತಂದೆ. ಆ ಭಾವಚಿತ್ರ ಸುಮಾರು ಮೂರುವರೆ ಅಡಿ ಎತ್ತರ, ಎರಡೂವರೆಯಡಿ ಅಗಲವಿತ್ತು. ಭಾವಚಿತ್ರಕ್ಕೆ ಗಾಜು ಹಾಕಿಸಲು ಕೊಟ್ಟಾಗ ಆರಾಧಕರು ಆ ಚಿತ್ರವನ್ನು ನೋಡಿ ಮೆಚ್ಚುಗೆ ವ್ಯಕ್ತಪಡಿಸಿದ ಸುದ್ದಿ ನನ್ನವರೆಗೂ ಬಂದು ತಲುಪಿತು. ಆಗ ನನ್ನ ಕಲೆಯ ಬಗ್ಗೆ ನನಗೂ ಹೆಮ್ಮೆಯೆನಿಸಿತು.

ಭಾವಚಿತ್ರವನ್ನು ಮಠಕ್ಕೆ ತಂದಾಗ ಅರ್ಚಕರು ಸಂತೋಷದ ಹಿಗ್ಗಿನಲ್ಲಿಯೇ ಇದ್ದರು. ಮಠದ ಪ್ರಾಕಾರದಲ್ಲಿಯೇ ಭಾವಚಿತ್ರದ ಮೇಲೆ ತೀರ್ಥದ ತುಂತುರು ಅಭಿಷೇಕ (ಶುದ್ಧೀಕರಣ?) ಮಾಡಿ ಪೂಜೆ ನಡೆಸಿದರು. ನನಗಿದಾವುದರ ಪರಿವೇ ಇರಲಿಲ್ಲ. ಆದರೆ ತುಂತುರು ಹನಿಯ ನೀರು ಗಾಜಿನಿಂದ ಕಟ್ಟಿನಲ್ಲಿ ಇಳಿದು ಒಳಗಿರುವ ಭಾವಚಿತ್ರ ಒದ್ದೆಯಾಗುವುದೇನೋ ಎನ್ನುವ ಕೊರಗು ನನ್ನೊಳಗೆ ಕೊರೆಯುತ್ತಿತ್ತು. ಭಾವಚಿತ್ರ ನೋಡಿ ನೋಡಿ ಉಗುಳು ನುಂಗುತ್ತಿದ್ದೆ.

ಭಾವಚಿತ್ರದ ಮೇಲೆ ಒಂದು ಇಂಚಿನ ಗಾತ್ರದ ಅಕ್ಷರಗಳಲ್ಲಿ ಶ್ರೀ ಎ. ವಾಯ್. ಮಾಲಗತ್ತಿ ಎಂದು ಬರೆದಿದ್ದೆ. ಅದು ಭಾವಚಿತ್ರದಲ್ಲಿಯೇ ಒಡೆದು ಕಾಣುತ್ತಿತ್ತು. ಮಠದ ಪ್ರಾಕಾರ ಸುತ್ತುವಾಗ ಮಠದಲ್ಲಿಯ ಭಾವಚಿತ್ರ, ಭಾವಚಿತ್ರದಲ್ಲಿಯ ನನ್ನ ಹೆಸರು ನೋಡಿ ನೋಡಿ ಹಿಗ್ಗುತ್ತಿದ್ದೆ. ಒಳಗೆ ಗರಿಕೆದರಿದ ನವಿಲು ಕುಣಿಯುತ್ತಿತ್ತು. ಆ ಕುಣಿತಕ್ಕೆ ಅನುಗುಣವಾಗಿ ತಲೆಯ ಮೇಲಿನ ತುರಾಯಿ ಸೆಟೆದು ನಿಲ್ಲುತ್ತಿತ್ತು. ಬ್ರಾಹ್ಮಣರ ಮಠದಲ್ಲಿ ಒಬ್ಬ ಹರಿಜನನ ಹೆಸರು ಮೆರೆಯುತ್ತಿದೆ ಎನ್ನುವ ಜಂಬ ನನ್ನಲ್ಲಿ ಮನೆ ಮಾಡಿತ್ತು.

ಇದ್ದಕ್ಕಿದ್ದಂತೆ ಒಂದು ದಿನ ಆ ಮಠದಲ್ಲಿಯ ಭಾವಚಿತ್ರ ಮಾಯವಾಯಿತು! ಅರ್ಚಕರಿಗೆ ವಿಚಾರಿಸಿದರೆ ಇಂಗು ತಿಂದ ಮಂಗನ ಭಾವದಲ್ಲಿ ಖೇದವನ್ನು ವ್ಯಕ್ತಪಡಿಸುವಂತೆ "ಮೊಳೆ ಕಿತ್ತು ಬಿದ್ದು ಗಾಜು ಒಡೆದು ಹೋಯ್ತು ಅದಕ್ಕೆ ಅದನ್ನು ತೆಗ್ದು ಒಳಗಿಟ್ಟಿದೆ" ಎಂದು ಉತ್ತರಿಸಿದರು. ಮೇಲೆ ಗೋಡೆ ನೋಡಿದರೆ, ಗೊಡೆಯಲ್ಲಿಯ ಮೊಳೆ ಭದ್ರವಾಗಿತ್ತು! ಆದರೆ ಭಾವಚಿತ್ರವಿರಲಿಲ್ಲ. "ನಾಳೆ ಮತ್ತೆ ಗೊಡೆಯ ಮೇಲೆ ಭಾವಚಿತ್ರ ಬರಬಹುದು" ಎನ್ನುತ್ತ ದಿನವೂ ಮಠಕ್ಕೆ ಹೋಗಿ ಗೋಡೆ ನೋಡುತ್ತಿದ್ದೆ. ಬರಿದಾದ ಗೊಡೆಯಲ್ಲಿ ಮೊಳೆ ಮಾತ್ರ ಕಾಣುತ್ತಿತ್ತು. ಅರ್ಚಕರು ನನ್ನನ್ನು ನೋಡಿದಾಗಲೆಲ್ಲ ನೋಡಿಯೂ ನೋಡದಂತೆ ಇದ್ದು ಕೆಲಸದಲ್ಲಿ ಸೇರಿಹೋಗಿದ್ದಾರೇನೋ ಎನ್ನುವಂತೆ ನಟಿಸುತ್ತಿದ್ದರು. ಮತ್ತೆ ಕೇಳುವ ಧೈರ್ಯವೂ ಮಾಡಲಿಲ್ಲ. "ನಾನು ಮತ್ತೊಮ್ಮೆ ಗಾಜಿನ ಹರಳು ಹಾಕಿಸಿ ಕೊಡುತ್ತೇನೆ ಕೊಡಿ" ಎಂದು ಕೇಳುವ ಧೈರ್ಯವೂ ನನಗೆ ಬರಲಿಲ್ಲ.

ಊರಿಗೆ ಹೋದಾಗ, ಮಠದ ಹತ್ತಿರ ಸುಳಿದಾಗ ಆ ಭಾವಚಿತ್ರ ನೆನಪಾಗುತ್ತದೆ. "ನೀನು ಹೋಗಿ ನೋಡುವುದು ಬೇಡ, ಆ ಭಾವಚಿತ್ರ ಅಲ್ಲಿಲ್ಲ" ಎಂದು ಮನಸ್ಸು ಹೇಳಿದರೂ ಕಾಲುಗಳು ಮತ್ತೆ ಆ ಕಡೆಗೆ ಎಳೆದೊಯ್ಯುತ್ತವೆ. ಇನ್ನೊಂದು ಒಳಮನಸ್ಸು "ಅವರು ಮತ್ತೆ ಯಾಕೆ ಗೋಡೆಗೆ ಹಾಕಿರಬಾರದು" ಎಂದು ಪ್ರಶ್ನಿಸಿ ನೋಡುವಂತೆ ಮಾಡುತ್ತದೆ. ಬೆಳ್ಳನೆಯ ಗೋಡೆಯಲ್ಲಿ ಆ ಕಪ್ಪು ಮೊಳೆ ಮಾತ್ರ ಕಂಡಂತಾಗುತ್ತದೆ. ಈಗ ಅರ್ಚಕರು ಬದಲಾಗಿದ್ದಾರೆ. ಬೇರೆ ಬೇರೆ ಭಾವಚಿತ್ರಗಳು ಬಂದಿವೆ. ನಾ ಬರೆದ ಭಾವಚಿತ್ರ ಮಾತ್ರ ಅಲ್ಲಿಲ್ಲ. ದಿನಗಳು ಉರುಳಿವೆ. ಗೋಡೆಗೆ ಬಡಿದ ಮೊಳೆ ಈಗಲೂ

ನನ್ನ ಎದೆಗೆ ಬಡಿದಂತೆ ಉಳಿದುಕೊಂಡಿದೆ. ರಾಘವೇಂದ್ರನ ಭಕ್ತಿಗೀತೆ ಕೇಳಿದಾಗಲೊಮ್ಮೆ, ಆತನ ಭಾವ ಚಿತ್ರಗಳು ಕಂಡಾಗಲೊಮ್ಮೆ ಮತ್ತು ರಾಘವೇಂದ್ರನ ಮಠದ ಎದುರಿಗೆ ಹಾದು ಹೋಗುವಾಗ ಥಟ್ಟನೆ ನೆನಪಾಗಿ, ಎದೆಗೆ ಬಡಿದ ಆ ಮೊಳೆಯನ್ನೇ ಹಿಡಿದು ಅಲುಗಾಡಿಸಿದಂತಾಗುತ್ತದೆ. ಆದರೆ ಆ ಭಕ್ತಿಯ ಭಾವ ಈಗ ಶೂನ್ಯದಿಂದ ನಿಶೂನ್ಯವಾಗಿದೆ.

l

l

# ಬಾಡಿಗೆ ಬ್ರಾಹ್ಮಣನಾದ ಪ್ರಸಂಗ

ರಾಜಕುಮಾರನ ಭಕ್ತನಾಗಿ ಮುಂದೆ ರಾಘವೇಂದ್ರನ ಭಕ್ತನೂ ಆದ ಬಗ್ಗೆ ಈ ಹಿಂದೆಯೇ ಹೇಳಿದೆ. ಈ ಭಕ್ತಿ ನನ್ನನ್ನು ಮಂತ್ರಾಲಯದವರೆಗೆ ಕರೆದುಕೊಂಡು ಹೋಯಿತು. ಅದೊಂದು ವಿಶಿಷ್ಟ ಅನುಭವ. ಈ ಒಂದು ಸಂದರ್ಭದ ಅನಂತರ ಮಂತ್ರಾಲಯಕ್ಕೆ ಹೋಗಲಿಲ್ಲ ಎಂದಲ್ಲ; ಹೋದೆ. ಆದರೆ, ಮಠದ ಒಳಗಡೆ ಹೋಗದೆ ಮರಳಿ ಬಂದೆ!

ಕಾಲೇಜಿನಲ್ಲಿ ಓದುವಾಗ ವಿದ್ಯಾರ್ಥಿವೇತನದ ಹಣ ವರ್ಷಕ್ಕೊಮ್ಮೆ ಸಿಗುತ್ತಿತ್ತು. ಈ ಹಣ ಬಂದ ಸುದ್ದಿಯನ್ನು ಮನೆಯವರಿಗೆ ಹೇಳುತ್ತಿರಲಿಲ್ಲ. ಈ ಹಣದಿಂದ ಬಟ್ಟೆ ಹೊಲಿಸಿಕೊಳ್ಳುತ್ತಿದ್ದೆವು. ಒಮ್ಮೆ ಬಟ್ಟೆ ಹೊಲಿಸುವುದನ್ನು ನಿಲ್ಲಿಸಿ ಕಾಲೇಜಿನ ರಜೆಯಲ್ಲಿ ಮಂತ್ರಾಲಯಕ್ಕೆ ಹೋಗುವುದೆಂದು, ದಲಿತ ಕೇರಿಯ ಸ್ನೇಹಿತರೆಲ್ಲ ತೀರ್ಮಾನಿಸಿದೆವು. ಬಹಳ ಜನ ಒಟ್ಟಿಗೆ ಹೋದರೆ ಒಳ್ಳೆಯದಾಗುತ್ತದೆಂದು ಹಣವಿಲ್ಲದವರನ್ನೂ ನಮ್ಮ ಸಂಗ್ರಹದ ಹಣದ ವೆಚ್ಚದಲ್ಲಿಯೇ ಕರೆದುಕೊಂಡು ಹೋಗಿದ್ದೆವು.

ಮಂತ್ರಾಲಯದ ಬಗ್ಗೆ ಏನೆಲ್ಲ ಕನಸು ಕಟ್ಟಿದ್ದ ನನಗೆ ಮಂತ್ರಾಲಯ ನೋಡಿ ತುಂಬ ನಿರಾಶೆಯಾಯಿತು. "ಒಂದು ವೇಳೆ ಈ ಸ್ಥಳ ನೋಡದೇ ಇದ್ದಿದ್ದರೆ ಒಳ್ಳೆಯದಿರುತ್ತಿತ್ತು" ಎನಿಸಿತು. ಏಕೆಂದರೆ, ಅದರ ಬಗ್ಗೆ ಇರುವ ಭವ್ಯ ಕಲ್ಪನೆ ಕಳೆದುಕೊಳ್ಳುವುದಕ್ಕಿಂತ ಹಾಗೇ ಉಳಿದಿದ್ದರೆ ಒಳ್ಳೆಯದಿತ್ತು.

ಮಂತ್ರಾಲಯಕ್ಕೆ ಹೋಗುವ ಬಸ್ಸಿನ ಪಯಣದಲ್ಲಿ ಇಬ್ಬರು ರಾಘವೇಂದ್ರ ರಾಯರ ಭಕ್ತರ ಪರಿಚಯವಾಯಿತು. ಅವರಿಬ್ಬರೂ ಬ್ರಾಹ್ಮಣರು. ನಮ್ಮೊಂದಿಗೆ ತುಂಬ ಆತ್ಮೀಯರಾಗಿ ಬೆರೆತುಕೊಂಡರು. ಮಂತ್ರಾಲಯದ ಮಹಿಮೆ, ಅಲ್ಲಿಯ ಪಾವಿತ್ರ್ಯ, ಭಕ್ತಿ ಇಂಥವುಗಳೆಲ್ಲದರ ಬಗ್ಗೆ ದಾರಿಯುದ್ದಕ್ಕೂ ಹೇಳುತ್ತ ಬಂದರು. ಇಂಥ ವಿಷಯವನ್ನು ಅರಿಯದ ನಾವು, ಬಾಯಿ ತೆರೆದು ಕೇಳುತ್ತಿದ್ದೆವು. ಇಂಥ ವಿಷಯವನ್ನು ಕೇಳಲು, ಅವರಿಗೆ ನಾವೇ ಮೊದಲಿಗರಾಗಿ ಸಿಕ್ಕಿರಬೇಕು. ಇವರು ಯಾವುದೋ ಒಂದು ಅರಿವೆಯ ಕಂಪನಿಯಲ್ಲಿ ಕೆಲಸ ಮಾಡುವವರು. ಅರಿವೆಯ ವಿವಿಧ ಮಾದರಿಯ ತುಂಡುಗಳುಳ್ಳ ಪುಸ್ತಕ ತೆಗೆದು ತೋರಿಸಿದರು. ನಾವೇನು ಆರ್ಡರ್ ಕೊಡಲು ಬಟ್ಟೆಯಂಗಡಿಯುಳ್ಳವರೇ?

ಮಂತ್ರಾಲಯಕ್ಕೆ ನಾವೆಷ್ಟು ಅಪರಿಚಿತರೋ, ಪೂಜೆ ವಿಧಿ-ವಿಧಾನಗಳಲ್ಲಿಯೂ

ಅಷ್ಟೇ ಅಪರಿಚಿತರು. ಸ್ನಾನವಾದ ತಕ್ಷಣ ನೇರ ನುಚ್ಚಿನ ಗಡಿಗೆಗೆ ಹಾಯುವುದು ನಮ್ಮ ಸಂಪ್ರದಾಯವಾದ್ದರಿಂದ, ಬ್ರಾಹ್ಮಣ ಸಂಪ್ರದಾಯದ ಈ ಇಬ್ಬರ ಮೇಲೆ ಭಾರ ಹಾಕುವುದು ನಮಗೆ ಅನಿವಾರ್ಯವೆನಿಸಿತ್ತು.

ಅವರು ಸ್ನಾನ ಮಾಡುವಾಗ ನಾವೂ ಸ್ನಾನ ಮಾಡಿದೆವು. ನಾವು ಬಟ್ಟೆ ಹಾಕಿಕೊಳ್ಳುವಾಗ ನಮ್ಮನ್ನು ತಡೆದ ಅವರು "ನೀವು ಬಟ್ಟೆ ಹಾಕಿಕೊಂಡರೆ ಒಳಗಡೆ ಬಿಡಲಾರರು. ಬೇಕಾದರೆ ಪಂಚೆ ಸುತ್ತಿಕೊಳ್ಳಿ'. ಎಂದು ಸಲಹೆಯನ್ನು ಕೊಟ್ಟರು. ಬಿಳಿಯ ಟವೆಲ್ ಅಥವಾ ಪಂಚೆ ಇಲ್ಲದ ನಾವು, ರಂಗುರಂಗಿನ ಲುಂಗಿಯನ್ನೇ ಕೆಲವರು ಸುತ್ತಿಕೊಂಡರೆ ಇನ್ನು ಕೆಲವರು ಟವೆಲ್ ಸುತ್ತಿಕೊಂಡರು. ನನಗಂತೂ ಮಂತ್ರಾಲಯದ ಆವರಣ ಪ್ರವೇಶಿಸುವ ಮುನ್ನವೇ ಎದೆ ಹೊಡೆತ ಆರಂಭವಾಯಿತು. ಅಂತೆಯೇ ಇನ್ನೂ ಕೆಲವರು ಹೆದರಿದ್ದರು. ಮೊದಲನೆಯದು, ನಾವು ಕೀಳು ಜಾತಿಯವರು ಎನ್ನುವುದು. ಎರಡನೆಯದು, ನಮಗೆ ಜನಿವಾರ ಇಲ್ಲದ್ದರಿಂದ ತೀವ್ರ ಗುರುತಿಸಬಹುದು ಎನ್ನುವುದು. ಮೂರನೆಯದು, ಕನಿಷ್ಠ ಪಕ್ಷ ನಮಗೆ ತೊಡಲು ಬಿಳಿ ಬಟ್ಟೆಯಾದರೂ ಇಲ್ಲವಲ್ಲ ಎನ್ನುವುದು. ಮಾತಿನಲ್ಲಿ ಸಾಕಷ್ಟು ಆತ್ಮೀಯರೆನಿಸಿದ ಅವರಿಗೆ ನಮ್ಮಲ್ಲಿಯ ಆತಂಕವನ್ನು ಹೇಳಿಕೊಂಡೆವು. ಅವರಿಗೆ ಆಶ್ಚರ್ಯ! ನಮ್ಮ ಉಡುಗೆಗಳನ್ನು ನೋಡಿ ಮತ್ತು ನಮ್ಮಲ್ಲಿಯ ಕೆಲವರ ಬಿಳಿಯ ಮೈಬಣ್ಣ ನೋಡಿ ಅವರು ನಮ್ಮನ್ನು ಮೇಲು ಜಾತಿಯವರೆಂದೇ ಭಾವಿಸಿದ್ದರು. ನಾವು ಹರಿಜನರೆನ್ನುವುದು ಗೊತ್ತಾದಾಗ ಅವಕ್ಕಾದರು.

"ನೀವು ಜನಿವಾರದವರ ಹಾಗೆಯೇ ಕಾಣ್ತೀರಿ, ನೋಡೋದಕ್ಕೆ.

ಆದರೆ ನೀವು ಜನಿವಾರ ತೆಗೆದು ಹಾಕಿರಬೇಕು ಅಂತ ತಿಳಿಕೊಂಡಿದ್ವಿ"

ಎಂದು ಹೇಳಿದಾಗ ನಮಗೂ ಅಷ್ಟೇ ಆಶ್ಚರ್ಯ ಮತ್ತು ಸಂತೋಷ. ಅವರಿಬ್ಬರೂ ತಮ್ಮಲ್ಲಿಯೇ ಏನೋ ಮಾತನಾಡಿಕೊಂಡು ಬಂದರು, ನಾವು ಹೇಳುವ ಹಾಗೆ ಕೇಳುವ ಹಾಗಿದ್ರೆ ನಿಮ್ಮನ್ನ ಒಳಗೆ ಕರೆದುಕೊಂಡು ಹೋಗ್ತೇವೆ ಎಂದು ಹೇಳಿದರು. ಅವರ ಸ್ನೇಹಕ್ಕೆ, ಆತ್ಮೀಯತೆಗೆ ನಾವು ಹೆದರುತ್ತಲೇ ತಲೆ ಬಾಗಿದೆವು. ಅವರು ಪ್ರತಿಯೊಬ್ಬರಿಗೆ ಒಂದೊಂದು ಜನಿವಾರ ತೆಗೆದುಕೊಳ್ಳುವಂತೆ ಸೂಚಿಸಿದರು. ನಮಗೆ ಮನಸ್ಸಿಲ್ಲದಿದ್ದರೂ ಅವರ ಒತ್ತಾಯಕ್ಕೆ ಮಣಿದು ಜನಿವಾರ ಹಾಕಿಕೊಂಡೆವು. ಪರಸ್ಪರ ಒಬ್ಬರಿನೊಬ್ಬರ ಮುಖ ನೋಡಿಕೊಂಡು ಕೈಯಲ್ಲಿ ಜನಿವಾರ ಹಿಡಿದುಕೊಂಡು ಮುಸಿ ಮುಸಿ ನಗುತ್ತಲೇ ಹಿಂಬಾಲಿಸಿದೆವು. ಆಗ ಅವರು ನಮ್ಮ ನಗೆಗೆ ಎಚ್ಚರಿಕೆಯನ್ನು ಕೊಟ್ಟು

"ನಾವು ಹೇಗೆ ಹೇಳ್ತೇವೆಯೋ ಹಾಗೆ ಮಾಡ್ತಾ ಬನ್ನಿ"

ಎಂದು ಹೇಳಿ ಮುಂದೆ ಹೊರಟರು. ನಾವೂ ಅಷ್ಟೇ ಗಂಭೀರವಾಗಿ ಹಿಂಬಾಲಿಸಿದೆವು.

ನಾವು ಬಗಲಿಗೆ ಹಾಕಿಕೊಂಡ ಜನಿವಾರ ಎಷ್ಟು ಎಳೆಗಳುಳ್ಳದ್ದು ಎನ್ನುವುದು

ಗಮನಿಸಿರಲಿಲ್ಲ. ಅದರ ಒಳ ವಿವರಗಳು ಆಗ ನಮ್ಮೆಲ್ಲಾರಿಗೂ ಗೊತ್ತಿರಲಿಲ್ಲ. ಆದರೆ ಆ ಜನಿವಾರ ನನಗೆ ನೀರೆತ್ತುವ ಹಗ್ಗದ ನೆನಪು ತರುತ್ತಿತ್ತು. ಇಸ್ಲಾಮರ ಅಲಾವಿ ಹಬ್ಬದಲ್ಲಿ ಹಾಕಿಕೊಳ್ಳುವ 'ಲಾಡಿ' ಯಂತೆ ಭಾಸವಾಗುತ್ತಿತ್ತು. ಆ ಲಾಡಿ ಬಗಲಿಗೆ ಹಾಕಿದಾಗ ತುಂಬ ಕಿರಿದೆನಿಸುತ್ತಿತ್ತು. ಆದರೆ ಇದು ತುಂಬಾ ಉದ್ದಾಗಿ ಜೋತಾಡಿ ಹಾರಾಡುವಂತಿತ್ತು.

ಮೊದಲು ಅವರು ಹೊಸ್ತಿಲಿಗೆ ನಮಸ್ಕರಿಸಿ ಒಳಗೆ ಕಾಲಿಟ್ಟರು. ಅನಂತರ ಪ್ರಾಕಾರ ಸುತ್ತುವುದು, ದೀರ್ಘದಂಡ ನಮಸ್ಕಾರ ಹಾಕುವುದು, ಗಂಟೆ ಹೊಡೆಯುವುದು, ಅಕ್ಕಿ ಕಾಳುಗಳನ್ನು ರಾಘವೇಂದ್ರನಿಗೊಂದಿಷ್ಟು ಇನ್ನರ್ಧ ತಲೆ ಮೇಲೆ ಹಾಕಿಕೊಳ್ಳುವುದು, ತೀರ್ಥ ತೆಗೆದುಕೊಳ್ಳುವುದು ಹೀಗೆ ಪ್ರತಿಯೊಂದನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಿ ಜೀವದಲ್ಲಿ ಜೀವವಿಟ್ಟು ಅನುಕರಿಸುತ್ತಿದ್ದರೂ, ಅನುಕರಿಸುತ್ತಿಲ್ಲವೇನೋ ಎನ್ನುವಂತೆ ನಟಿಸುತ್ತಾ, ಮಾಡಬೇಕಾದುದೆಲ್ಲ ಮಾಡಿದ ಮೇಲೆ "ನಾವು ಗೆದ್ದೆವು" ಎಂದು ದೀರ್ಘವಾದ ಉಸಿರು ಬಿಟ್ಟೆವು. ಅನಂತರ ಅವರು

"ಬನ್ನಿ ಬನ್ನಿ, ಬೇಗ ಬನ್ನಿ
ಪಂಕ್ತಿ ಮುಗಿತಾ ಬಂತು
ಸಾಲು ಬೆಳಿತಾ ಹೋಗ್ತದೆ ಬನ್ನಿ.............."

ಎಂದು ಅವಸರ ಅವಸರವಾಗಿ ನಡೆಯುತ್ತ, ಕರೆಯತೊಡಗಿದರು. ಬ್ರಾಹ್ಮಣರಿಗಾಗಿಯೇ ಒಂದು ಊಟದ ಸ್ಥಳವಿದೆ. ಹಾಗೆಯೇ ಇನ್ನುಳಿದವರಿಗೆ ಒಂದು ಸ್ಥಳ ಬೇರೆಯೇ ಇದೆ ಎಂದು ಎರಡೂ ಸ್ಥಳಗಳನ್ನು ತೋರಿಸಿದರು.

"ಸರಿ, ಹಾಗಿದ್ದರೆ ನೀವು ನಿಮ್ಮ ಜಾಗಕ್ಕೆ ಹೋಗಿ
ನಾವು ಈ ಕಡೆಗೆ ಹೋಗ್ತೇವೆ"

ಎಂದು ಹೇಳಿದೆವು. ಆದರೆ ಅವರು ಕೇಳಲೇ ಇಲ್ಲ. ಹಾಗಿದ್ರೆ 'ನೀವು ಜನಿವಾರ ಯಾಕೆ ಹಾಕಿದಿರಿ? ಹಾಗೇ ಬರಬಹುದಿತ್ತಲ್ಲಾ ನಮ್ಮೊಂದಿಗೇನೆ ನಿಮ್ಮನ್ನು ಊಟಕ್ಕೆ ಕರೆದುಕೊಂಡು ಹೋಗಬೇಕು ಎನ್ನುವ ಕಾರಣಕ್ಕೆ ತಾನೇ ಎಲ್ಲ ಮಾಡಿದ್ದು' ಎಂದು ಒಬ್ಬಾತ ಪರಿಪರಿಯಾಗಿ ವಿವರಿಸತೊಡಗಿದ. ಹಾಗೆಯೇ ಒತ್ತಾಯದಿಂದ ಬ್ರಾಹ್ಮಣರ ಪಂಕ್ತಿಯ ಸಾಲಿನಲ್ಲಿ ನಿಲ್ಲಿಸಿದರು.

ಹೊರಗೆ ಸಾಕಷ್ಟು ಬಯಲು. ಒಂದು ದೊಡ್ಡದಾದ ಮನೆ. ಅದಕ್ಕೆ ಚಿಕ್ಕದೊಂದು ಬಾಗಿಲು. ಒಳಗೆ ಹೇಗಿತ್ತೋ ಏನಿತ್ತೋ ನಾನು ಕಾಣೆ. ಹೊರಗಡೆ ಸಾಲು ಮಾತ್ರ ಬೆಳೆಯತೊಡಗಿತ್ತು. ನಾವು ಬಾಗಿಲಿಗೆ ತುಂಬ ಸಮೀಪದಲ್ಲಿಯೇ ಇದ್ದೆವು. ಬಾಗಿಲಲ್ಲಿ ಒಬ್ಬ ವಯಸ್ಸಾದ ದ್ವಾರಪಾಲಕ. ರಾಘವೇಂದ್ರನಂತೆ ಆತನ ಹೊಟ್ಟೆಯೂ ದೊಡ್ಡದೆ. ತನಗಿಂತಲೂ ದೊಡ್ಡದಾದ ಕೋಲೊಂದನ್ನು ಕೈಯಲ್ಲಿ ಹಿಡಿದು ಆಗಾಗ ನೆಲಕ್ಕೆ ಕುಟ್ಟುತ್ತ

ಬಾಗಿಲಲ್ಲಿ ನಿಂತಿದ್ದ. ನಮಗೆ ಆತನ ಪರಿವೇ ಇರಲಿಲ್ಲ. ಇಬ್ಬರು ಬ್ರಾಹ್ಮಣ ಸ್ನೇಹಿತರಲ್ಲಿ ಅವರವರೇ ಮಾತನಾಡಿಕೊಂಡು ಒಬ್ಬಾತ ನಮ್ಮೆಲ್ಲರ ಮುಂದೆ ನಿಂತ. ಇನ್ನೊಬ್ಬಾತ ನಮ್ಮ ನಡುವೆ ನಿಂತಿದ್ದ. ನಮ್ಮ ಎದೆ ಹೊಡೆದುಕೊಳ್ಳಲು ಪ್ರಾರಂಭಿಸಿತ್ತು. ನಾವು ಹೆದರಿರುವುದನ್ನು ಕಂಡ ಮಧ್ಯದ ಬ್ರಾಹ್ಮಣ ಸ್ನೇಹಿತ -

"ನೀವೇನು ಹೆದರಬೇಡಿ, ಅವರು ಏನು ಕೇಳಿದ್ರು
ನಾವೇ ಹೇಳ್ತೇವೆ.
ನೀವು ಸುಮ್ಮನೆ ನಮ್ಮ ಹಿಂದೆ ಬನ್ನಿರಿ............"

ಎಂದು ಸಾಂತ್ವನ ಹೇಳುತ್ತಿದ್ದ. "ನಿಮಗೇನಾದ್ರು ಕೇಳಿದರೆ 'ನಾವು ಇವರ ಜನ' ಎಂದು ಹೇಳಿ ಬಿಡಿ" ಎಂದು ಮುಂದೆ ನಿಂತವ ಹೇಳಿದ. ಅವರೆಲ್ಲರ ನಡುವೆ ಕಪ್ಪು ಮನುಷ್ಯ ನಾನೇ. ಮತ್ತೊಬ್ಬಾತನಿದ್ದರೂ ಆತನಲ್ಲಿ ಅಂತಹ ಹೆದರಿಕೆ ಇರಲಿಲ್ಲ. ನನ್ನಲ್ಲಂತೂ ಆಂತರಿಕವಾದ ದ್ವಂದ್ವ ಯುದ್ಧ ಸ್ವಲ್ಪ ತೀವ್ರತರವಾಗಿಯೇ ಆರಂಭವಾಯಿತು. ಅಷ್ಟರಲ್ಲಿಯೇ ಸಾಲಿನ ಬಾಲವೂ ಬೆಳೆಯುತ್ತ ಹೋಯಿತು. ಆ ಸಾಲಿನಲ್ಲಿ ನಮಗೆ ಪರಿಚಯದವರು ಯಾರಾದರೂ ಇದ್ದಾರೆಯೇ ಎಂದು ಮರಳಿ ನೋಡಿದೆ. ಸಾಲಿನಲ್ಲಿ ನಮ್ಮೂರಿನ ಒಬ್ಬ ಹೆಸರಾಂತ ಬ್ರಾಹ್ಮಣರಿದ್ದಾರೆ. ಅವರು ನಮ್ಮೂರಿನಲ್ಲಿ ರಾಘವೇಂದ್ರರಾಯರ ಮಠವನ್ನು ಕಟ್ಟಿಸಿದವರು! ನಮ್ಮ ಮಾವ ಅವರಿಗೆ ಪರಿಚಯಸ್ಥ! ಆತ ನಮ್ಮನ್ನು ಗುರುತಿಸಿದರೆ? ಏನು ಮಾಡಬಹುದು? ಏನೆಲ್ಲ ಊಹಿಸಿ ತಣ್ಣಗಾದೆ. ವಿಷಯ ತಿಳಿದಾಗ ಇನ್ನುಳಿದವರೂ ತಣ್ಣಗಾದರು, ಇನ್ನಿಬ್ಬರು 'ಏ ಅವರೇನು ನಮಗ ಗುರ್ತಸ್ತರಾ? ಎಂದ, ತಾತ್ಸಾರದಿಂದ. "ನಾನಂತೂ ಹೋಗ್ತೇನೆ ನನಗೇನು ಪ್ರಸಾದ ಬೇಡ" ಎಂದು ಹೊರ ಬೀಳಲು ಪ್ರಯತ್ನಿಸತೊಡಗಿದೆ. ನನ್ನ ಹಿಂದೆ ಮತ್ತಿಬ್ಬರು ಸರಿದಾಡತೊಡಗಿದರು.

"ನೀವು ಈಗ ಹೋದ್ರೆ, ದೊಡ್ಡ ಅನಾಹುತ ಮಾಡ್ತೀರಿ
ಜನ ಎಲ್ಲಾ ನೋಡ್ತಾರೆ
ಯಾಕೆ ಅಂತಾ ಕೇಳಿದ್ರೆ ಏನು ಹೇಳ್ತೀರಿ?
ಆಗಲೆ ಜನಾ ಒಳಗಡೆ ಹೋಗ್ತಾ ಇದ್ದಾರೆ..........."

ಎನ್ನತೊಡಗಿದ. ದ್ವಾರಪಾಲಕ ಒಬ್ಬೊಬ್ಬರಿಗೆ ಒಳಗೆ ಬಿಡತೊಡಗಿದ್ದ. ನಡುವೆ ಒಬ್ಬೊಬ್ಬರಿಗೆ ಏನೋ ವಿಚಾರಿಸಿ, ಒಳಗೆ ಬಿಡುತ್ತಿದ್ದ. ಇದು ನೋಡಿದ ಮೇಲಂತೂ ನಾನು ಕರಗಿ ನೀರಾದೆ. ಬೆವರು ಬೇಡವೆಂದರೂ ವರೆಸಿಕೊಂಡರೂ ಮತ್ತೂ ಮತ್ತೂ ಬರುತ್ತಿತ್ತು. ಬಾಯಿ ಬತ್ತಿ ಗಂಟಲು ಒಣಗಿದಂತಾಗುತ್ತಿತ್ತು. ಅಷ್ಟರಲ್ಲಿಯೇ ಪ್ರವೇಶದ ಬಾಗಿಲು ಬಂದೇ ಬಿಟ್ಟಿತು. ಒಬ್ಬ ಬ್ರಾಹ್ಮಣ ಸ್ನೇಹಿತ ಆತನ ಹಿಂದಿದ್ದ ಮೂರು ಜನ ಕೇರಿಯ ಸ್ನೇಹಿತರು ಒಳಗೆ ಹೋದರು ಒಳಗೆ ಹೋದ ಕೇರಿಯ ಸ್ನೇಹಿತರು ಬಣ್ಣದಲ್ಲಿ

ಬೆಳ್ಳಗಿದ್ದರೂ ಅವರಲ್ಲಿ ಸಾಕಷ್ಟು ಧೈರ್ಯವೂ ಇತ್ತು. "ಯಾಕಲೇ ಅಂಜತೀಯಾ?" ಎಂದು ನನ್ನನ್ನೇ ಕೇಳುತ್ತಿದ್ದರು. ಬಾಗಿಲಿಗೆ ನಾನು ಬಂದಾಗ ಆ ದ್ವಾರಪಾಲಕ ದಕ್ಕನೇ ಕೋಲನ್ನು ನೆಲಕ್ಕೆ ಕುಕ್ಕರಿಸಿದ. ನಾನು ಇಡಿಯಾಗಿ ಕುಸಿದೆ.

"ಯಾವ ಗೋತ್ರ?"

ಎಂದು ಆತ ಪ್ರಶ್ನಿಸಿದ. ನನಗೆ ಗೋತ್ರವೆಂದರೆ ಗೊತ್ತಿರಲಿಲ್ಲ. ಏನು ಹೇಳಬೇಕು? ಬಾಯಿ ಬಡಿಯುವ ಮುನ್ನವೇ ಒಳಗೆ ಹೋದ ಬ್ರಾಹ್ಮಣ ಸ್ನೇಹಿತ ಮುಂದೆ ಬಂದು,

"ಅವರು ನಮ್ಮ ಜನ"

ಎಂದ. ಆಗ ಆ ದ್ವಾರಪಾಲಕ

"ನಾನು ಕೇಳಿದ್ದು ನಿನಗಲ್ಲ"

ಎಂದು ಆತನಿಗೆ ಗದರಿಸಿದ. ಮುಂದಿದ್ದ ಬ್ರಾಹ್ಮಣ ಏನೋ ಹೇಳಲು ಪ್ರಯತ್ನಿಸಿದ. ಪ್ರಯೋಜನವಾಗಲಿಲ್ಲ. ನಾನು ಬರೀ ಉಗುಳು ನುಂಗ ತೊಡಗಿದೆ. ಆಗ ನಾನೇ

"ನನಗೆ ಗೊತ್ತಿಲ್ಲ"

ಎಂದು ನಡುಗುವ ಧ್ವನಿಯಲ್ಲಿಯೇ ಹೇಳಿದೆ. ದ್ವಾರಪಾಲಕ ನನ್ನ ರಟ್ಟೆಯನ್ನು ಹಿಡಿದಿದ್ದ. ಸಾಲಿನಲ್ಲಿದ್ದ ಜನ ಮುಂದೆ ಸೇರತೊಡಗಿದರು. ನನ್ನವರು ಮೆಲ್ಲನೆ ಜರೆಯುತ್ತಿದ್ದರು. ಆ ಬ್ರಾಹ್ಮಣ ಸ್ನೇಹಿತರು ದ್ವಾರಪಾಲಕನೊಂದಿಗೆ ವಾದಿಸತೊಡಗಿದ್ದರು. ನಾನು ಅವರ ಕೈಯಿಂದ ತಪ್ಪಿಸಿಕೊಂಡವನೇ ಅಳುವ ದನಿಯಲ್ಲಿಯೇ ಓಡಿ ಹೋದೆ. ಹಿಡಿದಿದ್ದು ಆ ಇಬ್ಬರು ಬ್ರಾಹ್ಮಣರನ್ನು.

ನಾವು ಅಲ್ಲಿಂದ ಪರಾರಿಯಾದವರೇ, ನೇರ ನಾವು ಇಳಿದುಕೊಂಡ ಜೋಪಡಿಗೆ ಬಂದೆವು. ನಮ್ಮ ಲಗೇಜು ಪ್ಯಾಕ್ ಮಾಡಿ ಬಸ್ಸಿನಲ್ಲಿ ಕುಳಿತರೂ ಸಮಾಧಾನವಿರಲಿಲ್ಲ. ಯಾರಾದರೂ ಬರುವರೋ ಹಿಡಿದುಕೊಳ್ಳುವರೋ ಎಂಬ ಭಯ. ಬಸ್ಸು ಬಿಟ್ಟಾಗ ತಣ್ಣನೇ ದೀರ್ಘವಾದ ಉಸಿರು ಬಿಟ್ಟೆವು. ಉದ್ವೇಗ ಕಡಿಮೆಯಾದಾಗ ಆ ಇಬ್ಬರೂ ಬ್ರಾಹ್ಮಣರನ್ನು ಆ ಜನಗಳ ತಂಡದ ನಡುವೆ ಬಿಟ್ಟು ಬರಬಾರದಿತ್ತೆನಿಸಿತು. ನಮ್ಮೊಲ್ಲೊಂದು ಕ್ಲಿಕ್ ಥರ್ಡ್ ಕ್ಯಾಮರಾ ಇತ್ತು: ಅವರ ಭಾವಚಿತ್ರ ತೆಗೆದುಕೊಂಡಿದ್ದೆವು. ಜೊತೆಗೆ ವಿಳಾಸವನ್ನೂ ಕೊಟ್ಟಿದ್ದರು. ಭಾವಚಿತ್ರ ಕಳುಹಿಸುವುದರೊಂದಿಗೆ ಕ್ಷಮೆ ಯಾಚಿಸಿ ಪತ್ರ ಬರೆದೆ. ಇದು ಕಾಲೇಜಿನ ಕೊನೆಯ ಓದಿನ ಹಂತದಲ್ಲಿ ನಡೆದಿದ್ದರೂ ಎಂ.ಎ. ಗೆ ಬಂದಾಗ ಈ ವಿಷಯದ ಕುರಿತು ಒಂದು ಕವನ ಬರೆದೆ. ಅದು ನನ್ನ ಮೊದಲ ಸಂಕಲದಲ್ಲಿ ಪ್ರಕಟವಾಗಿದೆ.

l

l

# ನನ್ನ ಮಾಜಿ ಪ್ರೇಯಸಿ

ನಿನ್ನ
ಬಾಳೆಂಬ ಚಿಗುರು
ಬುತ್ತಿಯಲಿ
ನನಗೊಂದು ತುತ್ತಿರಲಿ.

ನೀನು
ಯಾವಾಗ ಬಂದು
ಮನೆ ಮಾಡಿದೆಯೋ ನಾ ಅರಿಯೆ
ಆದರೆ
ಅಗಲುವ ಗಳಿಗೆ ಹತ್ತಿರವಾದಂತೆ
ನಾನೇನೂ ಕಳೆದುಕೊಳ್ಳುತ್ತಿದ್ದೇನೆ
ಎನ್ನುವ ಅನುಭವ.

ಈ ಎರಡು ಮಿನಿ ಕವನಗಳು ನನ್ನ ಆಟೋಗ್ರಾಫಿನಲ್ಲಿ ಅವಳು ಬರೆದರೂ, ಇಂದಿಗೂ ಅವು ನನ್ನ ನಾಲಿಗೆಯ ಮೇಲೆ ಬರೆದಂತಿವೆ. ಅವಳು ಚೆಲುವೆ. ರೂಪ ರಾಶಿಯನ್ನೇ ಹೊತ್ತು ನಿಂತ ರೂಪಸಿ. ನಾನು ಅವಳ ಬಗ್ಗೆ ವರ್ಣಿಸಿ ಜಂಭ ಕೊಚ್ಚಿಕೊಳ್ಳುತ್ತಿದ್ದೇನೆ ಎಂದು ಭಾವಿಸಬೇಡಿ. ನಾನು ಎಂ.ಎ. ಓದುವಾಗ ಅವಳಿಗೆ "ಕ್ಯಾಂಪಸ್ಸಿನ ಕ್ವೀನ್" ಎಂದೇ ಕರೆಯುತ್ತಿದ್ದರು. ಮನ ಬಂದಾಗ ನಾಲ್ಕು ಸಾಲಿನ ಕವನ ಗೀಚುವ ಈ ಕವಯಿತ್ರಿ, ಮೊದಲನೆಯ ಕವನ ನಾನು ಎಂ.ಎ. ಮುಗಿಸಿ ಹೊರ ಹೋಗಬಹುದೆಂಬ ಸಂದೇಹವಿದ್ದಾಗ ಗೀಚಿದ್ದರೆ, ಮತ್ತೊಂದು ಕವನ ಅವಳು ಎಂ.ಎ. ಮುಗಿಸಿ ಹೋಗುವಾಗ ಗೀಚಿದ್ದು.

ಹಗಲು ಕತ್ತಲು ಮಾಡಿ ಬೆತ್ತಲಾಗುವ ರಾಜ-ರಾಣಿಯರು, ಮದುವೆ ಎಂದಾಗ ಕೈ ಕಾಲಾಡದೆ ನರ ಸತ್ತಂತೆ ನಿಂತು ಬಿಡುತ್ತಾರೆ. ಜಾತಿ ಎಂಬ ಗೋಡೆಯ ಮೇಲೆ ಹಗಲಿನಲ್ಲಿಯೇ ದೀಪ ಹಚ್ಚಿಟ್ಟು ಜಾರಿಕೊಳ್ಳುತ್ತಾರೆ. ಇಂಥ ರಾಜ-ರಾಣಿಯರ ಕತೆಗಳು ನೇರ ದಾಖಲಾಗುವುದು ಅಪರೂಪ ಅಲ್ಲವೇ?

ನನ್ನ ಅವಳ ಸಂಬಂಧ ಆರು ವರ್ಷಗಳಿಗೂ ಮೀರಿದ್ದು, ಇಷ್ಟು ದೀರ್ಘ ಕಾಲ ಜೊತೆಗಿದ್ದು ಅಗಲಿ ಹೋಗಿರುವುದು ಒಂದು ದುರಂತ ಎನ್ನಬಹುದು ನೀವು. ಇದೇನು ದೊಡ್ಡದಲ್ಲ. ಇದಕ್ಕಿಂತಲೂ ಹೆಚ್ಚಿನ ಅವಧಿ ಮೀರಿ ಮಾಯವಾದ ಉದಾಹರಣೆಗಳು ನನ್ನ ಕಣ್ಣ ಮುಂದಿವೆ.

ಹೀಗಾಗಿ ಈ ಕಣ್ಣು ಮುಚ್ಚಾಲೆಯ ಆಟಗಳ ಬಗ್ಗೆ ನನಗೀಗ ಅಯ್ಯೋ ಎನಿಸುವುದಿಲ್ಲ. ಆದರೆ ಗಂಡಾಗಲಿ ಹೆಣ್ಣಾಗಲಿ ಕೈ ಮೇಲೆ ಕಾಲಿಟ್ಟು ಹೋದಾಗಲೂ ಅಪವಾದವನ್ನು ತಮ್ಮ ಮೇಲೆ ಹೊತ್ತುಕೊಂಡು ಮಹಾನ್ ತ್ಯಾಗಿಗಳಂತೆ ನಿಲ್ಲುವ ಹಾಗೂ ಪ್ರಪಂಚದ ಭಾರವನ್ನೆಲ್ಲ ತಾವೇ ಹೊತ್ತು ಕೊಂಡವರಂತೆ ನಡೆಯುವವರನ್ನು ನೋಡಿದಾಗ, ನೆನದಾಗ ಅಯ್ಯೋ ಎನಿಸುತ್ತದೆ. ಒಂದು ಹಂತದಲ್ಲಿ ನನ್ನ ಇರುವಿಕೆ ಇದಕ್ಕಿಂತ ಭಿನ್ನವಾಗಿರಲಿಲ್ಲ. ಪೆಟ್ಟಿನ ಮೇಲೆ ಪೆಟ್ಟು ಬಿದ್ದಾಗ, ಭಾವನಾತ್ಮಕ ಬದುಕಿಗಿಂತ ವ್ಯಾವಹಾರಿಕ ಬದುಕೇ ಈ ನೆಲದಲ್ಲಿ ಪ್ರಧಾನವಾಗಿದೆ ಎನ್ನುವುದರ ದರ್ಶನವಾದಾಗಿನಿಂದ, ತ್ಯಾಗ ಪ್ರಾಮಾಣಿಕತೆ ವಿಧೇಯತೆ ಎನ್ನುವ ಶಬ್ದಗಳ ಬಗ್ಗೆ ಬರೆಯಲು ಮಾತನಾಡಲು ಮುಜುಗರ ಎನಿಸುತ್ತದೆ. ಈ ಶಬ್ದಗಳಿಗೀಗ ಅರ್ಥವಿಲ್ಲ. ಇವು ಕೇವಲ ಶಬ್ದಕೋಶದಲ್ಲಿಯ ಪದಗಳಾಗುತ್ತಿವೆ. ಈ ಮಾತಿಗೆ ನನ್ನ ಇತ್ತೀಚಿನ ಅನುಭವಗಳು ಸೇರಿಕೊಂಡಿವೆ. ಆದರೆ ಈ ಮಾತಿನ ಭಾರವನ್ನೆಲ್ಲ ನನ್ನವಳ ಮೇಲೆ ಹೊರಿಸಲು ನನ್ನಲ್ಲಿ ಬಲವಿಲ್ಲ.

ಎಣ್ಣೆ ತೀರಿದ ದೀಪ ನಂದುವ ಮುನ್ನ ಹೆಚ್ಚು ಬೆಳಕು ಕೊಟ್ಟು ಹೇಗೆ ಆರಿ ಹೋಗುತ್ತದೆಯೋ ಹಾಗೆ, ಕೊನೆಕೊನೆಯಲ್ಲಿ ಪರೀಕ್ಷೆಗೊಡ್ಡಿಕೊಂಡ ಹನುಮ ಎದೆ ಹರಿದು ರಾಮನನ್ನು ತೋರಿಸಿದಂತೆ ಅವಳು ತನ್ನ ಎದೆಯನ್ನು ಹರಿದು ಪ್ರಾಮಾಣಿಕತೆ ನಿಸ್ಸಹಾಯಕತೆಯನ್ನು ತೋರಿಸಲು ಪ್ರಯತ್ನಿಸುತ್ತಿದ್ದಳು. ಆರನೇ ವರ್ಷದ ಒಂದು ದಿನ

"ಅರವಿಂದ............
ನೀನು ಕೊನೆಯ ಪಕ್ಷ
ಲಿಂಗಾಯತ ಜಾತಿಯಲ್ಲಾದರೂ ಹುಟ್ಟಬಾರದಾಗಿತ್ತೆ?"

ಎಂದು ಕಣ್ಣೀರಿಟ್ಟಳು. ಅವಳ ಕಣ್ಣೀರಲ್ಲಿ ಕಪಟತನವಿರಲಿಲ್ಲ. ಪ್ರಾಮಾಣಿಕತೆ ತುಂಬಿ ತುಳುಕುತ್ತಿತ್ತು. ಸಾಮಾಜಿಕ ವ್ಯವಸ್ಥೆಯ ಬಗ್ಗೆ ಹೇಸಿಗೆ ಇದ್ದರೂ ಅದನ್ನು ಮೀರಿ ಬರುವ ಬಲವಿರಲಿಲ್ಲ. ಸಲೀಸಾಗಿ ತನ್ನಷ್ಟಕ್ಕೆ ತಾನೇ ಪಾರಾಗಬಹುದಾದ ಮಾರ್ಗವನ್ನು ಹುಡುಕುತ್ತಿದ್ದಳು. ಅಂದು ನಾನೇನೋ ಬಾಯಿ ತಪ್ಪಿ ನುಡಿದ ಮಾತದು.

"ಏನ್ಮಾಡ್ಲಿ ನಿನಗೋಸ್ಕರವಾಗಿ
ನಾನು ಲಿಂಗಾಯತ ಜಾತಿಯಲ್ಲಿ ಹುಟ್ಟಲಿಲ್ಲವಲ್ಲ ಅಂತಾ
ನನಗೇನು ಹಳಹಳಿ ಅನಸ್ತಾ ಇಲ್ಲ.

ನೀನು ಇಲ್ಲ ಅಂದುಕೊಂಡು ಬಾವಿನೂ ಹಾರೋದಿಲ್ಲ

ನಾನು ಬದುಕಿ ತೋರ್ಸ್ತೇನೆ............?"

ಎಂದಿದ್ದೆ. ನಮ್ಮ ಪ್ರೀತಿ, ನಾಲ್ಕನೆಯ ವರ್ಷದಲ್ಲಿ ಉತ್ತುಂಗ ಶಿಖರವನ್ನೇರಿತ್ತು. ಆಗ

ಮನೆಯವರು ಮದುವೆಗೆ ಒಪ್ಪದೇ ಹೋದರೂ

ನಾವು ಕೊನೆ ವರೆಗೆ ಹೀಗೆ ಇದ್ದು ಬಿಡೋಣ

ಏನು ತಾಳಿ ಕಟ್ಟಿ ಕೊಂಡ್ರೇನೆ ಮದುವೇನಾ ?............

ಎಂದಾಗ ಅವಳ ಬಂಡಾಯದ ದನಿಗೆ ನನ್ನಷ್ಟಕ್ಕೆ ನಾನೇ ತಲೆದೂಗಿದ್ದೆ. ನಾನು ಆಯ್ಕೆ ಮಾಡಿದ ಹುಡುಗಿ ಎಂತಹ ಎದೆಗಾತಿ ಎಂದು ಒಳಗೊಳಗೆ ಉಬ್ಬುತ್ತಿದ್ದೆ. ಆದರೆ ಮೊದಲನೆಯ ವರ್ಷದ ನಮ್ಮ ಸ್ನೇಹದಲ್ಲಿ ಆಕೆಯ ದನಿ ತದ್ವಿರುದ್ಧವಾಗಿತ್ತು.

"ರಾಘವೇಂದ್ರನ ಮೇಲೆ ಆಣೆ ಮಾಡಿ ಹೇಳ್ತೀನೆ

ಅರವಿಂದ್......... ನೀನು ನನಗೆ ಅಣ್ಣ ಇದ್ದ ಹಾಗೆ

ನೀನು ನನಗೆ ತಂಗಿ ಅಂತಾ ಕರೆ."

ಎಂದು ಹೇಳಿ, ಆಕಸ್ಮಿಕವಾಗಿ ಮಂತ್ರಾಲಯಕ್ಕೆ ಹೋದಾಗ ಆಣೆ ಮಾಡಿಸಿಕೊಂಡಿದ್ದಳು. ಆಕೆಯನ್ನು ಮದುವೆಯಾಗಬೇಕಾಗಿದ್ದ ಮಾವನ ಮಗ ವಿದೇಶಕ್ಕೆ ಹೋಗಿ ಬೇರೆಯವಳನ್ನು ಕಟ್ಟಿಕೊಂಡು ಬಂದ. ನಮ್ಮ ಸ್ನೇಹ ಆಗ ಎರಡನೇ ವರ್ಷದಲ್ಲಿತ್ತು. ತನ್ನ ಭಾವಿ ಪತಿಯ ವಿಚಾರದಿಂದಾಗಿ ಗೋಗರೆದು ಅತ್ತಳು. ಆವಾಗ ನಾನೆಂದಿದ್ದೆ,

"ಅವನೊಬ್ಬನೇನಾ ಚೆಲುವಾ?

ಅವನು ಮಾಡಿದ ಹಾಗೆ ನೀನು ಯಾಕೆ ಮಾಡಿ ತೋರಿಸಬಾರ್ದು?"

ಎಂದಿದ್ದೆ. ಆಗ ನನ್ನಲ್ಲಿ ನನಗೆ ಯಾವುದೇ ಅಸ್ತಿತ್ವ ಇರಲಿಲ್ಲ. ಅವಳು ಹೇಳಿದ್ದಕ್ಕೆಲ್ಲ ಹೂಂ ಗುಟ್ಟುವ ಕುರಿಯಾಗಿದ್ದೆ. ನಾನು ಹಾಗೆ ಹೇಳಿದಾಗಿನಿಂದ "ನಾನು ನನ್ನ ನಾಲಿಗೆಯನ್ನು ಬದಲಾಯಿಸಿಕೊಂಡೆ ಅರವಿಂದ್.........." ಎಂದಳು. ಹೀಗೆ ಅವಳು ತನ್ನ ಮಾರ್ಗದ ಬದಲಾವಣೆಗಳನ್ನು ಸೂಚಿಸಿದರೂ, ಅವಳಲ್ಲಿ ನಿರ್ಣಯಗಳಿದ್ದವು. ಅವಳ ನಿರ್ಣಯಗಳಿಗೆ ಹೊಂದಿಕೊಳ್ಳುವ ವ್ಯಕ್ತಿ ನಾನಾಗಿದ್ದೆ. ಏಕೆಂದರೆ, ಯಾವುದೇ ಕಾರಣಕ್ಕೆ ಆ ಸುಂದರಿಯ ಸ್ನೇಹವನ್ನು ಕಳೆದುಕೊಳ್ಳಲು ಮನಸ್ಸಿರಲಿಲ್ಲ. ಮತ್ತೆ ಕೆಲವು ತಿಂಗಳುಗಳ ಅನಂತರ

"ಹೊಲ್ಯಾರ್ಗಿ ಬ್ರಾಹ್ಮಣರ್ಗಿ ಕೂಡಿದ್ರೆ

ಅದು ಮುಗದ್ಹಾಂಗ......... ವಾಲಗಾ ಊದಸೋಣೇನ ಮತ್ತೆ...........

ಎನ್ನುತ್ತಿದ್ದ, ಒಬ್ಬ ನನಗಿಂತಲೂ ಕಪ್ಪು ಮುಸುಡೆಯ ಲಿಂಗಾಯಿತ ಕ್ಲಾಸ್ ಮೇಟ, ಈತನಿಗೆ

ತಾನು ಮೇಲು ಜಾತಿಯವನೆಂಬ ಹಮ್ಮು. ಆಗಾಗ ಆಕೆಯ ಬಾಲವನ್ನೂ ಬಡೆಯುತ್ತಿದ್ದ. ಆಕೆ ಧೂಳು ಜಾಡಿಸಿ ಕೊಂಡಂತೆ ಜಾಡಿಸಿ ಬಿಡುತ್ತಿದ್ದಳು. ಮತ್ತೊಬ್ಬ ಗುಂಗುರು ಕೂದಲಿನ ಚಲುವ. ನವೋದಯದ ಕಾದಂಬರಿಕಾರರು ವರ್ಣಿಸುವ ನಾಯಕ ಇದ್ದಂತೆ. ಈತ ನನ್ನ ಕವಿ ಮಿತ್ರ ಕೂಡ.

"ಲೇ ನಮಗೆ ಗೊತ್ತಿಲ್ಲೇನಲೇ
ಅದರಾಗ ಮೈ ಮಣ್ಣಾಗೈದ
ಮೊದಲ ತಂಗಿ
ಆ ಮ್ಯಾಲಿ ತಗಿ............."

ಹೀಗೆ ನೇರವಾಗಿ ನನ್ನ ಸ್ನೇಹಿತರು ಮುಖದ ಮೇಲೆ ಹೊಡೆದ ಹಾಗೆ ಹೇಳಿದರೂ ಅದಾವುದರ ಪರಿವೇ ಇಲ್ಲದೆ ಲಜ್ಜಾವಸ್ಥೆಯಲ್ಲಿಯೇ ಸ್ವೀಕರಿಸುತ್ತಿದ್ದೆ. ಅವರು ಹೇಳುವುದು ಸತ್ಯಕ್ಕೆ ಸಂಪೂರ್ಣ ಹೊರತಾಗಿಯೂ ಇರಲಿಲ್ಲ. ಆದರೆ ಇಂಥ ಮೇಲು ಜಾತಿಯ ಜಂಭದ ಕೋಳಿಗಳನ್ನು, ಕಾದಂಬರಿಯ ಹೀರೋಗಳಂತಿರುವ ನಾಯಕರನ್ನು ಬಿಟ್ಟು, ನನ್ನಲ್ಲಿ ಏನನ್ನು ಕಂಡು ಸೋತಿದ್ದಳೋ ಆ ನೀಳ ಮೂಗಿನ ಚಲುವೆ. ಮೈಯಲ್ಲಿ ಖಂಡವಿರಲಿಲ್ಲ. ಮುಖದ ಮೇಲೆ ಅವಳ ಕಾಲ ಬಣ್ಣವೂ ಇರಲಿಲ್ಲ. ಭೂತ ವರ್ತಮಾನ ಮತ್ತು ಭವಿಷ್ಯತ್ತಿನ ಬಗ್ಗೆ ಮಾತನಾಡುವ ಸ್ನೇಹಿತರು ಒಮ್ಮೊಮ್ಮೆ ದೇವರಾಗುತ್ತಾರೆ ಮತ್ತೊಮ್ಮೆ ರಾಕ್ಷಸರಾಗುತ್ತಾರೆ. ಆದರೆ ಮಾನವರಂತೆ ವರ್ತಿಸುವ ಸಂದರ್ಭಗಳು ತುಂಬಾ ಕಡಿಮೆ ಎನಿಸುತ್ತದೆ. ಹೀಗಾಗಿಯೇ ಮನುಷ್ಯ ಸಂಬಂಧಗಳ ನಡುವೆಯೂ ಜನಪದರು ಪ್ರಾಣಿ ಪಕ್ಷಿ ಗಿಡ ಮರ ಬಳ್ಳಿಗಳನ್ನು ಪ್ರೀತಿಸುತ್ತಾರೆನಿಸುತ್ತದೆ. ಕೇವಲ ಉಪಯುಕ್ತತೆಗಾಗಿ ಅಥವಾ ಉಪಭೋಗಕ್ಕಾಗಿ ಪ್ರೀತಿಸುತ್ತಾರೆಂದು ಹೇಳಿದರೆ, ಮೇಲ್ಪದರಿನ ಮಾತಾಗುತ್ತದೆ.

ಆರು ವರ್ಷಗಳ ನನ್ನ ಅವಳ ಸಂಬಂಧದ ಬಗ್ಗೆ ಬರೆಯುತ್ತ ಹೋದರೆ "ದೊಡ್ಡ ಮನೆ" ಗಾತ್ರದ ಕಾದಂಬರಿಯೆ ಆಗಬಹುದು. ಆದರೆ ನಾನಿಲ್ಲಿ ಸಾರಿಗೆ ಒಗ್ಗರಣೆ ಹಾಕಲು ಒಂದೆರಡು ಕೊತ್ತಂಬರಿಯ ಎಲೆಗಳನ್ನು ಬಳಸಿದಂತೆ ಸಾಂದರ್ಭಿಕವಾಗಿ ಮುಂದಿಡಬಯಸುತ್ತೇನೆ.

ನಾನು ಅವಳನ್ನೋ ಅವಳು ನನ್ನನ್ನೋ ಒಟ್ಟಿನಲ್ಲಿ ಒಬ್ಬರಿಗೊಬ್ಬರು ಅವಲಂಬಿಸಿ ಬರಿಗೈ ಬಂಟರ ಹಾಗೆ ತಿರುಗಿದ ದಿನಗಳವು. ಕರ್ನಾಟಕದ ಪ್ರವಾಸಿ ಸ್ಥಳಗಳಲ್ಲಿ ನಾವು ನೋಡದೇ ಇರುವ ಸ್ಥಳಗಳು ಕಡಿಮೆ. ಅಷ್ಟೇ ಏಕೆ? ತೆಲುಗು ತಮಿಳು ಭಾಷೆಯ ನಾಡುಗಳಲ್ಲಿ, ನಮ್ಮ ಹರುಕು ಮುರುಕು ಹಿಂದಿ - ಇಂಗ್ಲಿಷ್ ಭಾಷೆಯ ಜೊತೆಗೆ ಅಲ್ಲಿಯ ನೀರಿಗೆ ಕರಿ-ಬಿಳಿ ಮೈಯನ್ನು ತೋರಿಸಿ ಬಂದಿದ್ದೇವೆ.

ಎಷ್ಟೇ ಆದರೂ ಅವಳದು ತುಪ್ಪ ತಿಂದ ತಲೆ. ಎಲುಬು ಕಡಿದ ನನ್ನ ತಲೆಗಿಂತ

ಅವಳ ತಲೆ ನೂರು ಕಿಲೋಮೀಟರ್ ವೇಗದಲ್ಲಿಯೇ ಓಡುತ್ತಿತ್ತು. ಅದು ಗೊತ್ತಾದಾಗ ನನ್ನ ಟ್ಯೂಬ್ ಲೈಟ್ ತಲೆಗೆ ನಾನೇ ಬಡಿದುಕೊಳ್ಳುತ್ತಿದ್ದೆ. ಆಗ ಅವಳು ಏ ಹಾಗೆಲ್ಲಾ ಹೊಡಿಬೇಡಾ ನಾನು ಮೆಚ್ಚಿದ ಜಾಣ ತಲೆ ಅದು ಎಂದು ಅಡ್ಡಿ ಮಾಡುತ್ತಿದ್ದಳು. ಇದು ಪ್ರಯಾಣ ಮಾಡುವಾಗ, ಲಾಡ್ಜ್‌ನಲ್ಲಿ ಇಳಿದುಕೊಳ್ಳುವಾಗ, ಮುದುಕ ಅಥವಾ ಮುದುಕಿಯರ ಎದುರು ಪ್ರಕಟಗೊಳ್ಳುತ್ತಿತ್ತು.

ಮೊದಲು ತಾನೇ ಲಾಡ್ಜ್‌ಗೆ ಹೋಗಿ ರೂಂ ಬುಕ್ ಮಾಡಿ ಬರುತ್ತಿದ್ದಳು. ಅನಂತರ ನನಗೆ ಬರಲು ಹೇಳುತ್ತಿದ್ದಳು. ಕೆಲಬಾರಿ ನಾವು ಹೊಸದಾಗಿ ಮದುವೆಯಾದ ಮದುಮಕ್ಕಳಂತೆ ವರ್ತಿಸಿದ್ದು ಉಂಟು. ಕಟ್ಟಿಕೊಂಡ ಮಡದಿಯಂತೆ ತಲೆ ಬಾಗಿಸಿಕೊಂಡು ಹಿಂದಿಂದೆ ಬರುತ್ತಿದ್ದಳು. ನೋಡಿದವರಿಗೆ ತಾಳಿ ಎಂದು ಭ್ರಮಿಸುವಂತೆ ಕರಿದಾರ ಕಟ್ಟಿದ್ದಳು. ನಾನೂ ಅಷ್ಟೇ, ಮಾಡಿಕೊಂಡ ಗಂಡನಂತೆ ಠೀವಿಯಿಂದ ಹೋಗುತ್ತಿದ್ದೆ. ಅಷ್ಟೇ ಗಂಭೀರವಾಗಿ ಮಾತನಾಡುತ್ತಿದ್ದೆ. ನಮ್ಮನ್ನು ನೋಡಿ ಮದುವೆಯಾದವರೂ ನಾಚಬಹುದಿತ್ತು. ನನ್ನ ನಟನೆ ನನಗೆ ನಾಚಿಕೆ ತರುವಂತಿದ್ದರೂ ಆ ಬೇಸರ ಹೊರಗೆ ತೋರಿಸಿಗೊಡುತ್ತಿರಲಿಲ್ಲ. ಏಕೆಂದರೆ, ನನ್ನ ಸಂಶೋಧನೆಯ ಕೆಲಸ ಆರಂಭವಾದಾಗ, ನನ್ನ ಬದುಕಿನ ಗುರಿಗಳೆಂದು ಹಾಕಿಕೊಂಡಿದ್ದು ಎರಡು. ಒಂದು, ಅವಳನ್ನು ಮದುವೆಯಾಗುವುದು, ಎರಡನೆಯದು, ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಸಾಯುವ ಮುನ್ನವೇ ಒಂದು ದಿನವಾದರೂ ಅಧ್ಯಾಪಕನೆಂದು ಕೆಲಸ ಮಾಡುವುದು. ಅವಳನ್ನು ನನ್ನವಳನ್ನಾಗಿಸಿಕೊಳ್ಳುವ ಹಂಬಲ ನನ್ನ ತನವನ್ನು ತೊರೆಯುವಂತೆ ಮಾಡಿತ್ತು.

ನನ್ನ ನಿನ್ನ ಸಂಬಂಧಗಳ
ಬಗ್ಗೆ ಎಲ್ಲಿಯೂ ಏನೂ
ಮಾತನಾಡಬೇಡವೆಂದಿತು ಕೋಗಿಲೆ.
ಕಾಗೆ ಕೂಡಲೇ ತನ್ನ ತುಟಿ ಹೊಲೆದುಕೊಂಡಿತು.

ರಸ್ತೆಯಲ್ಲಿ ಸಿಕ್ಕಾಗ ಎಂದೂ
ನಗಲೂ ಬೇಡವೆಂದಿತು ಕೋಗಿಲೆ.
ಕಾಗೆ ಅಂದಿನಿಂದ ನಗುವನ್ನೇ ಮರೆತುಬಿಟ್ಟಿತು.

ಜನರ ನಡುವೆ ಇದ್ದಾಗ ನನ್ನ ಗುರುತಿಸಲೂ
ಬೇಡವೆಂದಿತು ಕೋಗಿಲೆ.
ಕಾಗೆ ಜಗತ್ತಿನ ಗುರುತನ್ನೇ ಕಳೆದುಕೊಂಡಿತು.

ಮುಂದಿನ ಜನ್ಮದಲ್ಲಿ ಮತ್ತೆ
ಭೇಟಿಯಾಗೋಣವೆಂದಿತು ಕೋಗಿಲೆ.
ಕಾಗೆ ಅಂದಿನಿಂದ ಪುನರ್ಜನ್ಮ ನಂಬಹತ್ತಿತ್ತು.

ಈ ಕವನ ನಾನು ಬರೆದುದಲ್ಲ. ಸರಜೂ ಕಾಟ್ಕರ್ ಬರೆದದ್ದು. ಇದನ್ನು ಓದಿದಾಗೆಲ್ಲ ಈ ಕವನ ನನ್ನನ್ನೇ ಉದ್ದೇಶಿಸಿ ಬರೆದಿರಬೇಕು ಎನಿಸಿದ್ದು ಹಲವು ಬಾರಿ. ಅಷ್ಟು ಅಕ್ಷರಶಃ ಹೋಲಿಕೆ ಇತ್ತು, ನಾನು ತುಳಿದ ಹಾದಿ. ನಾನು ನಾಸ್ತಿಕನೆಂದು ಹೇಳಿಕೊಂಡರೂ ಅವಳು ಮುಗುಳು ನಕ್ಕು ಮಂತ್ರಾಲಯದ ರಾಘವೇಂದ್ರರಾಯರ ಪಡಿಯಚ್ಚಿರುವ ಉಂಗುರ ನನ್ನ ಬೆರಳಿಗೇರಿಸಿದಾಗ, ನಾನು ನಾಚುತ್ತಲೇ ಸ್ವೀಕರಿಸಿದ್ದೆ. ಆಗ ನಾಸ್ತಿಕತೆ ನನ್ನೆದೆಗೆ ಒದ್ದು ಯಾವ ರೋಗಿಷ್ಠ ದೇವಾಲಯ ಸೇರಿತೋ ನಾನರಿಯೆ.

ರಾಯರುಂಗುರ ಬೆರಳಲಿಟ್ಟಾಗ
ಅವಳೆದುರು ನಾ ನಾಸ್ತಿಕ
ಎಂಬುದು ಮರೆತೇ ಹೋಗಿತ್ತು
ಎಲವೋ ಮಿತ್ರ
ಆಸ್ತಿಕನಾದೆಯಲ್ಲ ಎಂದಾಗ
ರಾಯರು ಕಾಣದಂತೆ
ಬೆರಳಲ್ಲೇ ಮರೆಮಾಡಿಕೊಂಡೆ.

ಅಂದು ನನ್ನ ಅವಳ ಪ್ರೀತಿಗೆ ಬೆಂಕಿ ಬಿದ್ದ ದಿನ. ಮಂಗಳೂರಿನ ವಿಳಾಸಕ್ಕೆ ತಂತಿ ಸಂದೇಶ ಬಂತು. ನಾನು ಸರಕಾರಿ ಕಾಲೇಜಿನಲ್ಲಿ ನೌಕರಿಗೆ ಸೇರಿ ಇಪ್ಪತ್ತೇರಡು ದಿನಗಳು ಮಾತ್ರ ಸಂದಿದ್ದವು. ತಂತಿ ಸಂದೇಶದಲ್ಲಿ, "ಲಾಡ್ಜ್‌ನಲ್ಲಿ ರೂಂ ಬುಕ್ ಆಗಿದೆ ನೀನು ಕಾರವಾರಿಗೆ ಬಾ" ಎಂದಿತ್ತು. ಅಂತೆಯೇ ಹೊರಟು ನಿಂತೆ. ದಾರಿಯುದ್ದಕ್ಕೂ ಹಳೆಯ ನೆನಪುಗಳು ಮರುಕಳಿಸಿದವು.

ನಾನು ಊಟ ಮಾಡುವುದನ್ನು ನಿಲ್ಲಿಸಿ ಹದಿಮೂರು ದಿನಗಳಾಗಿದ್ದವು. ಕೈ ಕಾಲುಗಳಲ್ಲಿ ಜೀವವೇ ಇಲ್ಲದಂತಾಗಿತ್ತು. ಎದ್ದು ನಿಂತರೆ ಕಣ್ಣಿಗೆ ಕತ್ತಲು ಕವಿಯುತ್ತಿತ್ತು. ತಿನ್ನುವುದಕ್ಕೆ ಕಣ್ಣೆದುರು ಸಾಕಷ್ಟು ಇದ್ದಾಗಲೂ, ತಿನ್ನದೇ ಬಾಯಿ ಒಣಗಿಸಿಕೊಂಡು ಬಿದ್ದು ಕೊಂಡಿದ್ದೆ. ಅವು ತುಂಬ ಹಟಮಾರಿತನದ ದಿನಗಳಾಗಿದ್ದವು. ಈ ಬಗೆಯ ಹಟಮಾರಿತನವನ್ನು ಕಲಿಸಿದ್ದು ಅವಳೇ.

ಅವಳೋ ಮಹಾ ಹಟಮಾರಿ. ತಾನು ಅಂದುಕೊಂಡದ್ದನ್ನು ನನ್ನಲ್ಲಿ ಸಾಧಿಸಿಕೊಳ್ಳದೆ ಬಿಡುತ್ತಿರಲಿಲ್ಲ. ಆಗ ನನ್ನ ಸಂಶೋಧನೆಯ ಮೊದಲ ಬರವಣಿಗೆ ಆರಂಭವಾಗಿತ್ತು. ಹೀಗಾಗಿ ಅವಳಿಗೆ ಪತ್ರ ಬರೆಯುವುದು ತಡವಾಗುತ್ತಿತ್ತು. ಒಂದು ಬಾರಿ ಅವಳು ಪತ್ರ ಬರೆದು ಇಪ್ಪತೆರಡು ದಿನಗಳಾದರೂ ನಾನು ಉತ್ತರಿಸಿರಲಿಲ್ಲ. ಅವತ್ತು ಅವಳ ತಂಗಿ ಅವರೂರಿಂದ ಬಂದವಳೇ ಬಿರುಸಿನ ಧ್ವನಿಯಲ್ಲಿ ಮಂತ್ರ ಪಠಣ ಆರಂಭಿಸಿದಳು. ನಾನು ಕುಗ್ಗಿ ಹೋದೆ. ಅನಂತರ ಆಕೆಯೇ ಸ್ವರವಿಳಿಸುತ್ತ

"ನೀನೊಂದು ಹುಚ್ಚ ಅವಳೊಂದು ಹುಚ್ಚಿ.......<br>
ಯಾಕೆ ನೀನು ಪತ್ರ ಬರಿಲಿಲ್ಲ ಅರವಿಂದಾ?<br>
ಅವಳು ಊಟಬಿಟ್ಟು ಕೂತು ಬಿಟ್ಟಿದ್ದಾಳೆ<br>
ಅಷ್ಟು ತಿಳಿಯೋದಿಲ್ಲವೇನೋ ನಿನಗೆ<br>
ಮೊದಲು ಲೆಟರ್ ಬರೆ........."

ಎನ್ನುತ್ತಿದ್ದಂತೆ ಅವಳ ಕಣ್ಣುಗಳು ಒದ್ದೆಯಾಗಿದ್ದವು. ನಾನು ಮೌನವಾಗಿದ್ದೆ. ಆಕೆ ಊಟ ಮಾಡದಿರಲು ಕಾರಣವಿತ್ತು. ಅವಳು ಈ ಮೊದಲೇ ನನ್ನೆದುರು ಪ್ರಮಾಣ ಮಾಡಿದ್ದಳು:

"ಅರವಿಂದ್ ನೀನೆಂದೂ ಹುಡುಗಾಟಕ್ಕೂ ಪತ್ರ ಬರೆಯುವುದಕ್ಕೆ<br>
ತಡಮಾಡಬೇಡಾ, ಹಾಗೆ ಮಾಡಿದರೆ ಪರಿಣಾಮನೇ ಬೇರೆ ಆಗ್ತದೆ."

ಏನಾಗ್ತದೆ? ಎಂದು ಪ್ರಶ್ನಿಸಿದರೆ

"ನಾನು ಬರೆದ ಪತ್ರಕ್ಕೆ ನೀನು ಎಂಟು ದಿನಗಳಲ್ಲಿಯೇ ಉತ್ತರ ಕೊಡಬೇಕು. ಒಂದು ವೇಳೆ ನಿನ್ನ ಪತ್ರ ಬರದೆ ಹೋದ್ರೆ, ಒಂಬತ್ತನೇ ದಿನದಿಂದ ಒಂದು ಹೊತ್ತು ಊಟ ಮಾಡುವುದನ್ನೇ ಬಿಟ್ಟು ಬಿಡುತ್ತೇನೆ.........."

"ಮೈ ಕರಗಿಸೋದಕ್ಕೆ ಒಳ್ಳೆ ಉಪಾಯ ಮಾಡಿದೀಯಾ!..........."

"ನೋಡು ನೀನು ಜೋಕ್ ಮಾಡಬೇಡ. ನಾನು ಸೀರಿಯಸ್ಸಾಗಿ ಹೇಳ್ತಾ ಇದ್ದೀನಿ......"

"ಆಯಿತು ಮಾರಾಯಿತಿ ಹೇಳು ನೋಡೋಣ........"

"ನಿನ್ನ ಪತ್ರ ಬರಲಿಲ್ಲ ಅಂದ್ರೆ ಒಂಬತ್ತನೇ ದಿನದಿಂದ ಒಂದು ಹೊತ್ತು ಊಟ ಕಟ್ ಮಾಡ್ತೇನೆ, ಎರಡನೇ ವಾರದಲ್ಲೂ ಪತ್ರ ಬರದೇ ಹೋದ್ರೆ ಹದಿನೈದನೇ ದಿನದಿಂದ ಎರಡೂ ಹೊತ್ತು ಊಟ ಮಾಡುದನ್ನ ಬಿಟ್ಟುಬಿಡ್ತೇನೆ. ಆಗ ಬರಿ ಒಂದು ಗ್ಲಾಸ್ ಹಾಲು ಕುಡ್ದು ಬದ್ಕತೇನೆ. ಮುಂದೆ ಎಂಟು ದಿನದಲ್ಲಿಯೂ ನೀನು ಪತ್ರ ಬರಿದೆ ಹೋದ್ರೆ ಆಗ ಎಲ್ಲದಕ್ಕೂ ಮುಕ್ತಾಯ ಹಾಡತೇನೆ.............."

ಹೀಗೆ ಅವಳು ಧಾರವಾಡದಲ್ಲಿರುವಾಗಲೇ ಪ್ರತಿಜ್ಞೆಯನ್ನು ಮಾಡಿದ್ದಳು. ನಾನು ಸಾಮಾನ್ಯವಾಗಿ ಮೊದಮೊದಲು ಅವಳ ಪತ್ರ ಬಂದಾಕ್ಷಣ ಪತ್ರ ಬರೆಯುತ್ತಿದ್ದೆ. ಒಂದೆರಡು ದಿನ ತಡವಾದರೆ ಯಾಕೆ ತಡವಾದುದು ಎಂದು ಕೆಂಪುಗಣ್ಣಲ್ಲೇ ಪ್ರಶ್ನಿಸುತ್ತಿದ್ದಳು. ನಾನು ಊಟ ಮಾಡಲಿಲ್ಲ. ನಾಲ್ಕು ದಿನವಾಯಿತು, ಮೂರು ದಿನಾಯಿತು, ಆರು ದಿನವಾಯಿತು. ಒಂದು ಹೊತ್ತು ಊಟ ಬಿಟ್ಟೆ. ಹೀಗೆ ವರದಿಯೊಂದಿಗೆ ಗುಡುಗು ಸಿಡಿಲಾಗಿ ಮಳೆ ಬರುತ್ತಿತ್ತು. ಕೆಲವೊಮ್ಮೆ ನನ್ನ ಉದ್ಧಟತನಕ್ಕೆ ನಾನೇ ಬೇಸರಪಡುತ್ತಿದ್ದೆ. ಮಹಾಪ್ರಬಂಧದ ಬರವಣಿಗೆ ಎಂದು ಅಸಹಾಯಕತೆಯನ್ನು ತೋರಿಸುತ್ತಿದ್ದೆ. ಕೆಲವೊಮ್ಮೆ ಅವಳ ಪ್ರೀತಿಯ ಆಳ ಅರಿಯದೆ ಮಂದಹಾಸದಲ್ಲಿಯೇ ನಕ್ಕು ಛೇಡಿಸುತ್ತಿದ್ದೆ. ಯಾವಾಗ ಇಪ್ಪತ್ತೆರಡು ದಿನಗಳ ಘಟನೆ ಕೇವಲ ಮಾತಾಗಿಸದೆ, ಆಚರಣೆ ಮಾಡಿ ತೋರಿಸಿದಳೋ, ಅಂದು ನಾನು ಸಂಪೂರ್ಣ ಕಣ್ಣು ತೆರೆದೆ. ಆ ದಿನಗಳಲ್ಲಿ ಆಕೆ ಸೊರಗಿ ಸಣ್ಣಾಗಿದ್ದಳು. ಬಳಲಿ ಬೆಂಡಾದವರಂತೆ ಕಾಣುತ್ತಿದ್ದಳು. ಆಗ ನನ್ನ ಮಂದ ಮೆದುಳಿಗೆ ನಾನೇ ಶಪಿಸಿಕೊಂಡಿದ್ದೆ. ನನ್ನ ಪಿಎಚ್.ಡಿ. ಪ್ರಬಂಧದ ಬರೆದ ಪುಟಗಳನ್ನೇ ಹರಿದು ಹಾಕಿದ್ದೆ. ನನ್ನ ಮುಂಗೋಪಿತನದ ಗುಣಕ್ಕೂ ಕೊನೆಗೆ ಅವಳೇ ಸಾಂತ್ವನ ಹೇಳಿದ್ದಳು. "ಮತ್ತೆಂದೂ ಹಾಗೆ ನಾನು ಮಾಡುವುದಿಲ್ಲ" ಎಂದು ನನ್ನಷ್ಟಕ್ಕೆ ನಾನೇ ನಿರ್ಧರಿಸಿದೆ.

ನನ್ನ ಸಂಶೋಧನೆಯ ಪರಿಷ್ಕರಣದ ಎರಡನೇ ಸುತ್ತಿನ ಬರವಣಿಗೆ ನಡೆದ ಸಂದರ್ಭ ಅದು. ನಾನು ತಪ್ಪದೇ ಅವಳಿಗೆ, ಮೊದಲ ಹಂತದ ಬರವಣಿಗೆಯಲ್ಲಿ ನಿರ್ಧರಿಸಿಕೊಂಡಂತೆ ಪತ್ರಿಸುತ್ತ ಹೋದೆ. ಪತ್ರಿಸುವಾಗಲೆಲ್ಲ ಎರಡನೆಯ ಸುತ್ತಿನ ಬರವಣಿಗೆ ನಡೆದಿದೆ, ಪತ್ರಿಸುವುದು ತಡವಾದರೆ ಊಟ ಬಿಡುವುದು ಬೇಡ ಎಂದು ಬರೆಯುತ್ತಿದ್ದೆ. ಆದರೆ ಅವಳು, ಮಾತು ಮಾತೇ ಅದನ್ನ ನಾನು ತಪ್ಪೋದಿಲ್ಲ ಎನ್ನುತ್ತಿದ್ದಳು. ಆದರೆ ಎರಡನೇ ಸುತ್ತಿನ ಬರವಣಿಗೆ ನಡೆದಾಗ, ಅವಳಿಂದ ಎಚ್ಚರಿಕೆಯ ಪತ್ರ ಬರಲಿಲ್ಲ. ಪತ್ರ ಬರೆಯುವುದರಲ್ಲಿಯೂ ತಡಮಾಡತೊಡಗಿದಳು. ಅವಳಲ್ಲಾಗುವ ಈ ರೀತಿಯ ಬದಲಾವಣೆಗಳು ನನ್ನ ಬರವಣಿಗೆಗೆ ಅವಳು ಕೊಡುತ್ತಿರುವ ಸಹಕಾರವೆಂದೇ ಭಾವಿಸಿದ್ದೆ. ಅದನ್ನು ಕೆಲಬಾರಿ ಅವಳು ಮಾತಿನ ಮೂಲಕವೂ ವ್ಯಕ್ತಪಡಿಸಿದ್ದಳು. ಹೀಗಾಗಿ ಅವಳಿಂದ ಪತ್ರ ವಿಳಂಬವಾದಾಗ ನಾನೇನೂ ಅವಳಿಗೆ ಎಚ್ಚರಿಸಲು ಹೋಗಲಿಲ್ಲ. ವಿಳಂಬದಲ್ಲಿಯೇ ಮಿತಿಮೀರತೊಡಗಿದಾಗ ನಾನು ಎಚ್ಚರಿಕೆಯ ಪತ್ರ ಬರೆಯಲು ಆರಂಭಿಸಿದೆ. ಆದರೆ ಅದು ಪ್ರಯೋಜನವಾಗಲಿಲ್ಲ. ಪತ್ರ ಬಂದರೂ ಪತ್ರಗಳಲ್ಲಿ ಮೊದಲಿನ ನಿರ್ಧಾರದ ಧ್ವನಿ ಇರಲಿಲ್ಲ; ಮದುವೆಯಾಗುವ "ನನ್ನ ತಂಗಿ ಇದ್ದಾಳೆ, ನಾನು ನನಗಾಗಿ ಬದುಕಲೇ ನನ್ನ ಮನೆಯವರಿಗಾಗಿ ಬದುಕಲೇ?" ಎನ್ನುವ ವೃತ್ತದಲ್ಲಿ ಬಳಲುವ ಪತ್ರದ ಧಾಟಿ ಅದು. ನನಗೆ ಇದು ವಿಷಯವೆನಿಸಲಿಲ್ಲ. ತಂಗಿಯ ಮದುವೆಯಾಗುವವರೆಗೆ ಕಾಯುವಾ ಎಂದು ತಿಳಿ ಹೇಳಿದೆ. ಹೆಚ್ಚೇನು

ಪ್ರಯೋಜನವಾಗಲಿಲ್ಲ. "ನಮ್ಮ ತಂದೆ ಸಿಟ್ಟಿನ ಮನುಷ್ಯ. ಅವರಲ್ಲಿ ಒಂದು ಕೋವಿ ಇದೆ ಅರವಿಂದ್, ನನಗೆ ಹೆದರಿಕೆ ಆಗುತ್ತೆ" ಎನ್ನುವ ಮಾತುಗಳು ಹೊರಬೀಳತೊಡಗಿದವು. ಅದೇ ಸಂದರ್ಭದಲ್ಲಿ ಅವಳ ತಾಯಿಯೂ ಆಸ್ಪತ್ರೆ ಸೇರಿದ್ದಾಳೆನ್ನುವ ಪತ್ರಗಳು ಬರತೊಡಗಿದವು.

ಇಂಥ ಸಂದರ್ಭದಲ್ಲಿ ಅವಳು ಹೇಳುವ ಸತ್ಯ ಸಂಗತಿಗಳನ್ನೂ ನಂಬುವ ತಾಳ್ಮೆಯನ್ನು ಕಳೆದುಕೊಳ್ಳತೊಡಗಿದೆ. ನನ್ನಲ್ಲಿ ಸಂದೇಹದ ಅಲೆಗಳು ಭೂತ ನೃತ್ಯ ಮಾಡತೊಡಗಿದವು. ಆಗಿನ ನನ್ನ ವರ್ತನೆಯನ್ನು ಸ್ಮರಿಸಿಕೊಂಡರೆ ಈಗಲೂ ಬೇಸರವೆನಿಸುತ್ತದೆ. ಅವಳ ತಾಯಿ ನಿಜವಾಗಿಯೂ ಆಸ್ಪತ್ರೆಯಲ್ಲಿದ್ದರು. ನನ್ನ ವರ್ತನೆ ಅವಳಿಗೆ ಮತ್ತಷ್ಟು ಜಿಗುಪ್ಸೆ ಹುಟ್ಟಿಸಿರಬೇಕು. ಪತ್ರಗಳು ನಿಲ್ಲುವ ಸ್ಥಿತಿಯೇ ಇದೆ ಎನಿಸತೊಡಗಿತು. ನನ್ನ ಮಹಾಪ್ರಬಂಧದ ಬರವಣಿಗೆ ಆಗ ನಿಂತು ಹೋಗಿತ್ತು. ಅವಳಿಗೆ, ಅವಳು ಮಾಡಿದ ಪ್ರತಿಜ್ಞೆಯನ್ನು ನೆನಪಿಸಿಕೊಟ್ಟೆ. ಅದನ್ನೇ ಈಗ ನಾನು ಪಾಲಿಸುತ್ತೇನೆಂದು ಬರೆದೆ, ಅದಕ್ಕೂ ಹೆಚ್ಚಿನ ಬದಲಾವಣೆ ಕಂಡು ಬರಲಿಲ್ಲ. ಉಪವಾಸ ಆರಂಭಿಸಿದೆ. ಮಧ್ಯದಲ್ಲಿ ಸಿಟ್ಟಿನಿಂದ ಪತ್ರ ಬರೆದರೂ ಸಾಕು ಉಪವಾಸ ನಿಂತು ಹೋಗುತ್ತಿತ್ತು.

ಅಂದು ನಾನು ಉಪವಾಸ, ಅರೆ ಉಪವಾಸ ಮಲಗಿ ಒಟ್ಟು ಹದಿನೆಂಟು ದಿನಗಳಾಗಿದ್ದವು. ಅವಳ ಪತ್ರ ಬರದೆ ಇಪ್ಪತ್ತೈದು ದಿನಗಳಾಗಿದ್ದವು. ಅವಳು ಕೊನೆಯ ಪತ್ರದಲ್ಲಿ "ನಾನು ಮುಂಬೈಗೆ ಹೋಗಿರುವೆ. ಇನ್ನು ಮೇಲೆ ನೀನು ಊರಿಗೆ ಪತ್ರ ಬರೆಯುವುದು ಬೇಡ" ಎಂದಿತ್ತು. ಅದಕ್ಕೆ ಮರುತ್ತರ ಕೊಟ್ಟು ನಾನು ಉಪವಾಸ ಆರಂಭಿಸುವೆ ಎಂದು ಬರೆದಿದ್ದೆ. ಅಂತೆಯೇ ಆರಂಭಿಸಿದ್ದೆ. ಈ ಕಠೋರದ ಉಪವಾಸಕ್ಕೆ ಇನ್ನು ಮೇಲಿಂದ ಪತ್ರ ಬರೆಯುವುದು ಬೇಡ ಎಂದದ್ದು ಹೆಚ್ಚು ನಿಷ್ಠುರತೆಯನ್ನು ತರಿಸಿಬಿಟ್ಟಿತ್ತು. ಎರಡೂ ಹೊತ್ತಿನ ಊಟ ನಿಲ್ಲಿಸಿ ಮೂರು ದಿನಗಳಾಗಿದ್ದವು. ಆ ಸಂದರ್ಭದಲ್ಲಿ ನಮ್ಮಿಬ್ಬರನ್ನು ತೀರ ಹತ್ತಿರದಿಂದ ಬಲ್ಲ ಸ್ನೇಹಿತ ಬಂದ. ನನ್ನ ಸ್ಥಿತಿಯ ವಿವರ ತಿಳಿದು ಬೈಯ್ಯುತ್ತಿದ್ದ, ಆತ ತಿನ್ನಲು ಏನೆಲ್ಲ ತಂದಿಟ್ಟಿದ್ದ; ಹಟ ಮಾಡಿ ತಿನಿಸಲು ಪ್ರಯತ್ನಿಸಿದ್ದ. ತಿನ್ನದೇ ಹೋದಾಗ ಸ್ನೇಹದ ಮೇಲೆ ಆಣೆ ಭಾಷೆ ಹಾಕಿ ಬೆದರಿಸಿದ. ಯಾವುದಕ್ಕೂ ಜಗ್ಗದೆ ಹೋದಾಗ ಬೈಯುತ್ತಲೇ ಹೇಳಿದ್ದ. "ಅವಳನ್ನು ನಾನು ಕರೆದು ತರ್ತೇನೆ" ಎಂದು ಹೊರಟು ಹೋದ.

ನನ್ನ ಮನಸ್ಸು ಹೇಳುತ್ತಿತ್ತು "ಅವಳು ಮುಂಬೈಗೆ ಹೋಗಿಲ್ಲ" ಎಂದು. ಆತ ಮರಳಿ ಬಂದವನೇ ನನ್ನನ್ನು ಬಾಚಿ ತಬ್ಬಿ ದೊಡ್ಡ ದನಿ ತೆಗೆದು ಅಳತೊಡಗಿದ.

> ಅರವಿಂದಾ ಅವಳು ಬದಲಾಗ್ಯಾಳೋ, ಅವಳನ್ನ ನಿನ್ನ ಮನಸ್ಸನಿಂದ
> ತಗ್ದ ಹಾಕು. ನಿನ್ನ ಬಗ್ಗೆ ಅವಳಲ್ಲಿ ಎಳ್ಳಷ್ಟು ಗೌರವನೇ ಇಲ್ಲೋ
> ಏನೇನೆಲ್ಲ ಮಾತಾಡಿದ್ಲು ಅವಳು..........

ಅರವಿಂದಾ............ ನಿನ್ನ ಹುಚ್ಚತನ ಎಲ್ಲಾ ಬಿಟ್ಟ ಬಿಡು........

ಅವಳು ಬರೋದಿಲ್ಲ. ಪತ್ರ ಬರೆಯೋ ಲಕ್ಷಣಾನೂ ಕಾಣೋದಿಲ್ಲ..............

"ನಾನು ಧಾರವಾಡದಿಂದ ಬಂದಿದ್ದೇನೆ ಎಂದು ಹೇಳದೆ, ಕಾಲೇಜು ವಿದ್ಯಾರ್ಥಿಗಳೊಂದಿಗೆ ಪ್ರವಾಸಕ್ಕೆ ಹೋಗಿದ್ದೆ. ಹಾಗೆ ನಿನ್ನನ್ನ ಕಂಡು ಹೋಗೋಣಾಂತ ಬಂದೆ. ಈಗ ಧಾರವಾಡಕ್ಕೆ ಹೋಗ್ತಾ ಇದ್ದೇನೆ" ಎಂದು ಅವಳಲ್ಲಿ ಹೇಳಿದ್ದನಂತೆ. ನನ್ನ ನಿರ್ಧಾರದ ಪತ್ರಗಳು, ಉಪವಾಸ ವ್ರತ ಮುಂದುವರೆದ ಪತ್ರಗಳೆಲ್ಲ ಅವನಿಗೆ ತೋರಿಸಿ; "ಅವನು ಹುಚ್ಚ ಆಗಿದಾನೆ" ಎಂದಳಂತೆ.

ನಮ್ಮ ವ್ಯವಹಾರವೆಲ್ಲ ಆತ ಮೊದಲಿನಿಂದಲೂ ಬಲ್ಲವ. ಹೀಗಾಗಿ "ನನ್ನ" ಮತ್ತು "ನಮ್ಮ" ಬಗ್ಗೆ ಅವನಿಗೆ ತಿಳಿಸಿ ಹೇಳುವ ಅಗತ್ಯವಿರಲಿಲ್ಲ.

ತನ್ನ ಕಾಲೇಜು ರಜೆಯ ದಿನಗಳು ಮುಗಿದಿದ್ದರೂ ಮತ್ತೆರಡು ದಿನ ನಿಂತು, ಸದಾ ನನ್ನ ಕೋಣೆಯ ಸುತ್ತ ಸುತ್ತುತ್ತ ತಿಳಿಹೇಳಿದ್ದ. ನಾನು ಅವನ ಯಾವ ಮಾತು ಕೇಳದೇ ಹೋದೆ. ಅವಳು ಪ್ರಶ್ನಿಸುತ್ತಾಳೆನ್ನುವ ಭರವಸೆ ನನಗಿತ್ತು. ಅಂದು ಇಪ್ಪತ್ತೈದನೆಯ ದಿನದ ಬೆಳಗು. ಆತ ಇನ್ನು ನನ್ನಿಂದ ಇರಲಾಗದು ಎಂದು ತನ್ನ ಅಸಹಾಯಕತೆಯನ್ನು ತೋರಿಸಿ, ತನ್ನ ಕೆಲಸಕ್ಕೆ ಹಾಜರಾಗಲು ಹೊರಟು ಹೋದ. ಆತ ಹೋದ ಒಂದು ಗಂಟೆಯ ನಂತರ ತನ್ನ ಸಹೋದರಿಯ ಸಹಿತವಾಗಿ, ನೇರ ಶಾಲ್ಮಲಾ ಹಾಸ್ಟೇಲಿನ ನನ್ನ ೩೦೧ ನಂಬರಿನ ಕೋಣೆಗೆ ಬಂದಳು.

ಅಳುವು-ಸಾಂತ್ವನದ ಮಾತುಗಳು ಆರಂಭವಾದವು. ಆನಂತರ "ಹೋಟೆಲ್ ಮಿಲನ್"ಗೆ ಕರೆದುಕೊಂಡು ಹೋಗಿ ಊಟ ಮಾಡಿಸಿದಳು. ಉಪವಾಸ ಬಿದ್ದು ಕರುಳುಗಳೆಲ್ಲಾ ಬತ್ತಿ ಹೋಗಿದ್ದರಿಂದ ಅನ್ನ ತಿಂದರೂ ಗಂಟಲಲ್ಲಿ ಇಳಿಯುತ್ತಿರಲಿಲ್ಲ. ಬಾಯಿಯಲ್ಲಿ ನೀರೂರಿಸುವ ಊಟ ಎದುರಿಗಿತ್ತು. ಅವಳೂ ಪಕ್ಕದಲ್ಲಿಯೇ ಇದ್ದಳು. ಆ ಸಂತೋಷವೂ ಇನ್ನೊಂದು ಬಗೆಯದು, ಇವೆಲ್ಲವೂ ಸೇರಿ ಹಸಿವಿದ್ದರೂ ಹಸಿವಿಲ್ಲದಾಗಿತ್ತು. ಮೈಯಲ್ಲಿ ಬಲವಿಲ್ಲದಿದ್ದರೂ ಬಲ ಎಲ್ಲಿಂದಲೋ ಚಿಮ್ಮುತ್ತಿತ್ತು. ಆದರೆ ಅದು ಬಹಳ ಹೊತ್ತಿರದಿದ್ದರೂ ಏನೆಲ್ಲಾ ಸಾಧಿಸಿದವರಂತೆ ಗೆಲುವಿನ ಬಲವಿತ್ತು. ಎರಡು ಹಗಲು ನನ್ನೊಂದಿಗೆ ಕಳೆದು ಊರಿಗೆ ಮರಳುವಾಗ ತನ್ನ ಕೈಯಲ್ಲಿದ್ದ ಬಂಗಾರದ ಬಣ್ಣದ ಗಡಿಯಾರ ತೆಗೆದು ನನ್ನ ಕೈಯಲ್ಲಿಡುತ್ತಾ ಹೇಳಿದಳು "ಈ ಗಡಿಯಾರ ಬೇಕೂಂತ ಹೇಳ್ತಾಯಿದ್ದೀಯಲ್ಲ ಅರವಿಂದ್, ತಗೋ" ಎಂದು ಕೊಡಲು ಬಂದಳು. ಆದರೆ ನಾನು ಅಂದು ಆ ಗಡಿಯಾರವನ್ನು ತೆಗೆದುಕೊಳ್ಳದೆ ನಿರಾಕರಿಸಿದೆ. ಅವಳು ಸಾಕಷ್ಟು ಒತ್ತಾಯ ಪಡಿಸಿದರೂ, ಕೊನೆಗೆ ಬಸ್ಸು ಹೊರಡುವಾಗ ಬಸ್ಸಿನ ಕಿಟಕಿಯಿಂದ ಒಳಗೆ ಬಿಟ್ಟು ಬಿಟ್ಟಿದ್ದೆ.

ಒಂದು ದಿನ, ಒಂದು ಗಡಿಯಾರದ ಅಂಗಡಿಗೆ ಕರೆದುಕೊಂಡು ಹೋಗಿ "ಅರವಿಂದ್,

ಒಂದು ಗಡಿಯಾರ ನೀನು ಚಾಯ್ಸ್ ಮಾಡಿಕೊಡು" ಎಂದಳು. ಧಾರವಾಡದ ತುಂಬಾ ತಿರುಗಿದರೂ ನನ್ನ ಮನಸ್ಸಿಗೆ ಒಪ್ಪುವ ಗಡಿಯಾರ ಸಿಗಲಿಲ್ಲ. ಮರುದಿನ ಹುಬ್ಬಳ್ಳಿಗೆ ಹೋಗುವುದೆಂದು ತೀರ್ಮಾನವಾಯಿತು. ಗಡಿಯಾರ ಯಾರಿಗೆ? ಏನು ಎಂದು ಏನೊಂದು ಪ್ರಶ್ನಿಸಲಿಲ್ಲ. ಏಕೆಂದರೆ, ಒಟ್ಟಿಗೆ ಹಾಯಾಗಿ ಕಳೆಯಬಹುದಾದ ಒಂದು ದಿನ ನನಗೆ ಮುಖ್ಯವಾಗಿತ್ತು. ಹೀಗಾಗಿ ಏನನ್ನೂ ಕೇಳದೆ ಹೋದರೆ ಹುಬ್ಬಳ್ಳಿಗೆ ಪ್ರಯಾಣ ಮಾಡುವ ಸಂದರ್ಭದಲ್ಲಿ ಕೇಳದಿರಲಿಲ್ಲ.

"ಗಡಿಯಾರ ಯಾರಿಗೆ?"

"ನನಗೆ ತುಂಬಾ ಬೇಕಾದವರಿಗೆ ಕೊಡಬೇಕು, ಅದಕ್ಕೆ"

"ನನಗೇನೂ ಅಲ್ಲ ತಾನೇ?"

"ನನಗೆ ಬೇಕಾದವರು ಅಂದರೆ ನೀನೇನಾ?"

"ಹಾಗಂತ ನಾನೇನೂ ಹೇಳ್ಳಿಲ್ಲಲ್ಲಾ."

ಆದರೆ ನನ್ನ ಕೈಯಲ್ಲಿ ಗಡಿಯಾರ ಇಲ್ಲಾಂತ ಹೇಳಿ

ನೀನು ನನಗೆ ಕೊಡಿಸುವುದು ಬೇಡಾ.

ನನಗೆ ಕಟ್ಟಬೇಕು ಅನಿಸಿದರೆ ನಾನು ಯಾವಾಗಲೋ ತಗೊಂಡು ಕಟ್ಟುತ್ತಿದ್ದೆ.

ಮನೆಯಲ್ಲಿ ಗಡಿಯಾರ ಇದ್ದರೂ ನಾನು ಕಟ್ಟಿಲ್ಲ............

ನನಗೆ ಗಡಿಯಾರ ಸೇರೋದಿಲ್ಲ........................."

"ಏ, ಗಡಿಯಾರ ಹುಡುಕ್ತಾ ಇರೋದು ನಿನಗೋಸ್ಕರಾನೆ"

"ಹಾಗಾದ್ರೆ ಬಸ್ ಇಳಿದು ಹೋಗೋದೇ ಒಳ್ಳೇದು"

"ಇಲ್ಲ. ನೀನು ಗಡಿಯಾರ ಕಟ್ಟಲೇ ಬೇಕು.

ನಿನಗೆ ಮನಸ್ಸು ಇರದಿದ್ದರೂ ನನಗೋಸ್ಕರ ಕಟ್ಟು.. ...... ಅರವಿಂದ್"

ಅವಳು ತುಂಬಾ ಹಟ ಮಾಡಿದಾಗ ನಾನೊಂದು ಬಯಕೆಯನ್ನು ಮುಂದಿಟ್ಟೆ.

"ನಾನು ಗಡಿಯಾರ ಕಟ್ಟಬೇಕು ತಾನೇ?

ಹಾಗಿದ್ದರೆ ನಿನ್ನ ಕೈಯಲ್ಲಿ ಇದೆಯಲ್ಲ ಅದೇ ಗಡಿಯಾರ ಕೊಡು.

ಹೊಸದು ಬೇಡಾ ನನಗೆ."

"ಅಯ್ಯೋ...... ಇದು ನನ್ನ ಅಣ್ಣ ನನಗೆ ಕೊಡಿಸಿದ್ದು -ಅರವಿಂದ್

ಅದು ನಾನು ಹ್ಯಾಗೆ ಕೊಡ್ಲಿ?

ಬೇಕಂದ್ರೆ ನಿನಗೆ ಡೇ ಅಂಡ್ ಡೇಟ್ ಇರೋ ಆಟೋಮ್ಯಾಟಿಕ್ ವಾಚ್ ಕೊಡ್ಸತ್ತೇನೆ."

"ನನಗೆ ಹೊಸ ಮಾಡಲ್ ವಾಚು ಬ್ಯಾಡ

ಅಷ್ಟು ದೊಡ್ಡ ಕಿಮ್ಮತ್ತಿನ ಗಡಿಯಾರಾನೂ ಬ್ಯಾಡ
ನನಗೆ ಈ ಹಳೆ ಗಡಿಯಾರನೇ ಸಾಕು
ಕೊಡೋದಾದ್ರೆ ಅದನ್ನೇ ಕೊಡು."
"ಇದು ಚಾವಿ ಕೊಡುವ ಗಡಿಯಾರ ಅರವಿಂದ್"
"ನನಗದೇ ಇಷ್ಟ."
"ಈ ಗಡಿಯಾರ ಬಿಟ್ಟು ಬೇಕಾದದ್ದು ಕೇಳು ಅರವಿಂದ್
ಆದರೆ ಈ ಗಡಿಯಾರ ಕೊಡೋದಿಲ್ಲ."

ಈ ಮಾತಿನೊಂದಿಗೆ ಗಡಿಯಾರದ ಅನ್ವೇಷಣೆ ನಿಂತಿತು. ಕೆಲದಿನಗಳ ನಂತರ ಒಂದು ರೇಡಿಯೋ ತಂದ್ಲು, ಅದನ್ನು ಹಚ್ಚಿ:

"ನೋಡು ಅರವಿಂದ್......... ಇದರಲ್ಲಿ ಬರುವ ಧ್ವನಿ ಕೇಳಿದಾಗೆಲ್ಲ
ನನ್ನ ನೆನಪು ಬರಲಿ ಅಂತ ಇದನ್ನು ತಂದೆ.
ಆದರೆ ಪ್ರತಿ ಸೆಕೆಂಡಿಗೂ ಮುಳ್ಳು ತಿರುಗೋ ಹಾಗೆ
ನಿನ್ನ ಮನಸ್ಸು ನನ್ನ ಹಿಂದೇನೆ ತಿರಗತಾ ಇರಲಿ ಅಂದುಕೊಂಡು
ಗಡಿಯಾರ ಕೊಡಿಸೋಣ ಅಂದ್ರೆ.........."
ಎಂದು ಜೀ ಎಳೆಯುವಾಗಲೇ-
"ಅಲ್ಲಾ; ಈ ಚಾರು ಚೂರು ವಸ್ತು ನನ್ನ ಕೈಯಲ್ಲಿ ಕೊಟ್ಟು
ಜಪಾ ಮಾಡೋದಕ್ಕೆ ಹಚ್ಚಿ
ನೀನು ಹೊರಟ ಹೋಗಬೇಕು ಅನ್ನೋ ವಿಚಾರ ಇದೇನಾ?"
ಎಂದಾಗ, ನನ್ನ ಬಾಯಿ ಮುಚ್ಚಿ-
"ಹಾಗೆಲ್ಲ ಚುಚ್ಚಿ ಕೊಲ್ಲ ಬೇಡಾ ಅರವಿಂದ"

ಎಂದು ನನ್ನ ಭಾವಿ ಜೀವನದ ಕೆಲಭಾಗ ಕೊಂಡು ಹೋಗಿ, ಸೆಕೆಂಡಿನ ಮುಳ್ಳಿನೊಂದಿಗೆ ನನ್ನ ಮನಸ್ಸು ತಿರುಗಲು ಗಡಿಯಾರವನ್ನೂ, ಹಾಡು ಕೇಳಿದಾಗಲೆಲ್ಲ ಆಕೆಯ ಧ್ವನಿ ಕಿವಿಯಲ್ಲಿ ಗುಂಯ್ಯ್‌ಗುಟ್ಟಲು ರೇಡಿಯೋವನ್ನೂ ಬಿಟ್ಟು ಹೋದಳು.

ಕಾರವಾರದ ಲಾಡ್ಜ್‌ನಲ್ಲಿ ಅವಳು ಬುಕ್ ಮಾಡಿದ ರೂಂವೊಂದರಲ್ಲಿ ಆವತ್ತು ನಸುಕಿನಲ್ಲಿ ಹೋಗಿ ಇಳಿದೆ. ಒಂಬತ್ತು ಗಂಟೆಗಾಗಲೇ ತನ್ನ ಸಹೋದರಿಯೊಂದಿಗೆ ಆ ಲಾಡ್ಜ್‌ಗೆ ನನ್ನಂತೆಯೇ ಬಂದಿಳಿದಳು. ಆ ಮಾತು ಈ ಮಾತು ಸುತ್ತಿ ಕೊನೆಗೆ ಎರಡು ಭಾವಚಿತ್ರಗಳನ್ನು ನನ್ನ ಕೈಯಲ್ಲಿಟ್ಟು, ಹೇಳಿದಳು:

"ಈತ ಎಂ.ಬಿ.ಬಿ.ಎಸ್. ಡಾಕ್ಟರ್
ಈತ ಇಂಜಿನಿಯರ್

ಡಾಕ್ಟರ್ ನೋಡೋದಕ್ಕೆ ಕೆಂಪಗಿದ್ದಾನೆ.
ಇಂಜಿನಿಯರ್ ನಿನ್ನ ಹಾಗೆ ಕಪ್ಪಗಿದ್ದಾನೆ."
ಈ ನಡುವೆ ಅವಳ ತಂಗಿ ಅಷ್ಟೇ ಯಾತನಾ ಭರಿತ ಮನವೊಲಿಸುವ ದನಿಯಲ್ಲಿ
"ಹೌದು ಅರವಿಂದಾ ಅವನಿಗೆ ನೋಡಿದರೆ
ನಿನ್ನ ನೋಡಿದ ಹಾಗೇ ಆಗುತ್ತದೆ" ಅಂದಳು.
"ಹೌದು ಅರವಿಂದ್
ಈ ಇಬ್ಬರಲ್ಲಿ ಯಾರಿಗೆ ಮದುವೆ ಆಗಬೇಕು
ನೀನೇ ಚಾಯ್ಸ್ ಮಾಡು ಅರವಿಂದ್.........."

ಆಗ ನನ್ನ ಬಾಯಿಯಲ್ಲಿ ಮಾತುಗಳೇ ಕಳೆದು ಹೋದವು. ಮೊದಲೇ ಅರ್ಧ ಕಳೆದು ಹೋಗಿದ್ದೆ. ಈಗಂತೂ ಕಿವಿಗಡಚುಗಟ್ಟಿ ಸುತ್ತಲಿನ ಯಾವ ಸದ್ದೂ ಕೇಳದಂತಾಗಿತ್ತು. ಮುಂದೆ ಅವರು ಕುಳಿತಿದ್ದರೂ ಕೇವಲ ಬೊಂಬೆಗಳೆನಿಸುತ್ತಿದ್ದರು. ನನ್ನ ಮಿದುಳೆಂಬ ಕೆಸರಿನ ಮೇಲೆ ಎರಡು ಸಣ್ಣ ಹುಳುಗಳು ಕೆಸರು ಮೆತ್ತಿದ್ದ ಕಾಲುಗಳನ್ನು ಎತ್ತಿ ಎತ್ತಿ ಇಡುತ್ತ ಹೊರಟ ಅನುಭವ ಮಾತ್ರ ಆಗುವಂತಿತ್ತು.

ಅವಳು ನನ್ನನ್ನು ಬಿಟ್ಟು ಹೋಗಬಹುದು ಎನ್ನುವ ವಿಚಾರ ಹೊಸದೇನಾಗಿರಲಿಲ್ಲ. ಅದು ನಿರೀಕ್ಷಿತವೇ ಆಗಿತ್ತು. ಹೀಗಿದ್ದಾಗಲೂ ಅನಿರೀಕ್ಷಿತ ವಿಷಯವಾಗಿ ನನ್ನನ್ನು ಕಾಡಿ ಮೂಕನಾಗಿಸಿದ್ದು, ನನಗೆ ತೋಚದಂತಾಗಿತ್ತು. ಅವಳಿಗೆ ಹುಡುಗನನ್ನು ಆಯ್ಕೆ ಮಾಡಿ ಕೊಡುವಂತಹ ಸಂದರ್ಭವೂ ನನಗೆ ಬರುತ್ತದೆ ಅಥವಾ ಅಂತಹ ಪ್ರಸಂಗವನ್ನು ಅವಳು ತಂದು ನನಗೆ ಇಕ್ಕಟ್ಟಿಗೆ ಸಿಲುಕಿಸಬಹುದು ಎನ್ನುವುದನ್ನು ನಾನು ಊಹಿಸಿರಲಿಲ್ಲ. ಹೀಗಾಗಿ ಬರ ಬಡಿದು ಬಸವಳಿದ ಪ್ರಾಣಿಯಾಗಿದ್ದೆ. ಆ ಸಂದರ್ಭದಲ್ಲಿ ಅವಳು ಏನೇನೋ ಹೇಳುತ್ತಿದ್ದಳು. ಅದರಲ್ಲಿ ಕೇಳಿದ್ದು ನೆನಪುಳಿವಂತೆ ನಿಂತ ಮಾತುಗಳೆಂದರೆ:

"................. ನೀನು ನನ್ನ ಮುಖ ನೋಡುದಲ್ಲ, ನನ್ನ ತಂಗಿ ಮುಖ ನೋಡು. ನಾನು ಹೀಗೆ ಮಾಡಿದರೆ ನನ್ನ ಇಬ್ಬರು ತಂಗಿಯರ ಗತಿ ಏನು? ಅವರನ್ನ ನಮ್ಮ ಜಾತಿಯಲ್ಲಿ ಯಾರು ಮದುವೆ ಆಗುತ್ತಾರೆ? ನನ್ನ ತಾಯಿ ಹಾರ್ಟ್ ಪೇಷೆಂಟ್, ತಂದೆ ಹೇಗೆ ಅಂತ ನಿನಗೆ ಗೊತ್ತು. ನನ್ನಣ್ಣ ಅರವಿಂದನ ಬಗ್ಗೆ ಏನು ಹೇಳಬೇಕಾಗಿಲ್ಲ. ಇನ್ನೊಬ್ಬ ಅಣ್ಣ ನಿನ್ನ ನನ್ನ ಸ್ನೇಹಕ್ಕೆ ಮೆಚ್ಚಿದ್ದ ನಿಜ. ಆದರೆ, ಅವನು ಮದುವೆಗೆ ಒಪ್ಪೊಲ್ಲ............"

ಸಂಪೂರ್ಣವಾಗಿ ಅದೊಂದು ಗೊಂದಲಮಯವಾದ ಸಂದರ್ಭ. ಅವಳು ಹೇಳುವ ಮಾತಿನಲ್ಲಿಯೂ ಅರ್ಥವಿತ್ತು. ಅವಳ ತಂಗಿಯೂ ನನಗೆ ಅಷ್ಟೇ ಆತ್ಮೀಯಳಾಗಿದ್ದಳು. ನಮ್ಮ ಸ್ವಾರ್ಥದ ಬದುಕಿಗೆ ಇನ್ನೊಬ್ಬರನ್ನೇಕೆ ಬಲಿ ಕೊಡುವುದು? ಆ ರೀತಿ ಬಲಿ ತೆಗೆದುಕೊಂಡು ಬದುಕುವುದರಲ್ಲೇನರ್ಥ? ಇಂಥವೆಲ್ಲ ಪ್ರಶ್ನೆಗಳು ಈ ಮೊದಲೇ ಕಾಡಿದ್ದವು.

ಆ ಮಾತು ಅಂದಿನ ಸಂದರ್ಭದ ವಾತಾವರಣದಲ್ಲಿ ಹೆಚ್ಚು ಪರಿಣಾಮಕಾರಿಯಾಗಿ ನಾಟಿತು. ಆದರೂ ನನಗೆ ಅಷ್ಟು ವರ್ಷಗಳ ಕಾಲ ಇದ್ದ ಸಂಬಂಧವನ್ನು ಹರಿದು ಹೊರಬರಲಾಗಲಿಲ್ಲ. ಆದರೆ, ನಾನು ಅವಳನ್ನು ಒತ್ತಾಯದಿಂದ ಪಡೆದುಕೊಳ್ಳುವ ಹಾಗೆಯೂ ಇಲ್ಲ ಎನ್ನುವ ಅರಿವು ಸುಪ್ತವಾಗಿ ಜಾಗ್ರತವಾಗಿತ್ತು. ಕಳೆದುಕೊಳ್ಳುವುದು ಹೇಗಿದ್ದರೂ ನಿಶ್ಚಿತ. ಅದಕ್ಕಾಗಿ ಕದನ ಕಾದು ಕಪ್ಪು ಮುಖ ಕಟ್ಟಿಕೊಳ್ಳುವುದು ಯಾಕೆ? ಎನ್ನುವ ಮನಸ್ಸು ಇನ್ನೊಂದೆಡೆ. ತ್ಯಾಗ-ಸ್ವಾರ್ಥ ಎಂಬ ಮುಸುಕುಗಳ ನಡುವೆ ನಡೆದ ಮನಸ್ಸಿನ ಆಂತರಿಕ ದ್ವಂದ್ವ ಯುದ್ಧ ಅದಾಗಿತ್ತು. ಆದರೆ ಮಾತನಾಡುವಾಗ ಸ್ವಾರ್ಥದ ನಾಲಿಗೆಯ ಮಾತೇ ಮುಂದಾಯಿತು.

"ನಾನು ಆಯ್ಕೆ ಮಾಡಿ ಹೇಳದಿದ್ದರೂ
ನೀನು ಯಾರನ್ನಾದರೂ ಒಬ್ಬನ್ನ ಮದುವೆ ಆಗತಿಯಾ
ಆದರೆ ಮದುವೆ ಆಗೋದೇನು ಬಿಡೋದಿಲ್ಲವಲ್ಲ ?............"

ಎಂದಾಗ ಮೂಡಬಹುದಾದ ಎಲ್ಲರ ಮಾತುಗಳೂ ಕೊಲೆಯಾಗಿ ಮೌನವೇ ಆವರಿಸಿತ್ತು. "ನಿನಗೆ ನೌಕರಿ ಸಿಗಲಿ ಮದುವೆ ಆಗೋಣ, ಮದುವೆ ಆಗದಿದ್ರು ಪರವಾಗಿಲ್ಲ ನಾವು ಹೀಗೇ ಇದ್ದು ಬಿಡೋಣ ಅಂದಿದ್ದೆ ನೆನಪಿದೆಯಾ?" ಎಂದು ಪ್ರಶ್ನಿಸಿದೆ......." ಪಿ.ಎಸ್.ಐ. ಆಗೋದು ಬೇಡಾ, ನೀನು ಅಧ್ಯಾಪಕನಾಗಿದ್ರೆ ಚೆನ್ನಾಗಿರ್ತದೆ........ ಎಂದಿದ್ದೆ. ಈಗ ನಿನ್ನ ಮೆಚ್ಚಿನ ಅಧ್ಯಾಪಕ ನೌಕರಿಯನ್ನೇ ಹಿಡಿದಿದ್ದೇನೆ............" ಎಂದೆ. ಏನು ನೆನಪಿಸಿಕೊಟ್ಟರೂ ಅದಕ್ಕೆ ಅವಳ ಉತ್ತರ ಕಣ್ಣೀರೇ ಆಗಿರುತ್ತಿತ್ತು. "ಆರು ತಿಂಗಳಾಯಿತು ಈಗ ಮನೆಯಲ್ಲಿ ಏನೆಲ್ಲ ನಡೆದಿದೆ" ಅಂದಳು.

"ಅಲ್ವೆ ಆರು ತಿಂಗಳಾಯಿತು
ಏನೆಲ್ಲಾ ಮನೆಯಲ್ಲಿ ನಡೆದಿದೆ ಅಂತಾ ಹೇಳ್ತೀಯಲ್ಲಾ
ಆರು ವರ್ಷ ಏನೆಲ್ಲಾ ನಡೀತಲ್ಲಾ ಅದನ್ನ ಮರ್ತೇಯಾ?"

ಎಂದು ಪ್ರಶ್ನಿಸಿದರೂ, ಅದಕ್ಕೂ ಅವಳ ಉತ್ತರ ಕಣ್ಣೀರೇ ಆಗಿತ್ತು. ಹಿಡಿದರೂ ಹಿಡಯಲಾಗದ, ಬಿಡದಿದ್ದರೂ ಬಿಟ್ಟು ಹೋಗುವ ಸ್ಥಿತಿಯ ಅರಿವು ನನಗೆ ಚೆನ್ನಾಗಿ ಗೊತ್ತಿತ್ತು. ಹೀಗಿದ್ದಾಗಲೂ ನಾನೊಬ್ಬ ಮಹಾನ್ ತ್ಯಾಗಿಯಂತೆ ಇನ್ನೊಬ್ಬರಿಗಾಗಿ ಬೆಟ್ಟವೇ ಹೊತ್ತು ನಿಂತ ಗಿರಿಧರನಾಗಲು ಪ್ರಯತ್ನಿಸುವಂತೆ ನನ್ನ ಸ್ವಂತದ ಆಸ್ತಿಯನ್ನು ಇನ್ನೊಬ್ಬನಿಗೆ ಧಾರೆ ಎರೆಯುತ್ತಿದ್ದೇನೆ ಎನ್ನುವ ಗಾಂಭೀರ್ಯ ಹೊರಗಿದ್ದರೂ ಒಳಗೆಲ್ಲ ನೋವಿನಿಂದ ಕೂಡಿದ ಹಾಲೇ ಮಡುಗಟ್ಟಿ ನಿಂತಿತ್ತು. ಆ ಗಾಂಭೀರ್ಯದ ಒಣ ಮಾತಿನಲ್ಲಿಯೂ ವೇದಾಂತದ ಸತ್ವವಿತ್ತು. ಬಿಡಿ ಬಿಡಿಯಾಗಿ ಒಂದೊಂದೇ ಮಾತುಗಳು ಹೊರಬೀಳುತ್ತಿದ್ದರೂ, ನಿಶ್ಚಲಮೂರ್ತಿಯ ಹಾಗೆ ಕುಳಿತಿದ್ದೆ. ಕಣ್ಣಿಂದ ನೀರು ತಾನಾಗಿಯೇ ಹರಿದು ಹೋಗುತ್ತಿದ್ದವು. ಹೀಗೆ ದ್ವಂದ್ವದ ತೊಳಲಾಟದ ನಡುವೆಯೂ ವಿಷಕಂಠ ವಿಷ ನುಂಗಿಯೂ

ನಗುವಂತೆ ನಗಲು ಪ್ರಯತ್ನಿಸಿ ಸೋಲುತ್ತಿದ್ದೆ. ಈ ಇಬ್ಬರೂ ಸಹೋದರಿಯರನ್ನು ಸಮಾಧಾನ ಮಾಡುತ್ತ ಮೇಧಾವಿಯಂತೆ ಕಣ್ಮುಚ್ಚಿ ನಾನೇ ಮನವೊಲಿಸಲು ಪ್ರಯತ್ನಿಸಿದ್ದೆ.

ಇಲ್ಲಿಗೆ ನಮ್ಮ ನಡುವೆ ಅಂಕದ ಪರದೆ ಜಾರಲಿಲ್ಲ. ಅವಳಿಗೆ ಇನ್ನೂ ಏನೋ ಹೇಳುವುದಿದೆ ಎನ್ನುವುದು ಅವಳ ಮುಖ ಹೇಳುತ್ತಿತ್ತು. ಆದರೆ ಅದು ಬಾಯಿಗೆ ಬರುತ್ತಿರಲಿಲ್ಲ ಅಥವಾ ಬಾಯಿಗೆ ಬಂದು ಮರಳಿ ಹೋಗುತ್ತಿದ್ದಿರಬೇಕು. ಇಲ್ಲವೆ ಹೇಗೆ ಆರಂಭಿಸುವುದೆಂದು ತೋಚದೆ ತಡಕಾಡುತ್ತಿರಬೇಕೆನಿಸಿ, ನಾನೇ ಮಾತಿಗೆ ಮುಂದಾದೆ. ಆದರೂ ಬಂದ ಉತ್ತರ:

"ಏನಿಲ್ಲ, ಇವರಿಬ್ಬರಲ್ಲೇ ಒಬ್ಬರನ್ನ ನೀನು ಮೆಚ್ಚಿದವರಿಗೆ ಮದುವೆ ಆಗೋಣ ಅಂತಾ ಡಿಸಾಯಿಡ್ ಮಾಡೋದಕ್ಕೆ ನಿನಗೆ ಇಲ್ಲಿಗೆ ಬರಲಿಕ್ಕೆ ಹೇಳಿದ್ದು, ಮತ್ತೇನಿಲ್ಲ" ಎಂದಳು.

ತನ್ನ ಕೈಯಲ್ಲಿರುವ ಗಡಿಯಾರವನ್ನು ತಗೆದು ನನ್ನ ಕೈಗೆ ಹಾಕಿದಳು. ಈ ಹಿಂದೆ ಅವಳು ಧಾರವಾಡಕ್ಕೆ ಬಂದಾಗ ಮದುವೆ ವಿಷಯ ಯಾವುದನ್ನೂ ಹೇಳಲಿಲ್ಲ. ಆದರೆ ಈಗ ಈ ವಿಷಯ ಹೇಳಿ ಗಡಿಯಾರ ನನ್ನ ಕೈಗೆ ಹಾಕಿದ್ದರಿಂದ, ಅರವಿಂದ ಈ ಗಡಿಯಾರ ತೆಗೆದುಕೋ ಆದರೆ ನನ್ನನ್ನು ಬಿಟ್ಟುಬಿಡು ಎಂದು ಹೇಳುವ ಹಾಗೆ ಅನಿಸುತ್ತಿತ್ತು. ಆದರೆ ಈ ಬಾರಿ ಗಡಿಯಾರವನ್ನು ಹಿಂದಿರುಗಿಸುವ ಪ್ರಯತ್ನ ಮಾಡಲಿಲ್ಲ. ಏಕೆಂದರೆ, ಮಂಗಳೂರಿನ ಸರಕಾರಿ ಕಾಲೇಜಿನಲ್ಲಿ ಅಧ್ಯಾಪಕನಾಗಿ ಸೇರಿದ ಮೇಲೆ ಗಡಿಯಾರ ತುಂಬಾ ಅವಶ್ಯವಾಗಿತ್ತು. ಆಗ ಅವಳು ಕೊಟ್ಟ ಗಡಿಯಾರವನ್ನು ಮರಳಿಸಬಾರದಿತ್ತು ಎಂದು ಪರಿತಪಿಸಿದ್ದೆ. ಹಾಗಾಗಿ ಬಾಯಿಯಲ್ಲಿ ಮಾತು ಬರದೆ ಮೌನವಾಗಿದ್ದೆ.

ಆ ಗಡಿಯಾರ ಇಂದಿಗೂ ನನ್ನ ಕೈಯಲ್ಲಿದೆ. ಯಾವುದೋ ಶತಮಾನದ ಗಡಿಯಾರದಂತೆ ಕಾಣುತ್ತದೆ. ಗಾಜು ಒಡೆದಿದೆ. ಮನೆಯವರೆಲ್ಲ ಬೇರೆ ಗಡಿಯಾರವನ್ನು ತಂದುಕೊಟ್ಟರೂ ಬದಲಾಯಿಸಲಿಲ್ಲ. ಈಗಲೂ ಬದಲಾಯಿಸುವ ಮನಸ್ಸಿಲ್ಲ. ಗಡಿಯಾರದ ನಿಮಿಷದ ಮುಳ್ಳು ತಿರುಗಿದಂತೆ ಅಂದಿನಿಂದ ಅವಳ ಸುತ್ತ ಸುತ್ತುವ ಮನಸ್ಸು ಇಂದಿಗೂ ಗೂಟಕ್ಕೆ ಕಟ್ಟಿದ ಹೋರಿಯಂತೆ ತಿರುಗುತ್ತಿದೆ.

ಮದುವೆಗೆ ಇನ್ನೂ ಮೂರು ದಿನಗಳಿವೆ ಎನ್ನುವಾಗ ಅವಳಿಂದ ಮತ್ತೊಂದು ತಂತಿ ಸಂದೇಶ ಬಂತು. ಕಾರವಾರಕ್ಕೆ ಹೋದಾಗ, ಸಹೋದರಿಯೊಂದಿಗೆ ಅವಳು ಅಲ್ಲಿ ಹಾಜರಿದ್ದಳು. ಅವಳ ಮುಖದ ಭಾವನೆಗಳಲ್ಲಿ ಈ ಹಿಂದಿನ ಭೇಟಿಗೂ ಇಂದಿಗೂ ಯಾವುದೇ ವ್ಯತ್ಯಾಸ ಕಾಣಲಿಲ್ಲ. ಕೋಣೆಯೊಳಗಡೆ ಪ್ರವೇಶ ಮಾಡಿದಾಗ ಮತ್ತದೇ ಹಳೆಯ ಹಕಳೆಗಳನ್ನು ಕಿತ್ತುವ ಮಾತುಗಳೇ ಆದವು. ಆದರೆ ಕೊನೆ ಕೊನೆಯಲ್ಲಿ ಅವಳ ಮಾತುಗಳು ನನಗೆ ದಿಗಿಲು ಹುಟ್ಟಿಸಿದವು.

"ಹೇಳು ಅರವಿಂದ್, ನೀನು ಈಗ ಏನು ಹೇಳ್ತೀಯಾ ಹೇಳು

ನೀನು ಹೇಳಿದ ಹಾಗೆ ನಾನು ಕೇಳ್ತೇನೆ" ಎಂದಳು.

ಆಗ ನನಗೆ ಏನು ಹೇಳಬೇಕೆಂಬುದೇ ತೋಚಲಿಲ್ಲ. ಮದುವೆಯ ಕಾರ್ಡನ್ನು ಹರಿದು ತುಂಡರಿಸುವಷ್ಟರ ಮಟ್ಟಿಗೆ ಅವಳ ವರ್ತನೆ ತಲುಪಿತ್ತು. ತಕ್ಷಣವೇ ಅದನ್ನು ತಡೆದು ನಿಲ್ಲಿಸಿದ್ದೆ. ಹಿಂದೆ ಆಡಿದ ಅವಳ ಎಷ್ಟೋ ಮಾತುಗಳನ್ನು ನಾನೇ ಪುನಃ ಹೇಳಬೇಕಾಗಿ ಬಂದೊದಗಿದ ಸಂದರ್ಭ ಅದು. ನನ್ನ ಅಂದಿನ ದಿನದ ಗೊಂದಲಮಯ ಸಂದರ್ಭದಲ್ಲಿ ಆಡಿದ ಮಾತುಗಳು ಮತ್ತೆ ಹೊರಬಂದವು. ನನ್ನ ಮಾತುಗಳು ಅವೇ ಆಗಿದ್ದರೂ ಅಂತರಂಗ ತಿಳಿಯಾಗಿತ್ತು. ಈಗ ನಾನು ನನ್ನ ಕೈಯಲ್ಲಿರುವ ಸಂಪತ್ತನ್ನು ಕಳೆದುಕೊಳ್ಳುತ್ತಿದ್ದೇನೆ ಎನ್ನುವ ಸಂಕಟದಲ್ಲೂ ಆ ತ್ಯಾಗದ ಮಾತುಗಳ ಹಿಂದೆ ಒಂದು ಬಗೆಯ ಸುಖವಿತ್ತು. ಆಗ ಅವಳು ತಾನು ಮಾಡಿದ ತಪ್ಪುಗಳನ್ನೆಲ್ಲ ಬಿಚ್ಚಿಡುತ್ತ ಬೆಣ್ಣೆಯಂತೆ ಮೆತ್ತಗಾಗಿದ್ದಳು. ಅವಳ ಕುರಿತಾಗಿ ನನ್ನ ಮನದ ಮೂಲೆಯಲ್ಲಿ ಚಿಗಿತಿದ್ದ ತಿರಸ್ಕಾರದ ಭಾವನೆ ದೂರ ಸರಿಯಿತು. ಅವಳ ಬಗ್ಗೆ ಎಲ್ಲಿಲ್ಲದ ಹೆಮ್ಮೆ ಎನಿಸಿತು. ಪರಸ್ಪರ ಸಮಾನ ದುಃಖಿಗಳ ನಡುವೆ ತ್ಯಾಗ ಎನ್ನುವ ಶಬ್ದಕ್ಕೆ ಅರ್ಥವಿತ್ತು.

"ನೀನು ಮದುವೆಗೆ ಬಾರದೆ ಹೋದರೆ ನಾನು ಮದುವೆಯಾಗಲಾರೆ" ಎಂದಾಗ, "ನೀನು ಹೇಳಿದ ಹಾಗೆ ಕೇಳುತ್ತೇನೆ ಅಂತ ನಾನು ಯಾವಾಗಲೋ ಹೇಳಿದ್ದೇನೆ. ಈಗ ನೀನು ಆರ್ಡರ್ ಮಾಡು" ಎಂದೆ. ಆದರೆ ಅವಳು ಪದೇ ಪದೇಯಾಗಿ ಮೇಲಿನ ಮಾತುಗಳನ್ನೇ ಹೇಳುತ್ತಿದ್ದಳು. ನನ್ನ ಮನಸ್ಸಿನಲ್ಲಿ ಮತ್ತೆ ಎದುರು ಅಲೆಗಳು ಏಳುತ್ತಿದ್ದವು. ಆದರೂ ಅದು ನನ್ನ ಮನಸ್ಸಿನ ಹೊಯ್ದಾಟದ ಗ್ರಹಿಕೆಯಾಗಿರಬೇಕು ಎನಿಸಿ ನನ್ನನ್ನೇ ನಾನು ಅದುಮಿಕೊಂಡೆ.

ವಿದಾಯದ ಕೊನೆಯ ಕ್ಷಣಗಳು ಅವು.

"ಅರವಿಂದ್........... ನನ್ನದೊಂದು ಕೊನೆಯ ಮಾತು ಕೇಳ್ತೀಯಾ?"

"ಹೇಳು ಮುಜುಗರ ಯಾಕೆ?"

".............. ನನ್ನ ಪತ್ರಗಳು ನಿನ್ನಲ್ಲಿ ಸುಮಾರು ಇರಬೇಕಲ್ವಾ?"

"ಹೌದು, ಮುನ್ನೂರಕ್ಕೂ ಮೇಲ್ಪಟ್ಟಿವೆ............"

"ಅವೆಲ್ಲ ನನಗೆ ತಂದು ಕೊಡು ಹಾಗೆನೆ

ನನ್ನ ನಿನ್ನ ಫೋಟೋ ಇರೋ ಆ ಎರಡೂ ಆಲ್‌ಬಮ್ ತಂದು ಕೊಡ್ತಿಯಾ?

ನೆಗೆಟಿವ್‌ನೂ ಬೇಕು.

ಪ್ಲೀಸ್ ನನ್ನದು ಇದು ಕೊನೆಯ ಕೋರಿಕೆ ಅರವಿಂದ್......

ನಾನು ನಿನ್ನಿಂದ ಬೇರೇನು ಕೇಳ್ಳಾರೆ."

ಎಂದು ಹೇಳುತ್ತ ಮುಖ ಕೆಳಕ್ಕೆ ಹಾಕಿದಳು. ಆಗ ನನ್ನ ತ್ಯಾಗದ ಬಲೂನಿಗೆ ಬೆಂಕಿ

ಬಿದ್ದ ಹಾಗಾಯಿತು. ಮಾತು ಹೊರಡದೆ ಮೂಕನಾಗಿ ತದೇಕ ಚಿತ್ತದಿಂದ ಅವಳನ್ನೇ ನೋಡುತ್ತಿದ್ದೆ. ಆಗ ನನ್ನಷ್ಟಕ್ಕೆ ನನಗೆ ಹೇಸಿಕೆ ಎನಿಸಿತು.

ಹೀಗಿದ್ದಾಗಲೂ ಅವಳ ಕೇಳಿಕೆಯಂತೆ ಅವಳ ಮದುವೆಗೂ ಹೋಗಿದ್ದೆ. ಆಗ ಆ ಮದುವೆಯ ಮಂಟಪವೇ ನನ್ನನ್ನು ಹಂಗಿಸುವಂತೆ ಭಾಸವಾಗುತ್ತಿತ್ತು. ಅವಳ ಅಣ್ಣ ನನ್ನನ್ನು ಕರೆದು ಬ್ರಾಹ್ಮಣರ ಪಂಕ್ತಿಯಲ್ಲಿ ಕೂಡ್ರಿಸಿ ಊಟ ಮಾಡಲು ಹೇಳಿದ. ಬೇಡ ನಾನು ಹೋಗುತ್ತೇನೆಂದರೂ ಕೇಳಲಿಲ್ಲ. ಇಂಗು ತಿನ್ನದ ನನ್ನ ಬಾಯಿಗೆ ಅತಿಯಾಗಿ ಇಂಗು ಹಾಕಿದ ಆ ಅಡಿಗೆಯನ್ನು ಬಾಯಿಯಲ್ಲಿ ಇಟ್ಟಾಗ ಉಮ್ಮಳಿಸಿ ವಾಂತಿ ಬರುತ್ತಿತ್ತು. ಆದರೂ ಸಹಿಸಿ ಸಹಿಸಿ ನುಂಗುತ್ತಿದ್ದೆ.

ವಾಂತಿ ಆದರೆ? ಇಂಗು ತಿನ್ನಲಾರದ ಈ ಮನುಷ್ಯ ಯಾರು? ನಮ್ಮವನಲ್ಲ ತಾನೇ? ಎಂದು ಪ್ರಶ್ನಿಸಿದ್ದು, ಗಲಾಟೆಯಾಗಿ ನನ್ನನ್ನು ಹೊರದೂಡಲು ಬಂದದ್ದು, ಅದಕ್ಕಿಂತ ಮುಂಚಿತವಾಗಿಯೇ ನಾನು ಅಲ್ಲಿಂದ ಹೊರಟು ಹೋದುದು, ಅವಳು ಮನೆಯ ಬಾಗಿಲಲ್ಲಿಯೇ ನಿಂತು ಕಣ್ಣೀರು ಸುರಿಸುತ್ತಿದ್ದುದು ಇಂಥವೆಲ್ಲ ಒಂದೊಂದೇ ಚಿತ್ರಗಳು ಕಣ್ಣ ಮುಂದೆ ಬಂದು ನನ್ನಲ್ಲಿಯೇ ಅಳುಕನ್ನು ತುಂಬಿದವು. ಇವೆಲ್ಲ ಬರಿ ಭ್ರಮೆಯ ಬರೆಗಳಾಗಿದ್ದವು. ಕಳ್ಳ ಎಂದರೆ ಹೆಗಲು ಮುಟ್ಟಿ ನೋಡಿಕೊಂಡಂತೆ.

ಇಂಥ ವಿಚಾರದ ಸುಳಿಯಲ್ಲಿ ನನಗೆ ಅಲ್ಲಿ ಏನನ್ನೂ ತಿನ್ನಲಾಗಲಿಲ್ಲ. ಊಟಕ್ಕೆ ಹಾಸಿದ್ದ ಬಾಳೆಲೆಯನ್ನು ಮಡಿಸಿ ಇಟ್ಟುಕೊಂಡೆ. ಪಂಕ್ತಿಯಲ್ಲಿರುವ ಅರ್ಧ ಜನಗಳ ಊಟವಾದರೂ ಮುಗಿಯಲಿ ಎಂದು ಕುಳಿತೆ. ಎಲೆ ಎತ್ತಿಕೊಂಡು ಹೋಗಬೇಕೋ ಅಲ್ಲಿಯೇ ಬಿಟ್ಟು ಹೋಗಬೇಕೋ ಎಂಬ ಹಪಹಪಿ. ಹೀಗಾಗಿ ಯಾರಾದರೊಬ್ಬರು ಏಳುವವರೆಗೆ ಕಾದು ಕುಳಿತೆ. ಅರೆ ಊಟ ಮಾಡಿದ ಆ ಎಂಜಲದ ಬಾಳೆ ಎಲೆಯನ್ನು ಅವರ ಮನೆಯ ಹಿತ್ತಲಲ್ಲಿ ಎಸೆದು ಬಂದೆ. ಆದರೆ ಅವಳ ನೆನಪೆಂಬ ಬುತ್ತಿ ಮಾತ್ರ ಬೆನ್ನ ಹಿಂದಿನ ನೆರಳಂತೆ ಕಟ್ಟಿ ತಂದೆ.

l

l

# ಭವಿಷ್ಯತ್ತಿನೊಂದಿಗೆ ಚೆಲ್ಲಾಟವಾಡುವ ಕೆಲ ಹುಡುಗಿಯರು

ಕಲಿಕೆ ಎನ್ನುವುದು ಮೊದಲ ತಲೆಮಾರಿನಲ್ಲಿ ಏನೆಲ್ಲಾ ಬದಲಾವಣೆಯನ್ನು ತಂದುಬಿಡುತ್ತದೆ. ಆದರೆ ಅದೇ ಎರಡನೇ ತಲೆಮಾರಿನಲ್ಲಿ ಬದಲಾವಣೆ ಎನ್ನುವುದು ಅಷ್ಟು ತ್ವರಿತವಾಗಿ ಕಂಡುಬರುವುದಿಲ್ಲ. ಈ ತ್ವರಿತ ಬದಲಾವಣೆಯ ಅಂಶಗಳಲ್ಲಿ ಪ್ರೀತಿ ಪ್ರೇಮ ಎನ್ನುವುದು ಅಂಕುರಿಸಿದರೆ ಅದರಿಂದ ಬೀಳುವ ಕೊಡಲಿಯ ಪೆಟ್ಟು ಸಹಿಸಿಕೊಂಡು ಏಳುವುದು ಬಹಳ ಕಷ್ಟದ ಕೆಲಸ. ಎದ್ದವರಿಗಿಂತ ಬಿದ್ದವರ ಭವಿಷ್ಯವೇ ನನ್ನ ಕಣ್ಣೆದುರಿಗಿದೆ. ಹೀಗಿರುವಾಗ ಭವಿಷ್ಯತ್ತನ್ನು ಕಳೆದುಕೊಂಡವರ ಬಗ್ಗೆ ಹೇಗೆ ಹೇಳದಿರಲಿ?

ಎಂ. ಎ. ಮುಗಿಸಿ ಸಂಶೋಧನೆ ಪ್ರಾರಂಭಿಸಿದ್ದೆ. ಮೊದಲನೆಯ ವರ್ಷ ಅದು. ಸಂಶೋಧನ ವಿದ್ಯಾರ್ಥಿಗಳಿಗೆ ಆಗ ಇನ್ನೂ ಪ್ರತ್ಯೇಕವಾದ ನಿಲಯ (ಹಾಸ್ಟೆಲ್) ಇರಲಿಲ್ಲ. ನಿಜಲಿಂಗಪ್ಪ ಹಾಸ್ಟೆಲ್‌ನಲ್ಲಿ ಸಂಶೋಧನೆ ನಡೆಸುವವರಿಗೆ ಪ್ರತ್ಯೇಕವಾಗಿ ಒಂದೊಂದು ಕೋಣೆಯನ್ನು ಒಬ್ಬೊಬ್ಬರಿಗೆ ಕೊಡಲಾಗುತ್ತಿತ್ತು. ಈ ಹಾಸ್ಟೆಲ್ ವಿಶ್ವವಿದ್ಯಾನಿಲಯ, ಕನ್ನಡ ವಿಭಾಗ, ಲೈಬ್ರರಿ ಎಲ್ಲದಕ್ಕೂ ಹತ್ತಿರವೇ ಇತ್ತು. ಇಲ್ಲಿ ಎಂ. ಎ. ಅಂತಿಮ ವರ್ಷ ಕಳೆದಿದ್ದೆ. ಕೀಸರು ಬೇಸರದಿಂದ ಬೇಸತ್ತ ನಾನು ಸಂಶೋಧನೆಯ ಇರುವಿಕೆಗಾಗಿ ಬೆಟ್ಟದಲ್ಲಿ ಇರುವ ಶಾಲ್ಮಲಾ ನಿಲಯ ಆಯ್ದುಕೊಂಡಿದ್ದೆ. ತುಂಬಾ ಪ್ರಶಾಂತವಾದ ವಾತಾವರಣ ಇತ್ತು. ಅಲ್ಲಿ ಒಬ್ಬನಿಗೆ ಪ್ರತ್ಯೇಕ ಕೋಣೆ ಸಿಗದಿದ್ದರೂ ಎಂ. ಎಸ್ಸಿ. ಪ್ರಥಮ ವರ್ಷದಲ್ಲಿ ಓದುವ ವಿದ್ಯಾರ್ಥಿಯೊಂದಿಗೆ ಇದ್ದೆ.

ನಾನು ಏಕಾಕಿತನವನ್ನೇ ಹೆಚ್ಚು ಪ್ರೀತಿಸುತ್ತಿದ್ದೆ. ನನ್ನ ಕೋಣೆಯಲ್ಲಿರುವ ವ್ಯಕ್ತಿಯೊಂದಿಗೂ ಹೆಚ್ಚಿನ ಮಾತುಕತೆ ಇರಲಿಲ್ಲ. ಆದರೆ ಆತ ಬಹಳ ಬ್ರಿಲಿಯಂಟ್ ಸ್ಟುಡೆಂಟ್ ಎಂಬುದು ಮಾತ್ರ ಕೇಳಿದ್ದೆ. ಗ್ರಂಥಾಲಯದಲ್ಲಿ ಕಾಲ ಕಳೆಯುವ ನಾನು ನನ್ನ ಕಣ್ಣೆದುರೇ ಆತ ಆಗಾಗ ಕಾಣುತ್ತಲೂ ಇದ್ದ. ನನಗಿಂತಲೂ ಒಳ್ಳೆ ಬಟ್ಟೆಗಳನ್ನು ಧರಿಸುತ್ತಿದ್ದ. ರಂಗಿನ ಕನ್ನಡಕ, ಮಿಂಚುವ ಬೂಟುಗಳು, ಸ್ಟೈಲ್‌ನಲ್ಲಿ ಸೇದುವ ಸಿಗರೇಟು, ಗುಂಗುರು ಕೂದಲು, ಇಂಥವೆಲ್ಲದರಿಂದ ವಿಶೇಷವಾಗಿಯೇ ಇದ್ದ ವ್ಯಕ್ತಿ. ಒಂದು ಬಾರಿ ನಾನು ಅವನಿಗೆ ಹೇಳಿದೆ-

"ನೋಡಿ ನನಗೆ ಸಿಗರೇಟು ಅಂದರೆ ಆಗದು

ನೀವು ಸೇದುದಾದ್ರೆ, ಹೊರಗಡೆ ಹೋಗಿ ಸೇದಿ" ಎಂದೆ.

ಮೊದಮೊದಲು ಮಾತಿಗೆ ಮಾನ್ಯತೆ ಕೊಟ್ಟು ಹೊರಗಡೆ ಹೋಗಿ ಸೇದುತ್ತಿದ್ದ. ಆದರೆ ಮತ್ತೆ ರೂಮಿನಲ್ಲಿಯೇ ಸೇದಲು ಪ್ರಾರಂಭಿಸಿದ.

"ನೋಡಿ ಪಾರ್ಟನರ್ ಈಗಾಗಲೇ ನಾನು
ಒಮ್ಮೆ ನಿಮಗೆ ಹೇಳಿದ್ದೇನೆ.
ನೀವು ಪುನಃ ರೂಂನಲ್ಲಿ ಸೇದುದು ಸರಿಯಲ್ಲಾ"
ಎಂದಾಗ, ಆತ ಕ್ಷಣವೇ ಉತ್ತರಿಸಿದ,
"ನೋಡ್ರಿ ಈ ರೂಂನಲ್ಲಿ ನನಗೂ ಹಕ್ಕಿದೆ
ನಾನು ಫೀ ತುಂಬುತ್ತೇನೆ
ನಿಮಗೆ ಸಿಗರೇಟ್ ಹೊಗೆ ಆಗದಿದ್ರೆ
ನಾನು ಸೇದುವಾಗ ನೀವೇ ಹೊರಗೆ ಹೋಗಿ" ಎಂದಾಗ

ನೇರ ನಾನು ಹಾಸ್ಟೆಲ್ ನಿಯಮಪಾಲಕರ ಹತ್ತಿರ ಹೋಗಿ ನನಗೆ ಬೇರೆ ರೂಂ ಕೊಡಲು ಕೇಳಿದೆ, ಇಲ್ಲವೇ ಆ ರೂಂನಿಂದ ನನಗೆ ಬದಲಾವಣೆ ಮಾಡಿ ಎಂದು ಕೇಳಿಕೊಂಡೆ.

ಬೇರೆ ರೂಂ ತೆರವಾಗಿರಲಿಲ್ಲ. ಪರಸ್ಪರ ಬದಲಾವಣೆಗೂ ಯಾರೂ ಒಪ್ಪಲಿಲ್ಲ. ಅನಿವಾರ್ಯವಾಗಿ ಆ ಕೋಣೆಯಲ್ಲಿ ಕಾಲ ಕಳೆಯಬೇಕಾಯಿತು. ಮೇಲಿನ ಘಟನೆಯಿಂದಾಗಿ ಮನಸ್ತಾಪವೂ ಆಯಿತು. ಹೀಗಾಗಿ ಅವನೊಂದಿಗೆ ಮಾತು ಇನ್ನೂ ಕಡಿಮೆಯಾದವು.

ವರ್ಷದ ಪರೀಕ್ಷೆಗೆ ಹತ್ತಿರದ ದಿನಗಳವು, ನಾನು ಸಿಟಿಬಸ್ ಇಳಿದು ನಡೆಯುತ್ತ ಹಾಸ್ಟೆಲಿಗೆ ಹೊರಟಿದ್ದೆ. ನನ್ನ ರೂಂ ಪಾರ್ಟನರ್ ಕೂಡಾ ನನ್ನ ಮುಂದಿನಿಂದ ಸುಮಾರು ಇಪ್ಪತ್ತು ಹೆಜ್ಜೆ ದೂರದಲ್ಲಿ ಹೋಗುತ್ತಿದ್ದ. ಅವನ ನಡಿಗೆ ಎಲ್ಲಿದ್ದರೂ ಗುರುತಿಸಬಹುದಿತ್ತು. ಆತ ಬೊಟಾನಿಕಲ್ ಗಾರ್ಡನ್ ಗೇಟ್ ಹತ್ತಿರ ಬಂದಾಗ ಅವನ ಮೈ ತುಂಬಾ ದೀಪದ ಬೆಳಕು ಬಿದ್ದಿತ್ತು. ಗೇಟಿನ ಮರೆಯಿಂದ ಬಂದ ನಾಲ್ಕಾರು ಜನ ಅವನನ್ನು ಹಿಡಿದವರೇ ಚೆನ್ನಾಗಿ ಥಳಿಸಿದರು. ನಾನು ಅವನ ಬಳಿ ಚೀರುತ್ತ ಓಡುವುದರಲ್ಲಿ ಅವರು ಪುನಃ ಆ ಕೃತ್ರಿಮ ಕಾಡಲ್ಲಿ ಮಾಯವಾದರು. ಆತ ನರಳುತ್ತಿದ್ದ. ಹಣೆ ಒಡೆದು ರಕ್ತ ಸೋರುತ್ತಿತ್ತು. ಏಳಲಾಗುತ್ತಿರಲಿಲ್ಲ. ಹೇಗೋ ಕೋಣೆಗೆ ಕರೆತಂದೆ. ಸಹಾಯಕ್ಕೆ ಬೇರೆ ವಿದ್ಯಾರ್ಥಿಗಳೂ ಇದ್ದರು.

ದಾರಿಯುದ್ದಕ್ಕೂ ಅವನೊಂದಿಗೆ ಮಾತನಾಡುತ್ತ ಹೋದಾಗ ಆತನೂ ಕೂಡ ಒಬ್ಬ ದಲಿತ ವಿದ್ಯಾರ್ಥಿ ಎಂದು ನನಗೆ ಗೊತ್ತಾದದ್ದು ಆಗಲೇ. ಈ ನಡುವೆ ಅವನ ವರ್ತನೆಗಳಲ್ಲಿ ಸಾಕಷ್ಟು ಬದಲಾವಣೆಗಳಾಗಿದ್ದವು. ಅವನ ಇಸ್ತ್ರಿ ಬಟ್ಟೆಗಳ ಮಡಿಕೆ ಮಾಸಿದ್ದವು. ಕೊಳಕಾದ ಅರಿವೆಯನ್ನೇ ಹಾಕಿಕೊಂಡು ತಿರುಗುತ್ತಿದ್ದ. ಲೈಬ್ರರಿಗೂ ಸುಳಿಯುತ್ತಿರಲಿಲ್ಲ. "ಊಟ ಮಾಡಿದರೆ ಮಾಡಿದ, ಇಲ್ಲವಾದರೆ ಇಲ್ಲಾ" ಎಂಬ ವರದಿಗಳೂ ಸಿಕ್ಕವು.

ಈತ ಬಿ.ಎಸ್ಸಿ. ಪ್ರಥಮ ದರ್ಜೆಯಲ್ಲಿ ಪಾಸಾಗಿದ್ದನೆಂದೂ ಬಾಬಾ ರಿಸರ್ಚ್ ಇನ್ಸ್‌ಸ್ಟಿಟ್ಯೂಟ್‌ನಲ್ಲಿ ಕೆಲಸ ಮಾಡುತ್ತಿದ್ದನೆಂದೂ, ಆ ಕೆಲಸ ಮಾಡುತ್ತಿದ್ದಾಗಲೇ ಯಾವುದೋ ಒಂದು ಪ್ರಯೋಗ ನಡೆಯಿಸಿ ಹೊಸತನ್ನು ಶೋಧಿಸಿದ್ದನೆಂದೂ, ಆ ಶೋಧನೆ ಮತ್ತು ಆತನ ಪ್ರತಿಭೆಯನ್ನು ನೋಡಿ ಹೆಚ್ಚಿನ ವಿದ್ಯಾಭ್ಯಾಸಕ್ಕೆ ಆ ರಿಸರ್ಚ್ ಇನ್‌ಸ್ಟಿಟ್ಯೂಟ್‌ನವರೇ ಹೆಚ್ಚಿನ ಓದಿಗಾಗಿ ಇಲ್ಲಿಗೆ ಕಳುಹಿಸಿದ್ದರು ಎಂದು ತಿಳಿಯಿತು. ಆತ ನನ್ನಿಂದ ಸಂಪೂರ್ಣವಾಗಿ ದೂರಾದಾಗ ತಿಳಿದ ವಿಷಯಗಳಿವು.

ಹೊಡೆತ ತಿಂದ ಈತ ಹಾಸಿಗೆಯನ್ನೇ ಹಿಡಿದ. ಬ್ಯಾಂಡೇಜ್‌ಗಳೊಂದಿಗೆ ನಾಲ್ಕಾರು ದಿನಗಳ ನಂತರ ಹೊರಗೆ ತಿರುಗಲು ಪ್ರಾರಂಭಿಸಿದ. ಮತ್ತೆ ರಾತ್ರಿ ಯಾರೋ ಅವನಿಗೆ ಹೊಡೆದರು ಎಂಬ ಸುದ್ದಿ ಸಿಕ್ಕಿತ್ತು. ಆತ ನರಳುತ್ತ ಮಲಗಿದ್ದ.

ಅವನ ಸ್ಥಿತಿಯನ್ನು ನೋಡಿ ನನ್ನ ಮನಸ್ಸಿನಲ್ಲಿ ಸಾಕಷ್ಟು ಪರಿವರ್ತನೆಯಾಗಿತ್ತು. ಆತ ದಲಿತ ಎಂಬುದು ತಿಳಿದಾಗ ಅವನ ಕುರಿತು ಕೆಲ ಬಾರಿ ಆರೈಕೆಗೂ ಹಾತೊರೆದಿದ್ದೆ. ಎರಡನೇ ಬಾರಿ ಹೊಡೆತ ತಿಂದಾಗ, ಆತ ಹಾಸಿಗೆಯಲ್ಲೇ ಉಚ್ಚೆ ಹೊಯ್ದುಕೊಳ್ಳುತ್ತಿದ್ದ. ನಿಧಾನವಾಗಿ ತಿಳಿಹೇಳಲು ಪ್ರಯತ್ನಿಸಿದೆ. ಪ್ರಯೋಜನವಾಗಲಿಲ್ಲ. ಉಚ್ಚೆ ಹೊಯ್ದು ತನ್ನ ಹಾಸಿಗೆ ಒದ್ದೆಯಾದಾಗ ಪುನಃ ಅದರಲ್ಲಿಯೇ ಮಲಗಲು ಅವನಿಗೆ ಮನಸ್ಸಾಗುತ್ತಿರಲಿಲ್ಲ. ಆಗ ನನ್ನ ಹಾಸಿಗೆಯನ್ನು ಬಳಸಿಕೊಳ್ಳುತ್ತಿದ್ದ. ರೂಮಿನ ಹೊರಗಿರಲಿ ಒಳಗಿರಲಿ ಬಾಗಿಲು ಮುಚ್ಚುತ್ತಿರಲಿಲ್ಲ. ರೂಮಿನಲ್ಲಿರುವ ಪುಸ್ತಕ ಯಾರಾದರೂ ಕದ್ದಾರು ಎಂಬ ಭಯ ನನಗೆ.

ಈತ ಒಂದು ಸ್ಥಳದಲ್ಲಿ ನಿಂತನೆಂದರೆ ಅರ್ಧಗಂಟೆ ಒಂದು ಗಂಟೆಯವರೆಗೆ ಒಂದೇ ರೀತಿಯಲ್ಲಿ ಜೋಲಿ ಹೊಡೆಯುತ್ತ ನಿಂತು ಬಿಡುತ್ತಿದ್ದ. ವಿದ್ಯಾರ್ಥಿಗಳೆಲ್ಲಾ ಅವನಿಗೆ ಹುಚ್ಚನೆಂದು ಕರೆಯಲು ಪ್ರಾರಂಭಿಸಿದರು. ಆದರೆ ಹಾಗೆ ಕರೆಯುವವರನ್ನು ಕಂಡಾಗ ನಾನು ರೇಗುತ್ತಿದ್ದೆ. ಆಗ "ಹೋ ಆರೈಕೆ ಮಾಡ್ತಾನೆ, ಮಾಡಲಿ ನೋಡೋಣ ಎಷ್ಟು ದಿನ ಮಾಡ್ತಾನೆ" ಎನ್ನುತ್ತಿದ್ದರಂತೆ.

ಒದ್ದೆಯಾದ ಆತನ ಹಾಸಿಗೆ ಬಿಸಿಲಿಗೆ ಹಾಕುವಾಗ ಕೆಲ ಜನ ನೋಡಿ ನಗುತ್ತಿದ್ದರು. ಹೀಗಾಗಿ ವಿದ್ಯಾರ್ಥಿಗಳು ಯಾರು ಇಲ್ಲದೇ ಇರುವ ಸಮಯ ನೋಡಿ ಆ ಕೆಲಸ ಮಾಡುತ್ತಿದ್ದೆ. ಇನ್ನೊಂದು ದಿನ ಆತ ನನ್ನ ಹಾಸಿಗೆಯಲ್ಲಿಯೇ ಉಚ್ಚೆಹೊಯ್ದಾಗ ಸಿಟ್ಟು ಬಂತು.

"ಏ ನೀ ಏನು ಮನುಷ್ಯ ಇದ್ದೀಯೋ
ದನಾ ಇದ್ದೀಯೋ"

ಎಂದು ಹೊಡೆಯಲು ಹೋದೆ. ಆತ ತರತರನೆ ನಡುಗತೊಡಗಿದ. ತಕ್ಷಣವೇ

ನನ್ನ ಕೈ ಕೆಳಕ್ಕಿಳಿದರೂ ಆತ ನಡುಗುತ್ತಲೇ ಇದ್ದ. ಆತನ ನಡುಗು ನೋಡಿ ನಾನು ಹೆದರಿ ಹೋದೆ. ಕಣ್ಣು ಹೇಗೇಗೋ ಮಾಡತೊಡಗಿದ. ನಾನು ಸಂಪೂರ್ಣ ಸೋತೆ. ತಕ್ಷಣವೇ ಅರೆ ಬಾಗಿಲು ಮುಚ್ಚಿ ಅಲ್ಲಿಂದ ಪರಾರಿಯಾದೆ. ಒಮ್ಮೆಲೇ ಮತ್ತೆ ಕೋಣೆಗೆ ಮರಳಿದ್ದು ರಾತ್ರಿ ಹತ್ತು ಗಂಟೆಗೆ. ಆಗಲೂ ಎದೆ ಹೊಡೆದುಕೊಳ್ಳುತ್ತಿತ್ತು. ಬಾಗಿಲು ತೆರೆದು ನೋಡಿದರೆ ಆತ ನೆಲದ ಮೇಲೆ ಬಿದ್ದುಕೊಂಡಿದ್ದ. ಹತ್ತಿರ ಹೋಗಿ ನೋಡಿದೆ, ಉಸಿರಿತ್ತು, ಆತನ ಹಾಸಿಗೆ ಒದ್ದೆಯಾಗಿತ್ತು. ನಾನು ಮುನ್ನೆಚ್ಚರಿಕೆಯಿಂದ ನನ್ನ ಹಾಸಿಗೆ ತೆಗೆದು ಕಪಾಟಿನಲ್ಲಿ ಇಟ್ಟು ಕೀಲಿ ಹಾಕಿ ಹೋಗಿದ್ದೆ. ಹಾಸಿಗೆ ಒದ್ದೆಯಾದ ಕಾರಣ ಕೆಳಗೆ ಮಲಗಿರಬೇಕೆಂದು "ಪಾರ್ಟನರ್ ಪಾರ್ಟನರ್" ಎಂದು ಭುಜ ತಟ್ಟಿ ಎಬ್ಬಿಸಿದೆ.

ಎಚ್ಚರಾದ ಆತ ನನ್ನನ್ನು ನೋಡಿದಾಕ್ಷಣವೇ ತನ್ನ ಎರಡು ಕೈಗಳನ್ನು ಮುಂದೆ ಹಿಡಿದು "ಹೊಡೆಯಬೇಡಾ, ಹೊಡೆಯಬೇಡಾ" ಎಂದು ಹೇಳುತ್ತಿದ್ದ. ನಾನು ಆತನಿಗೆ "ನಾನು ಹೊಡೆಯಲಾರೆ" ಎಂದು ತಿಳಿ ಹೇಳಲು ಹೋಗಿ ವಿಫಲನಾದೆ. ರೂಮಿಗೆ ಹೋಗುವಾಗ ನಾನೊಬ್ಬನೇ ಹೋಗಿರಲಿಲ್ಲ. ಜೊತೆಗೆ ಇನ್ನೊಬ್ಬನನ್ನು ಕರೆದುಕೊಂಡು ಹೋಗಿದ್ದೆ. ಆತ ಹೇಳಿದ-

"ವಾರ್ಡನ್‌ಗೆ ಕಂಪ್ಲೆಂಟ್ ಕೊಟ್ಟು

ಅವನಿಗೆ ಆಸ್ಪತ್ರೆಗೆ ಸೇರಿಸುವುದು ಒಳ್ಳೆಯದು ಎಂದು ಸಲಹೆ ಕೊಟ್ಟ. ಅದಕ್ಕೆ ನನ್ನ ಮನಸ್ಸು ಒಪ್ಪಲಿಲ್ಲ. ಸ್ನೇಹದಿಂದ ಈತನಿಗೆ ಸುಧಾರಿಸಲು ಸಾಧ್ಯ ಎಂದು ಕೊಂಡೆ. ನನ್ನ ಹಾಸಿಗೆಯಲ್ಲಿಯೇ ಒಂದನ್ನು ಅವನಿಗೆ ಕೊಟ್ಟು ಮಲಗಿಸಿದೆ.

ಮುಂದೆ ಆತನಿಗೆ ನನ್ನ ಮೇಲೆ ನಂಬಿಕೆ ಬಂದಿತೆಂದು ತೋರುತ್ತದೆ. ಪ್ರಜ್ಞಾವಸ್ಥೆಗೆ ಬಂದಾಗ ಕೆಲಬಾರಿ ಅತ್ತು ಅತ್ತು ಹೇಳುತ್ತಿದ್ದ:

"ನೋಡ್ರಿ ಪಾರ್ಟನರ್ ಪ್ರೀತಿಸಿದ್ರ ಹೂವಿನಂಥಾ
ಹುಡುಗಿಗೆ ಪ್ರೀತಿಸಬೇಕು. ನಾನೂ ಪ್ರೀತಿಸಿದ್ಯಾ
ಎಲ್ಲಾ ಮಾಡದ್ಯಾ ಅದು ಮಂದಿಗಿ ಗೊತ್ತಾಕ್ಕದ
ಅಂದಾಗ ಅಕಿ ಹೀಂಗ ಮಾಡ್ತಾಳ
ಅಂತ ಅಂದುಕೊಂಡಿರಲಿಲ್ಲ."
ಎನ್ನುತ್ತಿದ್ದ. ಇನ್ನೊಮ್ಮೆ ನಗುತ್ತ
" ಪಾರ್ಟನರ್ ನಾನು ಇವತ್ತು ಅವಳ ಮನೆಗೆ ಹೋಗ್ತೇನೆ
ಅವರು ಹೊಡೆಯೋದಿದ್ರೆ ಹೊಡಿಲಿ
ನೋಡ್ತೀನಿ, ಯಾರ ಸೋಲ್ತಾರಂತ"
ಎಷ್ಟೋ ಬಾರಿ ಹಾಗೆ ಹೇಳಿದಾಗ ಅಲ್ಲಗಳೆದು ಸುಮ್ಮನಾಗಿಸಿದ್ದೆ. ಹಾಸ್ಟೆಲಿನಲ್ಲಿದ್ದ

ಕೆಲವರು ನೇರ ನನ್ನ ಮುಖಕ್ಕೆ ಹೇಳುತ್ತಿದ್ದರು. ನೀವು ಅಂತಾ ಅವನನ್ನು ರೂಮ್‌ನಲ್ಲಿ ಇಟ್ಟುಕೊಂಡಿರಿ. ಇನ್ನೊಬ್ಬರ್‍ಯಾರಾದ್ರು ಆಗಿದ್ರ ಹೊರಾಗ ಹಾಕತ್ತಿದ್ರು ಎಂದಿದ್ದರು. ಇದೇ ಮಾತು ನಾನು ಅವನಿಗೆ ಹೇಳಿ ಎಚ್ಚರಿಸಿದ್ದೆ, ಪ್ರಯೋಜನವಾಗಲಿಲ್ಲ.

ಆತ ಪ್ರೀತಿಸಿದ್ದು ಒಬ್ಬ ಪ್ರೊಫೆಸರನ ಮಗಳು. ಆಕೆ ಅವನ ತರಗತಿಯಲ್ಲಿಯೇ ಓದುವವಳು. ಹಾಸ್ಟೆಲಿನ ವಿದ್ಯಾರ್ಥಿಗಳೆಲ್ಲಾ "ಅವಳೆಲ್ಲಿ ಇವನನ್ನು ಪ್ರೀತಿಸ್ತಾಳೆ ? ಅವನೇ ಇವಳಿಗೆ ಲೈನ್ ಹೊಡೀತಾನೆ. ಅದು ಒನ್‌ವೇ ಲವ್" ಎನ್ನುತ್ತಿದ್ದರು. ನಾನೂ ಅದನ್ನು ನಂಬಿದ್ದೆ. ಆಕೆ ನೀಳ ದೇಹದ ಚೆಲುವೆ. ಬೆಳ್ಳನೆ ಹೇಳಿ ಮಾಡಿಸಿದ ಮೈ ಮಾಟ, ಅಷ್ಟೇ ಮೃದುವಾದ ತೆಳುವಾದ, ತೆಳ್ಳನೆಯ ಬಟ್ಟೆ ತೊಟ್ಟು ಯಾವ ಗಂಡಸಿಗೂ ಆಕರ್ಷಿಸುವ ರೂಪಸಿ.

ಈತ ರೂಮಿನಲ್ಲಿ ಗೋಡೆ ನೋಡುತ್ತ, ಒಂದೊಂದು ಗಂಟೆಗಟ್ಟಲೇ ನಿಂತಂತೆ. ಪ್ರೊಫೆಸರ್ ಮನೆಯ ಗೇಟ್ ಮುಂದೆ ಹೋಗಿ ಗಂಟೆಗಟ್ಟಲೇ ನಿಲ್ಲುತ್ತಿದ್ದನಂತೆ. ಅದಕ್ಕಾಗಿಯೇ ಈ ಹೊಡೆತಗಳು ಬೀಳುತ್ತಿವೆ ಎಂದು ವಿದ್ಯಾರ್ಥಿಗಳು ಹೇಳುತ್ತಿದ್ದರು. ಇನ್ನು ಕೆಲವರು, ಇಲ್ಲಾ ಆಕೆಯನ್ನು ಪ್ರೀತಿಸುವ ಇನ್ನೊಬ್ಬ ವ್ಯಕ್ತಿ ಹೀಗೆ ಹೊಡೆಸುತ್ತಿದ್ದಾನೆ ಎಂದು ಹೇಳುತ್ತಿದ್ದರು. ಇನ್ನೂ ಕೆಲವರು ಆಕೆಯ ತಂದೆಯೇ (ಪ್ರೊಫೆಸರ್) ಹೊಡೆಸುತ್ತಿದ್ದಾರೆ ಎಂದು ಹೇಳುತ್ತಿದ್ದರು.

ಒಂದು ದಿನ ಆತ ಅವಳ ಮನೆಗೆ ಹೋಗುತ್ತೇನೆ ಎಂದು ಸಿದ್ಧನಾದಾಗ, ಬೇಡವೆಂದು ಹೇಳಿದರೂ ಕೇಳದೆ ನಗುತ್ತಲೇ ಹೊರಟೇಬಿಟ್ಟ. ಅವನಿಗೆ ಮುಟ್ಟುವುದಕ್ಕೂ ಹೇಸಿಗೆಯಾಗುತ್ತಿತ್ತು. ಮನಸ್ಸಿಲ್ಲದ ಮನಸ್ಸಿನಿಂದ ಅವನ ತೋಳು ಹಿಡಿದು ಒಳಕ್ಕೆ ಜಗ್ಗಿ ಬಿಟ್ಟೆ. ನೆಲಕ್ಕೆ ಬಿದ್ದವನೇ ಮತ್ತೆ ನಡುಗಲು ಪ್ರಾರಂಭಿಸಿದ. ಮತ್ತೆ ನಾನು ಮೊದಲಿನಂತೆ ಹೆದರಿದೆ.

ನಾನು ನನ್ನ ಗಾದಿಯನ್ನು ಕಪಾಟಿನಲ್ಲಿಟ್ಟು ಕೀಲಿ ಹಾಕಿದಾಗ ಬಕೇಟದಲ್ಲಿ ಉಚ್ಚೆ ಹೊಯ್ಯಲು ಪ್ರಾರಂಭಿಸಿದ. ಆಗ ಫಿನಾಯಲ್ ಹಾಕಿ ರೂಂ ಹಾಗೂ ಬಕೇಟ್ ಎರಡೂ ತೊಳೆಸಿದ್ದೆ. ಆನಂತರದಲ್ಲಿ ಬಕೀಟ್ ಕೂಡಾ ಕಪಾಟಿನಲ್ಲಿ ಇಡುತ್ತಿದ್ದೆ. ಆಗ ರೂಂನ ಮೂಲೆಯಲ್ಲಿಯೇ ಉಚ್ಚೆ ಹೊಯ್ಯುತ್ತಿದ್ದ. ರೂಂ ಕೆಲಸಗಾರನಿಗೆ ಹೇಳಿ ಹಣ ಕೊಟ್ಟು ತೊಳೆಸುತ್ತಿದ್ದೆ. ತೊಳೆಯುವಾಗಲೂ ಆತ ಹೇಳುತ್ತಿದ್ದ

"ಸುಮ್ಮನೆ ನೀವು ಯಾಕೆ ಇಂಥದ್ರಲ್ಲಿ
ಇರ್‍ತೀರಿ?........ನಿಗೆ (ಕ್ಲಾರ್ಕ್‌ನಿಗೆ)ನೀವು
ಒಳಾಗ ಹಾಕ್ಕೊಂಡ್ರೆ ರೂಂ ಚೇಂಜ್ ಮಾಡ್ತಾರೆ ಎಂದು ಸಲಹೆ ಇತ್ತ
ಮತ್ತೆ ತಡೆದು,

ಇಲ್ಲಾಂದ್ರ ಅವರಿಗೆ ಯಾರು ಇಲ್ಲೇನ್ರಿ

ಕರ್‍ಸಾದ್ರು ಕರ್‍ಸರ್‍ರಿ

ಬಂದು ಕರಕ್ಕೊಂಡು ಹೊಕ್ಕಾರ" ಎಂದ

ಕೊನೆಯ ಮಾತು ಹಿಡಿಸಿದರೂ ಮಧ್ಯದಲ್ಲಾದ ಬದಲಾವಣೆ ಕಂಡು ಏಕೋ ಬೇಡಾ ಎನಿಸಿತು. ಅಂದು ಸಾಯಂಕಾಲ ಮರಳಿ ರೂಮಿಗೆ ಬಂದರೆ ಮೂಲೆಯಲ್ಲಿ ಉಚ್ಚೆ ಹೊಯಿದದ್ದು ಅಲ್ಲದೆ ನೀರು ಕುಡಿಯಲು ಬಳಸುವ ಮಗ್ಗಿನಲ್ಲಿ ಮಲವೂ ಮಾಡಿ ಇಟ್ಟಿದ್ದ. ಕೋಣೆಯ ತುಂಬೆಲ್ಲಾ ವಾಸನೆ. ಹಾಗೆ ಮರಳಿದವನೇ ನೇರ ಅವರ ಮನೆಗೆ ತಂತಿ ಕಳಿಸಿದೆ. ಮನೆಯವರು ಬಂದವರೇ ಅವನನ್ನು ಕರೆದುಕೊಂಡು ಹೋದರು.

ಮರುದಿನ ಒಬ್ಬ ಅಧ್ಯಾಪಕ ನನ್ನ ರೂಮಿಗೆ ಬಂದರು. ಆತ ಊರಿಗೆ ಹೊರಡುವ ದಿನ ಮತ್ತೆ ಆ ಹುಡುಗಿಯ ಮನೆ ಬಾಗಲಿಗೆ ಹೋಗಿ ಗಲಾಟೆ ಮಾಡಿ ಬಂದಿದ್ದನಂತೆ. ಅದಕ್ಕಾಗಿ ಅವರು ಬಂದು ನನಗೆ ತರಾಟೆ ತೆಗೆದುಕೊಂಡರು.

............ ನೀವು ಅವರವರಾಗಿ ಸ್ವಲ್ಪ ಹೇಳಬಾರದೆ?

ತಿಳಿಯೋದಿಲ್ಲವೆ ನಿಮಗೆ ನೀವು ರೀಸರ್ಚ್ ಮಾಡ್ತೀರಿ

............. ರೀಸರ್ಚ್ ಮಾಡ್ತಿರೋ ಅಥವಾ ನೀವು

ಹೀಗೆ ಮಾಡ್ತಾ ತಿರಗತೀರೋ..........

ಎಷ್ಟೋ ಹೊತ್ತಿನವರೆಗೆ ತಾಳ್ಮೆಯಿಂದ ಇದ್ದೆ. ನನ್ನ ವಿಷಯಕ್ಕೆ ಬಂದಾಗ ತಾಳ್ಮೆ ತಪ್ಪಿ

"ಎದ್ದು ಹೋಗಿ ಮೊದಲು ಆ ಹುಡುಗಿಗೆ ಬುದ್ಧಿ ಹೇಳಿ

ನನಗೇನು ಹೇಳ್ತಿರಿ?

ಅವಳಾಡೋ ಚೆಲ್ಲಾಟ ಅವನ ಲೈಫ್ ಹಾಳು ಮಾಡಿದೆ

ನಿಮಗೇನೂ ಗೊತ್ತು?

ಅವಳೇನು ಮಹಾ ಗರಿತನಾ?

ಅವರ ಪರವಾಗಿ ಹೇಳೊಕೆ ಬಂದೀರಿ........"

ಎಂದು ಒಂದೇ ಸಮನೆ ಉಸುರಿ ಬಿಟ್ಟೆ. ಆತನ ಮುಖ ಬಿರಿಯಿತು. ಕಣ್ಣು ಕಿಸಿದ, ಎದ್ದು ನಿಂತ

"ಏನ್ರೀ ಏನು ಗೊತ್ತು ಅವ್ರ ಬಗ್ಗೆ ನಿಮಗೆ?"

"ನನಗೆಲ್ಲಾ ಗೊತ್ತು ಅಂವ ಡೈರಿಯಲ್ಲಿ ಎಲ್ಲಾ ಬರ್‍ದ ಇಟ್ಟಾನ

ಬೇಕಂದ್ರೆ ಓದಿ ಹೆಳ್ಳಾ? ಅಂದೆ

"ಹೋ ಓದಿ ಹೇಳ್ತಿಯ ?"

ಆ ಹುಚ್ಚನ ಮಾತು

ನಿನಗೂ ಹುಚ್ಚ ಹಿಡಿದಿದೆ........ ನೋಡತೀನಿ.............. ಎನ್ನುತ್ತ ಅಲ್ಲಿಂದ ಹೊರಟು ಹೋದ. ಆ ಹುಡುಗಿಯ ಕುರಿತು ಅಷ್ಟೊಂದು ಧೈರ್ಯವಾಗಿ ಹೇಳಲು ನನಗೆ ಆತ ಬರೆದ ಡೈರಿ ಸಿಕ್ಕಿತ್ತು. ಆತ ಊರಿಗೆ ಹೋಗುವ ರಾತ್ರಿ ಅದನ್ನು ಓದಿದ್ದೆ. ಬೊಟಾನಿಕಲ್ ಗಾರ್ಡನ್‌ದಲ್ಲಿ ಕುಳಿತು ತಾವು ಯಾವ ದಿನ ಏನೇನು ಮಾಡಿದ್ದೆವು ಎಂಬುದನ್ನು ಬರೆದಿದ್ದ. ಪ್ರತಿಯೊಂದು ಅಂಗಾಂಗಕ್ಕೆ ಯಾವ ಯಾವ ಸಾಂಕೇತಿಕ ಹೆಸರಿನಲ್ಲಿ ಕರೆಯಬೇಕು ಎಂದು ಅವಳು ಸೂಚಿಸಿದ್ದನ್ನೂ ಬರೆದಿದ್ದ. ಅವಳ ಬಟ್ಟೆ ಮುಚ್ಚುವ ಸ್ಥಳದಲ್ಲಿ ಇರುವ ಮಚ್ಚೆಯ ಮತ್ತು ಗಾಯದ ಗುರುತುಗಳನ್ನು ಬರೆದಿಟ್ಟಿದ್ದ. ಇದೆಲ್ಲಾ ಓದಿದಾಗ ಅವಳಾಡಿದ ಆಟ ಎಷ್ಟು ಎಂಬುದು ಗೊತ್ತಾಗಿತ್ತು.

ಆದರೆ ಮತ್ತೆ ಅವನನ್ನು ಕಾಣುವ ಮಾತನಾಡುವ ಅವಕಾಶ ನನಗೆ ದೊರೆಯಲೇ ಇಲ್ಲ. ಈ ಘಟನೆಯನ್ನು ಬರೆಯುತ್ತಿದ್ದಾಗಲೇ ಬಂದವ ಆತನ ಇನ್ನೊಬ್ಬ ಸ್ನೇಹಿತ ಡಾ. ಮಾನೆ. ಈತ ನನ್ನ ಸ್ನೇಹಿತ ಕೂಡ. ಆತನ ಬಗ್ಗೆ ಇವನಲ್ಲಿ ಪ್ರಸ್ತಾಪಿಸಿದಾಗ ಅಯ್ಯೋ ಆತ ನನ್ನ ಆತ್ಮೀಯ ಸ್ನೇಹಿತ. ಆತನ ವಿದ್ವತ್ತನ್ನು ಹಾಳು ಮಾಡುವುದಕ್ಕಾಗಿಯೇ ಅವರು ಬೀಸಿದ ಕೃತ್ರಿಮ ಜಾಲ ಅದು, ದಲಿತನೊಬ್ಬ ಸಂಶೋಧಕನಾಗಿ ಹೊರಬರುತ್ತಿದ್ದಾನೆಂದರೆ ಬೆಳೆಯುವ ಮುನ್ನವೇ ಕುಡಿ ಚಿವುಟುವ ಬಗೆ ಇದು. ಇಂಥ ಅಧ್ಯಾಪಕರು ವಿಶ್ವವಿದ್ಯಾನಿಲಯಗಳಲ್ಲಿ ಸಾಕಷ್ಟು ಜನರಿದ್ದಾರೆ ಎಂದು ವಿವರಣೆಯನ್ನು ಕೊಟ್ಟ. ಆತ ಭವಿಷ್ಯತ್ತನ್ನು ಕಳೆದುಕೊಂಡು ಮೂಲೆ ಗುಂಪಾದ ವಿಷಯ ಹೇಳಿದ. ಆತನೊಬ್ಬ ಅಂಬೇಡ್ಕರ್ ಪ್ರೇಮಿ. ತಾನು ತಿಳಿದದ್ದು ತನ್ನ ಜನಗಳೊಂದಿಗೆ ಸರಳ ಕನ್ನಡದಲ್ಲಿ ಹಂಚಿಕೊಳ್ಳುವ ಮನುಷ್ಯ ಎಂದು ಮುಂತಾಗಿ ವಿವರಗಳನ್ನು ಕೊಟ್ಟ. ಇದೂ ನಿಜವಿದ್ದರೂ ಇರಬಹುದು ಎನಿಸಿತು. ವಿಶ್ವವಿದ್ಯಾನಿಲಯಗಳಲ್ಲಿ ಸಾಕಷ್ಟು ಸ್ನೇಹಿತರು ಶೇಕಡಾ ಐವತ್ತು ಅಂಕಗಳು ಸಿಗಲಿಲ್ಲ ಎಂದು ಪರೀಕ್ಷೆಗೆ ಮರಳಿ ಕಟ್ಟಿದರೆ, ವಿ.ವಿ.ಯ ಅಧ್ಯಾಪಕರುಗಳು ನಿಮಗ್ಯಾಕೆ ಸೆಕೆಂಡ್ ಕ್ಲಾಸ್? ಬೇರೆ ಕಡೆ ಕೆಲಸಕ್ಕೆ ಅಪ್ಲಾಯ್ ಮಾಡಿ ನೌಕರಿ ಸಿಕ್ಕೇ ಸಿಗತದೆ, ಹ್ಯಾಗಿದ್ರು ರಿಜರ್ವೆಷನ್ ಇದೆಯಲ್ಲಾ ಎಂದು ಮಾರ್ಗದರ್ಶನ ಮಾಡುತ್ತಾರೆ ಎಂದು ಹೇಳುವ ಮಾತುಗಳು ಅಷ್ಟೇ ಸಾಮಾನ್ಯವಾಗಿದ್ದವು. ಹೀಗಾಗಿ ದಲಿತ ವಿದ್ಯಾರ್ಥಿಗಳು ತಮ್ಮ ಕಾಲ ಮೇಲೆ ತಾವೇ ಕಲ್ಲು ಹಾಕಿಕೊಳ್ಳುತ್ತಾರೆ. ಎಂದು ಹೇಳುವುದು ತುಂಬಾ ದುಸ್ತರವಾಗುತ್ತದೆ.

ಹೊಂಗನಸುಗಳನ್ನು ಕಟ್ಟಿಕೊಂಡು ಬಂದ ದಲಿತ ಮಿತ್ರರು ಭವಿಷ್ಯತ್ತನ್ನು ರೂಪಿಸಿಕೊಂಡದ್ದಕ್ಕಿಂತ ಕಳೆದುಕೊಂಡದ್ದೇ ಹೆಚ್ಚು. ಅಂತಹ ಸ್ನೇಹಿತರ ನೆನಪುಗಳು ಇನ್ನೂ ನನ್ನೆದೆಯ ಕೂಪದಲ್ಲಿ ಇವೆ. ಅವರೆಲ್ಲರ ಪ್ರತೀಕವಾಗಿ ಇದೊಂದನ್ನು ಇಲ್ಲಿ ಇಟ್ಟಿದ್ದೇನೆ.

ಈ ಗಾಜುಗನಸಿನ ಗೋಡೆಯನ್ನು ಒಡೆದು ಬಂದವರೂ ಇದ್ದಾರೆ. ಆದರೆ ಬಹಳ ಕಡಿಮೆ. "ಅಯ್ಯಾ ಎಂದರೆ ಸ್ವರ್ಗ" ಎನ್ನುವುದು ನೆನಪಿನಲ್ಲಿ ಇಟ್ಟುಕೊಂಡು, ಇದ್ದ ವ್ಯಕ್ತಿತ್ವ-ಅಸ್ತಿತ್ವ ಕಳೆದುಕೊಂಡು "ಜೀಯಾ" ಎಂದು ಡೊಗ್ಗಿ ಡಿಗ್ರಿ ತಂದವರೇ ಹೆಚ್ಚು. ಇದು ಮಾರ್ಗ!

l

l

# ಬೀರ್ ಕುಡಿದ ಮೊದಲ ದಿನ ಮತ್ತು ಬಂಡಾಯ, ಬ್ರಾಹ್ಮಣೀಕರಣ ಇತ್ಯಾದಿ

ಬಂಡಾಯ ಮತ್ತು ಬ್ರಾಹ್ಮಣೀಕರಣ ಎನ್ನುವ ಪದಗಳ ಅರ್ಥವ್ಯಾಪ್ತಿ ಕೆಲವೊಮ್ಮೆ ನನ್ನನ್ನು ತುಂಬ ಕಂಗಾಲಾಗಿಸಿದೆ. ಕೆಲವೊಮ್ಮೆ ಅರ್ಥ ಸಿಕ್ಕದೇ ಹೋದಾಗ ಬೇರೆಯವರಲ್ಲಿ ಚರ್ಚಿಸಿ ಉತ್ತರ ಸಿಕ್ಕದೆ ಸೋತಿದ್ದೇನೆ. ಹಿಡಿತ ಸಿಕ್ಕದೇ ಹೋದಾಗ ಇದರ ವ್ಯಾಪ್ತಿಗೆ ಮನಸೋತು ತಣ್ಣಗಾಗಿದ್ದೇನೆ.

ನಾನು ದಲಿತನಾದರೂ ದಲಿತೇತರರ ಸ್ನೇಹಕ್ಕೇನು ಕೊರತೆ ಇಲ್ಲ. ಈ ಸ್ನೇಹ ಸಂಬಂಧಗಳು ನನ್ನ ಮನೋವಿಕಾಸಕ್ಕೆ ಗರಿ ಮೂಡಲು ಸಹಾಯವಾದಾಗ ಅಂತಹ ಸ್ನೇಹಿತರನ್ನು ನೆನೆದಿದ್ದೇನೆ. ಕೆಲ ಬಾರಿ ಅವರ ಮಾತುಗಳು ನನ್ನನ್ನು ಕೊರೆದಾಗ ಯಾವುದೋ ಒಂದು ಮೂಲೆಯಲ್ಲಿ ಬೇಸರಿಸಿದ್ದೇನೆ.

ದಲಿತರು ಬ್ರಾಹ್ಮಣೀಕರಣಗೊಳ್ಳುತ್ತಿದ್ದಾರೆ. ಎನ್ನುವ ಮಾತು ಹಳೆಯದು. ಈ ಅಪವಾದ ಹೊರಿಸುವವರು ಕರ್ನಾಟಕದಲ್ಲಿ ಅಧಿಕೃತವಾಗಿ ದಲಿತೇತರರು. ದಲಿತರು ಈ ಬಗ್ಗೆ ಮಾತನಾಡಿದ್ದು ಕಡಿಮೆಯಾದರೂ ಅವರ ಈ ಮೌನ ದಲಿತೇತರರು ಹೊರೆಸುವ ಅಪವಾದವನ್ನು ಒಪ್ಪಿಕೊಂಡಿರುವಂತಿದೆ. "ಮೌನಂ ಸಮ್ಮತಿ ಲಕ್ಷಣಂ" -ಎಂಬಂತೆ.

ಬ್ರಾಹ್ಮಣೀಕರಣ ಎಂದರೇನು? ಎಂದು ಚರ್ಚಿಸುವ ನನ್ನ ಸ್ನೇಹಿತರಿಗೆ ಪ್ರಶ್ನಿದಾಗ ಅವರು ಕೊಟ್ಟ ಉದಾಹರಣೆಗಳು ಇವು-

ಮೇಲೆ "ಮೌನಂ ಸಮ್ಮತಿ ಲಕ್ಷಣಂ" ಎಂದು ಬಳಸಿದೆನಲ್ಲವೇ?
ಈ ರೀತಿ ಸಂಸ್ಕೃತಮಯವಾಗಿ ಬರೆಯುವುದು.
ದಲಿತ ದೇವರುಗಳನ್ನು ಮೂಲೆಗೇರಿಸಿ ರಾಮ-ಕೃಷ್ಣ,
ರಾಘವೇಂದ್ರನ ಭಜನೆ ಮಾಡುವುದು.
ಜನಿವಾರ ಹಾಕಿಕೊಳ್ಳಲು ಪ್ರಯತ್ನಿಸುವುದು.

ಹೀಗೆ ಬಾಲ ಬೆಳೆಸುತ್ತ ಹೋಗಬಹುದು. ಬ್ರಾಹ್ಮಣರಲ್ಲಿಯೇ ಬ್ರಾಹ್ಮಣ್ಯತ್ವ ಎಷ್ಟು ಉಳಿದಿದೆ ಎಂದು ಹುಡುಕ ಹೊರಟರೆ ಸಿಗುವುದು ಬಹಳ ಕಡಿಮೆ. ಆದರೆ ಇಂತಹದೇ

ಒಂದು ಗಂಡು ಪ್ರಶ್ನೆ ಎದುರಾದದ್ದು ಒಮ್ಮೆ ರಾಮದುರ್ಗದ ಭೋಜನದ ಕೂಟದಲ್ಲಿ.

ನಾನಾಗ ಇನ್ನೂ ಮೊದಲನೇ ವರ್ಷದ ಸಂಶೋಧನೆಯ ವಿದ್ಯಾರ್ಥಿಯಾಗಿದ್ದೆ. ರಾಮದುರ್ಗದಲ್ಲಿ ಹಿಂದೂ-ಮುಸ್ಲಿಂ ಎರಡು ಧರ್ಮಕ್ಕೆ ಸಂಬಂಧಿಸಿದ ಇಬ್ಬರು ಪ್ರೇಮಿಗಳು ಮದುವೆಯಾಗಿದ್ದರು. ಅದರ ಪರಿಣಾಮವಾಗಿ ಆ ಪ್ರೇಮಿಯ ಕಣ್ಣುಗಳನ್ನು ಕೀಳಿಸಿದ್ದ ವಾರ್ತೆ ಕರ್ನಾಟಕದಗಲ ಬಿಸಿಯಾಗಿ ಹಬ್ಬಿತ್ತು. ಅಲ್ಲದೆ ಎಲ್ಲಮ್ಮ ಒಮ್ಮಿಂದೊಮ್ಮೆಲೇ ಉದ್ಭವವಾದ ಸಂಗತಿಯೂ ಹೆಚ್ಚು ಮಾತು ಮಾಡಿತ್ತು. ಕೆಲ ಪ್ರಮುಖ ನಾಯಕರುಗಳ ಜೊತೆಗೆ ಬಾಲಂಗೋಚಿಯಾಗಿ ನನ್ನ ಮಾಜಿ ಪ್ರೇಯಸಿಯೊಂದಿಗೆ ನಾನು ಅಲ್ಲಿಗೆ ಹೋಗಿದ್ದೆ. ಅವಳು ಬ್ರಾಹ್ಮಣ ಕುಲಕೆ ಸಂಬಂಧಿಸಿದವಳು. ಘಟನೆಗೆ ಸಂಬಂಧಿಸಿದ ಚರ್ಚೆ, ಮಾತುಕತೆ, ಸಂದರ್ಶನ ಇಂಥವೆಲ್ಲಾ ಮುಗಿದ ನಂತರ ರಾತ್ರಿ ಭರ್ಜರಿಯ ಊಟದ ವ್ಯವಸ್ಥೆಯೂ ಇತ್ತು. ನನ್ನ ಪಾಲಿಗೆ ಅದು ಭರ್ಜರಿ ಊಟವೆಂದೇನು ಅನಿಸಿರಲಿಲ್ಲ.

ಮಾಂಸ ತಿನ್ನುವುದು ನನಗೆ ಯಾರೂ ಕಲಿಸಿಕೊಡಬೇಕಾಗಿರಲಿಲ್ಲ. ರೊಟ್ಟಿ ತಿನ್ನುವುದಕ್ಕಿಂತ ಮುಂಚಿತವಾಗಿಯೇ ಮಾಂಸ ತಿನ್ನುವುದನ್ನು ಬಾಲ್ಯದಲ್ಲಿಯೇ ರೂಢಿ ಮಾಡಿಕೊಂಡವ. ಆದರೆ ಮಾಂಸ ಹೇಗೆ ತಿನ್ನಬೇಕು ಎಂಬುದನ್ನು ಆವತ್ತಿನ ದಿನ ನಾನು ಇನ್ನೊಬ್ಬರಿಂದ ಉಪದೇಶಿಸಿಕೊಳ್ಳಬೇಕಾಗಿ ಬಂದಂತಹ ಸಂದರ್ಭ ಅದು!

ನಾನು ಎಂದೂ ಕುಡಿದವನಲ್ಲ. ಕುಡಿಯುವುದು ಎಂದರೆ ನೀರು ಕುಡಿಯುವುದರ ಬಗ್ಗೆ ನಾನು ಮಾತನಾಡುತ್ತಿಲ್ಲ. ಬೀರು ಕುಡಿಯುವುದರ ಬಗ್ಗೆ ಹೇಳುತ್ತಿರುವೆ. ನಾನು ಕುಡಿಯುವುದಿಲ್ಲ ಎಂದಾಗ ಸ್ನೇಹಿತರು ನಕ್ಕ ನಗೆ ಎಷ್ಟೋ ಬಾರಿ ವ್ಯಂಗ್ಯವಾಗಿ ಕಾಡಿ ಅವಮಾನಿತನಾಗಿ ಉಗುಳು ನುಂಗಿದ ಸಂದರ್ಭಗಳು ಹಲವಾರು. ಈ ಕುಡಿತದ ಗುಣ ನನ್ನಲ್ಲಿ ಇಲ್ಲದ್ದರಿಂದ ಹತ್ತಿರವಾಗಬಹುದಾದ ಸ್ನೇಹಿತರ ಗಳಸ್ಯ_ಕಂಠಸ್ಯ ಸ್ನೇಹವನ್ನು ಕಳೆದುಕೊಂಡಿದ್ದೇನೆ. "ಕುಡಿಯೋದಿಲ್ಲ" ಎಂದಾಗ ನಿಜವಾಗಿಯೂ ಇವನು ಬ್ಯಾಕ್‌ವರ್ಡ್‌ಪ್ಪಾ-ಭಾರಿ ಬ್ಯಾಕ್‌ವರ್ಡ್" ಎಂದು ಅಂದವರೂ ಇದ್ದಾರೆ. "ಅದೇನು ಬೀರು ಹೆಣ್ಣುಮಕ್ಕಳು ಕುಡಿಯುವಂತಹದು" ಎಂದು ಹೆಂಗಸರಿಗಿಂತ "ಕೀಳು" ಎನ್ನುವ ಭಾವನೆಯಿಂದ ಮಾತನಾಡಿದ್ದೂ ಇದೆ. ಈ ಮೊದಲು ಇಂತವೆಲ್ಲಾ ಮಾತುಗಳು ನನ್ನ ಮನಸ್ಸಿಗೆ ನಾಟಿರಲಿಲ್ಲ. ಆದರೆ ಅಂದಿನ ಆ ಸ್ನೇಹಕೂಟದಲ್ಲಿ ಸ್ನೇಹಿತರ ಚುಚ್ಚು ಮಾತುಗಳು

"ಹೌದು ನಾನು ಕುಡಿಯಬೇಕು" ಎನ್ನುವಂತೆ ಮಾಡಿದವು.

"ಹೌದು ನನಗೆ ಮಾಂಸ ತಿನ್ನಲು ಬರುವುದಿಲ್ಲ"

ಎನ್ನುವ ಭಾವನೆ ಮೂಡಿ ನನ್ನಷ್ಟಕ್ಕೆ ನಾನೇ ಜರಿದು ಹೋದೆ.

ಮನಸ್ಸು ಕಲ್ಲಾಗಿ "ನಾನೂ ದಲಿತ" ಎಂದು ತೋರಿಸಿಕೊಳ್ಳಲು ಪ್ರಯತ್ನಿಸಿದೆ.

ಸುಮಾರು ಹತ್ತು ಹನ್ನೆರಡು ಜನ ಸ್ನೇಹಿತರಿಂದ ಕೂಡಿದ ಕೂಟ ಅದು. ಅದರಲ್ಲಿ ದಲಿತನಾಗಿದ್ದವ ನಾನೊಬ್ಬನೇ ಮತ್ತು ಆ ತಂಡದಲ್ಲಿ ನನ್ನ ಪ್ರೇಯಸಿ ಒಬ್ಬಳೇ ಹೆಣ್ಣು. (ಈಗ ಪ್ರೇಯಸಿ ಎಂದು ಧೈರ್ಯವಾಗಿ ಬರೆಯುತ್ತಿದ್ದಂತೆ ಅಂದು ಧೈರ್ಯವಾಗಿ ಹೇಳಿಕೊಳ್ಳಲು ಹೆದರುತ್ತಿದ್ದೆ.) ಟೇಬಲ್ಲಿಗೆ ವಿಸ್ಕಿ-ರಮ್-ಬೀರ್-ಸೋಡಾ ಬಾಟಲಿಗಳು ಮುತ್ತಿಗೆ ಹಾಕಿದ್ದವು. ನನ್ನ ಆತ್ಮೀಯರಿಗೆ ಮೊದಲೇ ಹೇಳಿದ್ದೆ.

"ಸರ್ ನಾನು ಕುಡಿಯೋದಿಲ್ಲ
ಜಮ್ಮಂತ ಊಟ ಮಾಡ್ತೇನೆ"
"ಆಯಿತು ಬಾ ಮಾರಾಯ
ಇನ್ನೂ ಬೀರು ಇಲ್ಲಾ ಬಾರೂ ಇಲ್ಲ
ಆಗಲೇ ಊದಬತ್ತಿ ಹಚ್ಚುತಾ ಇದ್ದಿಯಲ್ಲಾ............."
ಹೌದು ಸರ್, ಮೊದಲೇ ಹೇಳಿಬಿಟ್ರೆ ಒಳ್ಳೆದಲ್ಲವೇ? ಎಂದಿದ್ದೆ.

ನಾನು ಕುಡಿಯುವುದಿಲ್ಲಾ ಎಂದಾಗ ನಾನೊಬ್ಬ ಅಪರಾಧಿ ಎನ್ನುವಂತೆ ನೋಡುವ ಕಣ್ಣುಗಳೂ ಅಲ್ಲಿದ್ದವು. ಹಾಗೆ ಮೊದಲೇ ಹೇಳಿದ್ದರೂ ನನ್ನ ಮುಂದೆಯೂ ಒಂದು ಗ್ಲಾಸೂ ಬಂತು. ಗ್ಲಾಸಿನಲ್ಲಿಬೀರು ಬಿತ್ತು. ಬೇಡಾ ಬೇಡಾ ಎಂದರೂ ಯಾರೂ ಕೇಳಲಿಲ್ಲ. ಎಲ್ಲರೂ ಒತ್ತಾಯಿಸುವವರೆ. ಅದರಲ್ಲಿ ಅವರ ಸ್ನೇಹದ ದನಿಯೂ ತುಂಬಿ ತುಳುಕುತ್ತಿತ್ತು. ಆದರೆ ಕುಡಿತ ನನಗೆ ಪ್ರಾಣ ಸಂಕಟ ತಂದಿತ್ತು. ಕೊನೆಗೆ ಎಲ್ಲರೂ ಒತ್ತಾಯಿಸಿ ಸೋತು ಹೋದರೆಂದು ಮನವರಿಕೆ ಮಾಡಿಕೊಳ್ಳುವಷ್ಟರಲ್ಲಿಯೇ ಬಿರುಸಾದ ಬಾಣವೊಂದು ಬಂತು. ಆ ಮಾತಿನ ಬಾಣ ನನ್ನೆದೆಗೆ ನಾಟಿದಾಗ, ನನ್ನ ಮುಂದಿದ್ದ, ಅರೆ ತುಂಬಿದ ಗ್ಲಾಸು ಎತ್ತಿದವನೇ ಗಟಗಟ ಕುಡಿದು "ದಕ್" ಎಂದು ಟೇಬಲಿಗಿಟ್ಟು ಸಾಕೆ? ಎಂದೆ.

ನಾನು ಕುಡಿಯುವಾಗ ಕೆಲವರು ನನ್ನ ಮುಖವನ್ನೇ ನೋಡುತ್ತಿದ್ದರು. ಇನ್ನೂ ಕೆಲವರು "ಹಾಗೆ ಕುಡಿಬಾರ್ದು" "ನಿಧಾನವಾಗಿ ಕುಡಿಬೇಕು" "ಸ್ವಲ್ಪ ಸ್ವಲ್ಪ ಕುಡಿಬೇಕು" ಎಂದು ಹೇಳುತ್ತಿದ್ದಂತೆಯೇ ಕುಡಿದು ಕುಕ್ಕರಿಸಿದ್ದೆ. ಬೀರು ತಣ್ಣಗಿತ್ತು. ಗಂಟಲಲ್ಲಿ ಗಟ ಗಟನೆ ಕುಡಿದೇನೆಂದರೂ ಇಳಿಯುತ್ತಿರಲಿಲ್ಲ. ಅದು ಜಾರಿ ಬಾಯಿಂದ ಹೊರಬೀಳುತ್ತಿದ್ದರೂ ನಾನು ಬಿಡುವ ಸ್ಥಿತಿಯಲ್ಲಿ ಇರಲಿಲ್ಲ. ಈ ದೃಶ್ಯದಲ್ಲಿ ನನ್ನ ಪ್ರೇಯಸಿ ಬಾಯಿ ಮುಚ್ಚದೆ ತದೇಕಚಿತ್ತದಿಂದ ನನ್ನನ್ನೇ ನೋಡುತ್ತಿದ್ದಳು. ಈ ರೀತಿ ಕೆರಳಿ ಕುಡಿಯಲು ಕಾರಣ ಅಲ್ಲಿ ಎದ್ದ ಮಾತುಗಳು.

"ದಲಿತರು ಬೆಳಗ್ಗೆ ಎದ್ದು ಕಾಫಿ ಕುಡಿದಾಂಗೆ ಕುಡಿತಾರಪ್ಪ.................
ನೀ ಎಂಥಾ ದಲಿತನೋ...................
ಏನು ಖೋಟಾ ದಲಿತ ಏನು ಮತ್ತೆ?................

ಎನ್ನುತ್ತ ಮಂದಹಾಸದಲ್ಲಿಯೇ ನಕ್ಕರು. ಅದು ನನಗೆ ವ್ಯಂಗ್ಯ ನಗೆಯಾಗಿಯೇ ಚುಚ್ಚಿತು. ಮೈಯೆಲ್ಲಾ ಬಿಸಿಯಾಯಿತು. ಪಿತ್ತ ನೆತ್ತಿಗೇರಿದಂತಾಯಿತು. ಅದರ ಮೇಲೆ ಮತ್ತೊಂದು ಬರೆ. ಏನು ಇವ್ರು ಕುಡಿಬೇಡಾ ಅಂತಾ ಹೇಳಿದಾರೇನು?

ಬೇಕಿದ್ರೆ ನಾವು ಅವರ್‍ರಿಗೆ ಹೇಳ್ತೆವೆ............

ಹೇಳಮ್ಮ............ಒಂದಿಷ್ಟು ನೀ ಕುಡಿ ಅಂತ ಹೇಳು"

ಆಗ ತಕ್ಷಣ ಆಕೆ

"ನಾ ಅವನಿಗೆ ಕುಡಿಬೇಡಾ ಅಂತ ಹೇಳಿದ್ದೀನಾ?

ಅರವಿಂದ್ ನೀ ಬೇಕಿದ್ರೆ ಕುಡಿ"

ಎಂದು ಹೇಳಿ ಜರಿದುಕೊಂಡಳು. ಆಕೆ ಈ ಮೊದಲು ನನಗೆ ಕುಡಿಯಬೇಡಾ ಎಂದು ಹೇಳಿದ್ದು ಇತ್ತು. ಆದರೆ ಅವಳ ಮಾತಿಗಾಗಿ ನಾನು ಕುಡಿಯುವುದು ಬಿಟ್ಟಿದ್ದೆ ಎಂದಲ್ಲ. ಅವಳು ನನ್ನ ಬಾಳ ಪುಟಗಳಲ್ಲಿ ದಾಖಲಾಗುವ ಮುನ್ನ ಕುಡಿಯುತ್ತಿದ್ದೆ ಎಂದೇನಿಲ್ಲ. (ಬುದ್ಧಿ ಬಲಿಯುವ ಮುನ್ನ ಅಂದರೆ ಪ್ರಾಥಮಿಕ ಶಾಲೆ ಕಲಿಯುವಾಗ ಸೇಂದಿ ಕುಡಿದ ಸಂದರ್ಭ ಇದೆ.) ನನ್ನ ಮನಸ್ಸಿನ ಮೇಲೆ ನನಗೆ ಹಿಡಿತದ ಶಕ್ತಿ ಇತ್ತು. ಆದರೆ ದಲಿತತ್ವದ ಬಗ್ಗೆ ಕೆಣಕಿದಾಗ "ಈ ಹೆಣ್ಣುಗಳ್ಳ, ಅವಳಿಗೆ ಹೆದರಿ ಕುಡಿಯುತ್ತಿಲ್ಲ" ಎನ್ನುವ ಧ್ವನಿ ಬಂದಾಗ ನನ್ನ ಸ್ವಾಭಿಮಾನ ಕೆರಳಿ ಕುಡಿದು ಬಿಟ್ಟೆ.

ಊಟ ಮುಗಿಯುತ್ತ ಬಂದರೂ ಮತ್ತೆ ನನಗೆ ಯಾರೂ ಕುಡಿಯಲು ಹೇಳಲಿಲ್ಲ. ಆದರೆ ಕೈ ತೊಳೆದು ಏಳುವಾಗ ಒಂದು ಮಾತು ಉದುರಿತು. ಬಹುಶಃ ಅವ್ರು ಬ್ರಾಹ್ಮಣ ಆಗೋದಕ್ಕೆ ನೋಡ್ತಾರಂತ ಕಾಣ್ತದೆ.

ನಿಜವಾಗಿಯೂ ನೀನು ಎಂಥಾ ದಲಿತನೋ?

ಕುಡಿಯೋದಿಲ್ಲಾ ಅಂತಾ ಹೇಳ್ತಿಯಾ?

ಸರಿಯಾಗಿ ನಿನಗೆ ಮಾಂಸನೂ ತಿನ್ನೋದಕ್ಕೂ ಬರೋದಿಲ್ಲವಲ್ಲ

ಸ್ವಲ್ಪ ನೋಡು, ಇವ್ರು ಹ್ಯಾಗೆ ತಿಂದಿದ್ದಾರೆ.....................

ಎಂದು ಅವಳು ತಿಂದು ಬಿಟ್ಟ ಎಲುಬುಗಳನ್ನು ತೋರಿಸಿದರು. ಅವಳು ತಿಂದು ಬಿಟ್ಟ ಎಲುಬುಗಳು ಹಲ್ಲಲ್ಲಿ ಹಾಕಿಕೊಳ್ಳಲು ಇಟ್ಟ ಬಿಳಿ ಕಡ್ಡಿಯಂತೆ ಬೆಳ್ಳಗೆ ಶುಭ್ರವಾಗಿದ್ದವು. ಅದನ್ನು ನೋಡಿ ನಾಚಿಕೆಯೂ ಎನಿಸಿತು. ಜೊತೆಗೆ ಹೇಸಿಕೆಯೂ ಎನಿಸಿ, ಒಳಗೇ ನಗೆಯೂ ಬಂತು. ಒಳಗೊಳಗೆ ನಾಚಿಕೆ ಎನಿಸಿದ್ದು, ಹೌದಲ್ಲ ಅವರ ಹಾಗೆ ನನಗೆ ತಿನ್ನಲಾಗಿಲ್ಲ ಎಂಬುದಾದರೆ, ನಗೆ ಬಂದುದು "ಎಂದೂ ತಿನ್ನಲಾರದ ಜನ ಗಿರಿ ಗಿರಿ ತಿಂದಿದ್ದಾರೆ" ಎನಿಸಿದರೂ ಅದು ತೋರಿಸಿಕೊಡುವ ಹಾಗಿರಲಿಲ್ಲ ಮತ್ತು ಅದನ್ನು ಹೇಳಿ ಅರಗಿಸಿಕೊಳ್ಳುವ ಧೈರ್ಯವೂ ಆಗ ನನ್ನಲ್ಲಿ ಇರಲಿಲ್ಲ.

ನನ್ನಂತೆಯೇ ಕುಡಿಯದೇ ಇರುವ ದಲಿತರು ನನ್ನ ಕಣ್ಣೆದುರಿಗೆ ಸಾಕಷ್ಟು ಜನರಿದ್ದಾರೆ. ಅದೇ ರೀತಿಯಲ್ಲಿ ಮಾಂಸವನ್ನು ತಿನ್ನದವರೂ ಇದ್ದಾರೆ. ಕೆಲ ದಲಿತ ಸ್ನೇಹಿತರು ಬಸವಣ್ಣನವರ

"ಕೊಲ್ಲುವವನೇ ಮಾದಿಗ
ಹೊಲಸು ತಿಂಬುವವನೇ ಹೊಲೆಯ"

ಎನ್ನುವ ವಚನ ನೆನಪಿಸಿ, ಇದರಿಂದಾಗಿಯೇ ತಾನೇ ನಮಗೆ ಹೊಲೆತನದ ಅಪವಾದ ಬಂದುದು, ಅದನ್ನೇ ಬಿಟ್ಟರಾಯಿತಲ್ಲವೇ? ಎಂದು ಹೇಳಿದವರೂ ಇದ್ದಾರೆ. ಆದರೆ ಈ ನೆಲೆಯ ಮಾತನ್ನು ನಂಬಿ ನಾನು ನನ್ನ ಇರುವಿಕೆಯನ್ನು ರೂಢಿಸಿಕೊಂಡವನಲ್ಲ. ಇನ್ನೂ ಕೆಲ ದಲಿತರು

ಎನ್ಮಾಡುದು ಹೇಳ್ರಿ? ತಿನ್ನಲಾರದವರೆಲ್ಲಾ
ತಿನ್ನುದಕ್ಕೆ ಸುರು ಮಾಡ್ಯಾರಾ. ಹೀಂಗಾಗಿ
ಮೂರು ರೂಪಾಯಿಕ ಕಿಲೋ ಹೋಗಿ
ಮೂವತ್ತ ರೂಪಾಯಿಕ ಕಿಲೋ ಆಗ್ಯಾದ
ತಿನ್ನು ಅಂದ್ರ ಏನು ತಿನ್ನತೀರಿ?

ಎಂದು ಎದುರು ಉತ್ತರ ಕೊಟ್ಟವರೂ ಇದ್ದಾರೆ. ಇಂಥ ಉತ್ತರಗಳು ಹೊಸ ಮಾತೇನೂ ಅಲ್ಲಾ. ದಲಿತೇತರ ಸ್ನೇಹಿತನೊಂದಿಗೆ ಧಾರವಾಡದ ಮಿಲನ್ ಹೊಟೇಲ್‌ದಲ್ಲಿ ಊಟಕ್ಕೆ ಕುಳಿತಾಗ "ನಾನು ಪ್ಲೇಟದಲ್ಲಿ ನೊಣ ಬಿದ್ದಿದೆ ಎಂದು ಬಿಟ್ಟರೆ, ಸ್ನೇಹಿತ, ಅಲ್ಲಾ ಮಾರಾಯ ಕೋಳಿಯಂಥಾ ದೊಡ್ಡ ಪ್ರಾಣೀನೇ ತಿನ್ನಾಗ ನೊಣದಂಥ ಸಣ್ಣ ಪ್ರಾಣಿ ಬಿತ್ತಂತ ಬಿಡುದಾ? ಎಂದು ಅದನ್ನೂ ಸವರಿ ಹೊಡೆದ ಸಂದರ್ಭ ಇನ್ನೂ ನೆನಪಿದೆ.

ಹೀಗೆ ದಲಿತೇತರು ಕುಡಿಯುವ ತಿನ್ನುವ ವಿಚಾರದಲ್ಲಿ ದಲಿತರ ಬದುಕನ್ನು ಅನುಕರಿಸಿದ್ದಾರೆ. ಅದು ನೇರವಾಗಿ ಅಲ್ಲಾ ಕದ್ದು ಮುಚ್ಚಿ ಎನ್ನುವುದು ಗೊತ್ತು. ಇಲ್ಲಿ ನನ್ನನ್ನು ಕಾಡಿದ ಪ್ರಶ್ನೆಗಳೆಂದರೆ ಮಾಂಸ ತಿನ್ನುವುದು ಹಾಗೂ ಕುಡಿಯುವುದನ್ನು ಬಿಡುವುದು, ಕೊಳಕುತನ ಕಿತ್ತು ಶುಚಿತ್ವದಿಂದ ಇರಲು ಪ್ರಯತ್ನಿಸುವುದು ಒಳ್ಳೆಯದಲ್ಲವೇ?

ದಲಿತರು ಮತ್ತು ದಲಿತೇತರರಿಂದ ಕೂಡಿದ ಬಂಡಾಯ ವೇದಿಕೆ ಪರಸ್ಪರ ವಿರೋಧಾಭಾಸಗಳಿಂದ ಕೂಡಿದ್ದು ಎನಿಸಿದರೂ ಅದು ತುಂಬ ವಿಶಿಷ್ಟವಾದುದು. ಮಾಂಸವನ್ನು ತಿನ್ನುವುದು, ಮದ್ಯ ಸೇವಿಸುವುದು, ಸಿಗಾರ್ ಸೇದುವುದು ಇಂಥ ಚಟುವಟಿಕೆಗಳು ದಲಿತೇತರರಿಗೆ ಪ್ರಗತಿಪರ ವಿಚಾರ ಎನಿಸಿದರೆ ಇಂಥ ಚಟುವಟಿಕೆಗಳಿಂದ ದೂರಿರುವುದೇ ಹೆಚ್ಚಿನ ದಲಿತರಿಗೆ ಪ್ರಗತಿಪರ ವಿಚಾರವಾಗಿದ್ದುದು. ಒಂದರ್ಥದಲ್ಲಿ ದಲಿತ

ಬಂಡಾಯದವರ ಸ್ನೇಹ ಹುಲಿ ಮತ್ತು ಆನೆಯ ಸ್ನೇಹವಿದ್ದಂತೆ ಇವೆರಡರ ಸ್ನೇಹ ಪ್ರಶ್ನಾತೀತವಾದುದು. ಮಾಂಸಾಹಾರಿಯಾದ ಹುಲಿ ಸ್ನೇಹಕ್ಕಾಗಿ ಸಸ್ಯಾಹಾರಿಯಾಗಲು ಪ್ರಯತ್ನಿಸಿದರೆ, ಸಸ್ಯಾಹಾರಿಯಾದ ಆನೆ ಮಾಂಸಾಹಾರಿಯಾಗಲು ಪ್ರಯತ್ನಿಸಿದಂತೆ. ಭಾರತದಂತಹ ವ್ಯವಸ್ಥೆಯಲ್ಲಿ ಇದು ಅಸಾಧ್ಯವಾದರೂ ಇಂಥ ಒಂದು ಸಾಹಸಕ್ಕೆ ಸನ್ನದ್ಧವಾದುದೇ ಅಪೂರ್ವ ಸಂದರ್ಭ, ವೈಚಾರಿಕತೆಯ ವಿರೋಧಭಾಸಗಳ ನಡುವೆಯೂ ಇರುವ ಬಂಧ ಅಪರೂಪದ್ದು. ಆದರೆ ಈ ಬಂಧ ಎಷ್ಟು ಬಿಗುತರವಾದದ್ದು ಎನ್ನುವುದು ಚರ್ಚಾಸ್ಪದವಾದುದು.

l

l

# ಚಹ ಸಂವಾದದಲ್ಲಿ ಕಾಫಿಯಾದಾಗ

ಚಹ ಸುಡುತ್ತಿತ್ತು
ಬಿಸಿಯನ್ನು ಸಹಿಸಿಕೊಂಡ
"ಕಪ್ಪು"
ಮೌನವಾಗಿತ್ತು.
ಅಡಿಯಲ್ಲಿಯೇ ಹಾಸಿಕೊಂಡ
ಸ(○)ಸಾರ
ಜೋಪಾನವಾಗಿತ್ತು
ಚಹ ಕುಡಿದರೆ ಬಿಸಿ
ಕಾಫಿ!
ಅತ್ತ ಉಗುಳಲಾಗದ
ಇತ್ತ ನುಂಗಲಾಗದ ಕುತ್ತು.

ಆ ಮನೆಯೇನೂ ಅರಮನೆಯಾಗಿರಲಿಲ್ಲ. ಆ ಮಾರ್ಕ್ಸ್‌ವಾದಿ ಸ್ನೇಹಿತನ ಖಾದಿಯಷ್ಟೇನು ಮನೆಯೂ ಬಡವಾಗಿರಲಿಲ್ಲ. ನಾಲ್ಕಾರು ಜನ ಗೆಳೆಯರು ಸೋಫಾದ ಮೇಲೆ ಕುಳಿತುಕೊಂಡಿದ್ದರು. ಟಿ.ವಿ.ಯಲ್ಲಿ ಕ್ರಿಕೆಟ್ ಆಟ ಬಿರುಸಿನಿಂದಲೇ ನಡೆದಿತ್ತು. ಆ ನನ್ನ ಸ್ನೇಹಿತ ಸಂಗೀತ ಹೇಳುವ ಕುರ್ಚಿಯ ಮೇಲೆ ಕುಳಿತಿದ್ದ. ನಾನು ಮೂರು ಕಾಲಿನ ದುಂಡಾಗಿ ತಿರುಗುವ ಸ್ಟೂಲ ಮೇಲೆ ಕುಳಿತಿದ್ದೆ.

ಚಹ ಬಂದು ಬಹಳ ಹೊತ್ತಾಗಿತು. ಅವರ ಮನೆಯೊಳಗೆ ಕಾಲಿಡುವ ಮುನ್ನ ನಾ ಹೊಡೆದ ಲಲ್ಲೆ ಇನ್ನೂ ಮುಖದ ಮೇಲೆಯೇ ಇತ್ತು. ನನ್ನ ಸ್ನೇಹಿತ ವಯಸ್ಸಿನಲ್ಲಿ ನನಗಿಂತ ಹಿರಿಯ. ಹೀಗಾಗಿ ನಾನು ಅವರಿಗೆ ಬಹುವಚನದಲ್ಲಿಯೇ ಸಂಬೋಧಿಸಿ ಮಾತನಾಡುತ್ತಿದ್ದೆ. ಆ ಸ್ನೇಹಿತ ಮಾತಿಗಿಳಿದ:

> "ನನಗೆ ಜಾತಿ ಭೇದ ಎನ್ನುವುದೇ ಇಲ್ಲ.
> ನನ್ನ ಮನೆಗೆ ಸಾಕಷ್ಟು ಹರಿಜನರು ಬರ್‍ತಾರೆ, ಹೋಗ್ತಾರೆ.
> ಚಹ ಕುಡಿತಾರೆ ಊಟ ಮಾಡ್ತಾರೆ..........."

ಈ ಮಾತುಗಳನ್ನು ಕೇಳಿದಾಕ್ಷಣವೇ ಜರ್‍ರನೇ ಜರಿದು ಹೋದೆ. ಮುಖ ಸುಟ್ಟು

ಬದನೆಕಾಯಿಯಂತಾಗಿ ಹೋಯಿತು. ಈ ಬಗೆಯ ಮಾತುಗಳನ್ನು ಇದೇ ಮೊದಲ ಬಾರಿಗೆ ಕೇಳಿದ್ದು ಎಂದೇನಲ್ಲ. ಈ ಮೊದಲು ಇಂತಹ ಮಾತುಗಳನ್ನು ಕೇಳಿ ಒಳಗೊಳಗೆ ತುಕ್ಕು ಹಿಡಿದು ಹೋಗಿದ್ದೆ. ಹಿಂದೆ ತರ್ಕಿಸಿದ, ತರ್ಕಿಸಬಹುದಾದ ಎಲ್ಲ ಪ್ರಶ್ನೆಗಳೂ ನನ್ನೆದುರು ಬಂದು ನಿಂತವು:

ನನ್ನನ್ನು ಇಲ್ಲಿಗೆ ಕರೆದು ತಂದದ್ದು ಯಾಕೆ?
ಚಹ ಕುಡಿಸುವುದಕ್ಕಾಗಿಯೋ ಅಥವಾ ನೀನು ಹರಿಜನ ವ್ಯಕ್ತಿ
ಎಂದು ನನಗೆ ನೆನಪು ಮಾಡಿ ಕೊಡುವುದಕ್ಕೋ?
ಇವರು ಪ್ರಗತಿಪರ ವಿಚಾರವಾದಿ ಎಂದುಕೊಂಡೇ ನಾನು
ಇವರ ಮನೆಗೆ ಬಂದುದಲ್ಲವೇ?
ಹೀಗಿದ್ದಾಗ ಇವರು ನನ್ನ ಜಾತಿಯನ್ನು ಮತ್ತೇಕೆ ಕೆದಕಬೇಕು?
ನೀನು ಹರಿಜನನಾದರೂ, ನಾನೂ ಕರೆದು ಚಹ ಕುಡಿಸುತ್ತಿದ್ದೇನೆ
ಎಂದು ಜಂಭ ಕೊಚ್ಚಿಕೊಳ್ಳುವುದಕ್ಕಾಗಿಯೇ?

ಹೀಗೆ ಪ್ರಶ್ನೆಗಳು ನನ್ನ ಎದೆಯುದ್ದಕ್ಕೂ ಎದ್ದು ನಿಂತಾಗ, ಚಳಿ ಹಿಡಿದ ನಾಯಿಯಂತೆ ನಾನು ಮುದ್ದೆಯಾದೆ. ಟಿ.ವಿ. ಯ ಚಿತ್ರದಲ್ಲಿ ಆಡುತ್ತಿದ್ದ ಆಟಗಾರ ಜೋರಾಗಿ ಚೆಂಡು ಬಾರಿಸಿದ. ಆ ಚೆಂಡು ನನ್ನೆದೆಗೆ ಬಂದಂತಾಗಿ, ನೆಲಕಚ್ಚಿದಂತಾದೆ. ಆತ ಹೊಡೆದದ್ದು ಬೌಂಡ್ರಿ. ನನ್ನ ಸ್ನೇಹಿತ ಹಾಗೂ ಅವರ ಗೆಳೆಯರೆಲ್ಲ ಚಪ್ಪಾಳೆ ತಟ್ಟಿ ನಗುತ್ತಿದ್ದರು. ಆ ಚಪ್ಪಾಳೆ ಮತ್ತು ಅವರ ನಗು ಇಮ್ಮಡಿಸಿದಂತಾದವು. ಆಸನ ಬಿಟ್ಟು ಬಿರಬಿರನೆ ಹೊರನಡೆದೆ. ನನ್ನ ಸ್ನೇಹಿತ ಅವರ ಗೆಳೆಯರೆಲ್ಲ ಹೊರಗೆ ಬಂದರು. ಆಶ್ಚರ್ಯದಿಂದ ಸ್ನೇಹಿತ ನನಗೆ ಕರೆಯುತ್ತಿದ್ದರೆ ಅವರ ಗೆಳೆಯರು ಅಷ್ಟೇ ಅವಕ್ಕಾಗಿ ನೋಡುತ್ತಿದ್ದಿರಬೇಕು.

"ಬೌಂಡ್ರಿ ಅಲ್ಲ ಹರಿಜನ"

ಎಂದು ಆವೇಶದ ಆ ಕೊರಕಲು ದನಿಯಲ್ಲಿಯೇ ಹೇಳಬೇಕೆಂದರೂ, ದನಿ ಹೊರಬರಲಿಲ್ಲ. ನನ್ನ ಮುಖವನ್ನೂ ಅವರಿಗೆ ತೋರಿಸಲಿಲ್ಲ.

ಮಾನಸಿಕವಾಗಿ ಅಂತರಂಗದಲ್ಲಿಯೇ ನಡೆಯುವ ಈ ಹೋರಾಟ ಹೇಳಲಸಾಧ್ಯವಾದುದು. ಇಂಥ ವಿಷಯಗಳು ಎಷ್ಟೋ ಬಾರಿ ಸ್ನೇಹಿತರಲ್ಲಿ ಬಾಯಿಬಿಟ್ಟು ಹೇಳಲಾಗುವುದಿಲ್ಲ. ಹೇಳಿದರೆ ಎಲ್ಲಿ ಹಾಸ್ಯ ಮಾಡಿ ನಕ್ಕು ಬಿಡುತ್ತಾರೋ ಎಂಬ ಅಳುಕು. ಮಾತನಾಡದೆ ಮೌನವಾಗಿದ್ದರೆ ಇವನಿಗೆ ಜಂಭ, ಸೊಕ್ಕು ಎಂದೆಲ್ಲ ಹೇಳಿಬಿಡುತ್ತಾರೆ.

ದಲಿತರು ವಿದ್ಯಾವಂತರಾದರೂ ಆರ್ಥಿಕ ಸೌಲಭ್ಯ ಹೊಂದಿದ್ದರೂ "ಜಾತಿ" ಎನ್ನುವ "ಪಿಶಾಚಿ" ನಮ್ಮ ಅಂತರಂಗದಿಂದ ತೊಲಗುವುದಿಲ್ಲ. ದಲಿತರ ಕುರಿತಾಗಿ ಕೆಲವು ಪ್ರಗತಿಪರ ಸ್ನೇಹಿತರ ಕಳಕಳಿ, ಅನುಕಂಪ ಪ್ರಶ್ನಾತೀತವಾದುವು. ಆದರೆ ಎಷ್ಟೋ ಬಾರಿ ಗಮನಕ್ಕೆ ಬಾರದೆ ತಪ್ಪುಗಳು ನಡೆದು ಹೋಗುತ್ತವೆ. ಪ್ರಜ್ಞಾವಂತ ದಲಿತರ ಮನಸ್ಸಿನಲ್ಲಿ ಇಂಥವು "ಕಪ್ಪು ಕಲೆ"ಯಾಗಿ ನಿಂತುಬಿಡುತ್ತವೆ.

l

l

# ಮಾರ್ಕ್ಸ್‌ವಾದ ಮತ್ತು ಎಂಜಲು ತಟ್ಟೆ

ಹುಡುಗ;
ಮೂಳೆ ಮಾಂಸಗಳಿಲ್ಲದ
ಊಟದ ತಟ್ಟೆ
ಮೀಸಲಾತಿಯ ಹುಳುವೇ
ಮೃಷ್ಟಾನ್ನವಿದು
ಇದು ತುಪ್ಪ ಹಾಕಿ ಬೇಯಿಸಿದೆ
ಇದು ಹಾಲಲ್ಲಿ ಮಾಡಿದ್ದು
ಇದರ ಪರಿಮಳ ನೋಡು;
ಚೆನ್ನಾಗಿದೆಯೇ
ಅಯ್ಯೋ;
ಬರೀ ಇಂಗು!

ನೀವೇನೇ ಹೇಳಿ, ನಮ್ಮಲ್ಲಿ ಇರುವ ಪ್ರಮಾಣಕ್ಕಿಂತ ತೋರಿಸಿಕೊಳ್ಳುವ ಪ್ರಮಾಣವೇ ಹೆಚ್ಚು. ಇದೊಂದು ಹುಚ್ಚು ಎಂದರೂ ಪರವಾಗಿಲ್ಲ ಒಪ್ಪುತ್ತದೆ. ನಾನೂ ಹಿಂದೆ ಹೀಗೇ ವರ್ತಿಸಿದ್ದೂ ಇದೆ. ಆದರೆ ನನ್ನಷ್ಟಕ್ಕೆ ನನಗೆ ಅಪರಾಧಿ ಭಾವನೆ ಕಾಡಿದಾಗ ಆದಷ್ಟು ಇಂತಹ ವಸ್ತುವಿನಿಂದ ದೂರಿರಲು ಪ್ರಯತ್ನಿಸಿದ್ದೇನೆ ಮತ್ತು ಈಗಲೂ ಪ್ರಯತ್ನಿಸುತ್ತಿದ್ದೇನೆ. ಬಹುಶಃ ಮೊದಲ ತಲೆಮಾರಿನ ಅಕ್ಷರಸ್ಥ ಜನಾಂಗದಲ್ಲಿಯೇ ಈ ಬಗೆಯ ಮನೋಭಾವನೆ ತುಂಬಿಕೊಂಡಿರುತ್ತದೆ ಎನ್ನುವ ನನ್ನ ವಿಚಾರ ಅನಿವಾರ್ಯವಾಗಿ ಬದಲಿಸಿಕೊಳ್ಳಬೇಕಾಯಿತು.

ನಾನೊಂದು ಸಂದೇಹದ ಪ್ರಾಣಿಯೆ? ಎಂದು ನನ್ನಷ್ಟಕ್ಕೆ ನಾನೇ ಸಾಕಷ್ಟು ಬಾರಿ ಪ್ರಶ್ನಿಸಿಕೊಂಡಿದ್ದೇನೆ. ಸಮಯ, ಸಂದರ್ಭಗಳು ಪರಿಸರದಲ್ಲಿ ಸಂದೇಹಪಡುವಂತೆ ಪ್ರೇರೇಪಿಸಿ ಬಿಡುತ್ತವೆ. ಪಟ್ಟ ಸಂದೇಹಗಳು ಕೇವಲ ಸಂದೇಹಗಳಾಗಿಯೇ ನಿಂತು ಬಿಡುವುದಿಲ್ಲ. ಹೀಗಾದಾಗ ನಾನು ಸಂದೇಹದ ಪ್ರಾಣಿ ಎಂದು ಹೇಗೆ ಒಪ್ಪಲಿ? ಆತ್ಮೀಯರಾಗಿರುವವರೆಲ್ಲರ ಮೇಲೆ ಈ ಸಂದೇಹ ಏಕೆ ಸುಳಿಯುವುದಿಲ್ಲ. ಕೆಲವರ ಸಂಪರ್ಕದಲ್ಲಿ ಮಾತ್ರ ಇದೇಕೆ ನೆಲೆಗೊಳ್ಳುತ್ತದೆ? ಈ ಬಗೆಯ ಪ್ರಶ್ನೆಗಳು ನನ್ನನ್ನು ಪೀಡಿಸಿವೆ.

ಔತಣಕ್ಕೆ ಕರೆಬಂದರೆ ನಾನು ತಪ್ಪಿಸಿಕೊಳ್ಳುವುದೇ ಹೆಚ್ಚು (ದಲಿತರ ಕರೆಗಳನ್ನು ಹೊರತುಪಡಿಸಿ), ನನ್ನ ಕೆಲವು ಪ್ರಗತಿಪರ ಸ್ನೇಹಿತರ ಬಗ್ಗೆ ನನಗೆ ಯಾವುದೇ ಬಗೆಯ ಸಂದೇಹಗಳಿಲ್ಲ. ನಾನು ನನ್ನ ಜಾತಿಯ ಬಗ್ಗೆ ಡಂಗುರ ಸಾರಿದಂತೆ ಹೇಳಿಕೊಳ್ಳುತ್ತೇನೆ ಎಂದರೂ, ಕೆಲವು ಬಾರಿ ನನ್ನ ಬಾಯಿ ಕಟ್ಟಿಬಿಡುತ್ತದೆ. ಸ್ನೇಹಿತರ ಕರೆ ಮನ್ನಿಸಿ ಅವರ ಮನೆಗೆ ಹೋಗಿದ್ದೇನೆ. ಹಳೆಯ ತಲೆಮಾರಿನ ಅವರ ಹಿರಿಯರು ಮಾತುಮಾತಿನಲ್ಲಿಯೇ ಸುತ್ತುತ್ತ ಜಾತಿಗೆ ಬಂದಾಗ ತಣ್ಣಗಾಗುತ್ತಿದ್ದೆ. ಮಾತು ವಿಷಯಾಂತರ ಮಾಡಬೇಕೆನಿಸಿದರೂ ವ್ಯರ್ಥವಾಗುತ್ತಿತ್ತು. ಇಂತಹ ಸಂದರ್ಭಗಳು ಬಾರದಿರಲೆಂದೇ ಸ್ನೇಹಿತರ ಕರೆ ಬಂದಾಗಲೂ ಏನಾದರೂ ನೆಪಹೇಳಿ ತಪ್ಪಿಸಿಕೊಂಡುಬಿಡುತ್ತೇನೆ. ಆದರೆ ಕೆಲವು ಸ್ನೇಹಿತರು ಇದನ್ನು ಅಪಾರ್ಥ ಮಾಡಿಕೊಂಡವರೂ ಇದ್ದಾರೆ. ಅವರಿಗೆ, ಅವರ ಸ್ನೇಹಕ್ಕೆ ನಾನು ಯಾವ ರೀತಿಯಲ್ಲಿ ಆಭಾರಿಯಾಗಿರಬೇಕು ಎಂದು ತಿಳಿಯದೆ ಸೋತಿದ್ದೇನೆ.

ನೂರು ದಿನಗಳ ಕರೆ ಅದು. ಉಗುಳು ನುಂಗಿದಂತೆ ದಾಟಿ ಹೋಗುತ್ತಿದ್ದೆ. ಒಂದು ದಿನ ಅನಾಯಾಸವಾಗಿ ಬಲೆಗೆ ಬಿದ್ದೆ. ಅವರು ಭೇಟಿಯಾದಾಗಲೆಲ್ಲ ಹೇಳುತಿದ್ದರು. ನೀವು ಪ್ರಗತಿಪರರೊಟ್ಟಿಗೆ ಹೆಗಲಿಗೆ ಹೆಗಲು ಕೊಟ್ಟು ನಡೆಯಬೇಕು. ಪರಸ್ಪರ ವಿಭಿನ್ನ ಕೈಗಳು ಸೇರಿದಾಗಲೇ ತಾಳ, ಸಮಷ್ಟಿಯ ಕ್ರಾಂತಿ. ನೀವು ನಮ್ಮೊಡನೆ ಬೆರೆಯಬೇಕು. ಬರಿ ಬರವಣಿಗೆ ಇದ್ದರೆ ಸಾಲದು ಹುಡುಗ, ಬರವಣಿಗೆಯಂತೆ ಬದುಕೂ ಇರಬೇಕು" ಎಂದೆಲ್ಲಾ ಹೇಳುತ್ತಿದ್ದರು. ಇವರು ಹಿರಿಯರು, ಅನುಭವಿಕರು, ಬರಹಗಾರರು, ದಲಿತ ಚಿಂತಕರು ಎನ್ನುವ ಮುದ್ರೆಗಳು ನನ್ನ ಮೇಲೆ ಮೊದಲೇ ಬಿದ್ದಿರುವುದರಿಂದ "ಹೌದು ಸರ್" ಎಂದು ಹೇಳುತ್ತಿದ್ದೆ.

ಒಮ್ಮೆ ಆಕಸ್ಮಿಕವಾಗಿ ಅವರೂರಲ್ಲಿ ಸಿಕ್ಕುಬಿದ್ದೆ. ನಾಯಿಯ ಕೊರಳಪಟ್ಟಿ ಹಿಡಿದೆಳೆದು ಒಯ್ಯುವಂತೆ ದರದರನೆ ಮನೆಗೆ ಎಳೆದೊಯ್ದರು. ದಾರಿಯುದ್ದಕ್ಕೂ ಹೇಳುತ್ತಿದ್ದರು:

ನನ್ನದು ಇಂಟರ್‌ಕ್ಯಾಸ್ಟ್ ಮ್ಯಾರೇಜಪ್ಪ, ಗೊತ್ತಿದೆಯಾ ನಿನಗೆ?

ಅವಳು ಮನೆಯಲ್ಲಿಲ್ಲ..........ಸ್ವಹಸ್ತ ನಳಪಾಕ ನೋಡಿಯಂತೆ.................

ನಿನ್ನ ತೆಳ್ಳಗಿನ ಶರೀರ ಪರಿಮಳಕ್ಕೆ ಉಬ್ಬಿ ಹೋಗ್ತದೆ..................

ಹೀಗೆಯೇ ಅಡಿಗೆಯ ವಿವರವನ್ನೂ ಕೊಟ್ಟು ಕೊಟ್ಟು ತಾವೇ ಬಡಿಸಿದರು. "ನಮ್ಮ ಮನೆಯಲ್ಲಿ ಡೈನಿಂಗ್ ಟೇಬಲ್ ಇಲ್ಲ. ನೆಲವೇ ಗತಿ" ಎಂದು ಹೊರಮನೆಯ ಚಾಪೆಯ ಮೇಲೆ ಕೂಡಿಸಿ ಊಟಕ್ಕೆ ಬಡಿಸಿದರು. ನನಗೆ ಇಂಗು ಹಾಕಿದ ಅಡಿಗೆ ಉಂಡು ಅಭ್ಯಾಸವಿರಲಿಲ್ಲ, ಉಮ್ಮಳಿಕೆ ಬರುತ್ತಿದ್ದರೂ ತೋರಗೊಡದೆ ಊಟ ಮಾಡುತ್ತಿದ್ದೆ.

"ನಿಮ್ಮ ಮನೆಯಲ್ಲಿಯಂತೆ, ಚಿಕನ್ ಮೂಳೆ

ಸಿಗೋದಿಲ್ಲ ಹುಡುಗ, ನಮ್ಮದು ಆಹಾರದ ವಿಚಾರದಲ್ಲಿ
ಕಟ್ಟುನಿಟ್ಟು, ಆದರೆ ಇನ್ನುಳಿದ ವಿಚಾರದಲ್ಲಿ
ಅಷ್ಟೇ ಸೀದಾ-ಸಾದಾ........ಪ್ರಗತಿ ಪರ......... "

ನನ್ನೊಳಗೆ ತಣ್ಣನೆ ಕೊರೆತ ಪ್ರಾರಂಭವಾಯಿತು. ಇವರು "ನಾನು ನಿಮಗಿಂತ ಭಿನ್ನ ನಮ್ಮ ಸಂಸ್ಕೃತಿಯೇ ಬೇರೆ" ಎಂದು ಹೇಳುತ್ತಿದ್ದಾರೆಯೇ ಎಂದೆನಿಸಿದರೂ, ಅವರ ವ್ಯಕ್ತಿತ್ವದ ಪ್ರಭಾವ ನನ್ನ ಮೇಲೆ ದಟ್ಟವಾಗಿ ಬಿದ್ದಿರುವುದರಿಂದ ಈ ಕೊರೆತ" ಕೊರೆತವೆಂದೆನಿಸಲೇ ಇಲ್ಲ

ಊಟ ಮುಗಿಯುತ್ತಿದ್ದಂತೆ ಹೇಳಿದರು: " ಹೆಂಡತಿ ಇಲ್ಲದ ಮನೆ ಮೊದಲೇ ಹೇಳಿದ್ದೇನೆ. ನಾವು ಊಟ ಮಾಡಿದ ತಟ್ಟೆ ನಾವೇ ತೊಳೆಯಬೇಕು. ಹೀss..........ಹೀss......." ಎಂದು ನಕ್ಕರು. ನಾನೂ ಅದೇ ನಗೆಯನ್ನೇ ನಗುತ್ತ, ನನ್ನ ಮನೆಯಲ್ಲಿ ನಾನೂ ಒಬ್ಬನೇ, ಅಲ್ಲಿ ನಾನು ತೊಳೆಯೋದಿಲ್ಲವೇ? ಎಂದೆನ್ನುತ್ತ ನನ್ನ ಎಂಜಲದ ತಟ್ಟೆಯನ್ನು ಎತ್ತಿಕೊಂಡು ಹೊರಬಂದು ತೊಳೆದೆ. (ಇದೂ ಕಮ್ಯುನಿಸ್ಟರ ತತ್ತ್ವದಲ್ಲಿ ಸಹಜವೇ?) ಅವರೂ ತಮ್ಮ ತಟ್ಟೆಯನ್ನು ತಾವೇ ತೊಳೆದರು. ನಾನು ಊಟ ಮಾಡಿ ಮುಗಿಸಿದ ಹೊರಗಿನ ಕೋಣೆಯಲ್ಲಿಯೇ ಅವರು ತೊಳೆದ ತಮ್ಮ ಪಾತ್ರೆಗಳನ್ನಿಟ್ಟರು. ನಾನೂ ಅವರಿಟ್ಟ ಪಾತ್ರೆಗಳ ಪಕ್ಕದಲ್ಲಿಯೇ ನಾನುಂಡು ತೊಳೆದ ಪಾತ್ರೆಗಳನಿಟ್ಟೆ, ಈವರೆಗೆ ಕಾಣದ ಅವರ ಮಗ ಮನೆಯಲ್ಲಿ ಓಡಾಡತೊಡಗಿದ ( ಅಂದು ರವಿವಾರ). ಕೆಲಸಮಯದ ನಂತರ ಆ ಹುಡುಗ ತನ್ನ ತಂದೆ ತೊಳೆದಿಟ್ಟ ಪಾತ್ರೆಗಳನ್ನು ಒಳಗೆ ತೆಗೆದುಕೊಂಡು ಹೋದ. ನಾನು ತೊಳೆದಿಟ್ಟ, ಪಾತ್ರೆಗಳು ಅಲ್ಲಿಯೇ ಉಳಿದವು. ಆ ಹುಡುಗ ಮತ್ತೆ ಮನೆಯಲ್ಲಿಯೇ ಓಡಾಡತೊಡಗಿದ.

ನಾನು ಕುಳಿತಲ್ಲಿಯೇ ಮಾನಸಿಕವಾಗಿ ಚಕ್ರಪಾಣಿಯಂತೆ ತಿರುಗತೊಡಗಿದೆ. ನಮ್ಮ ಪ್ರಗತಿ ಪರ ವಿಚಾರದ ಚರ್ಚೆ, ದಲಿತ ಸಾಹಿತ್ಯದ ಕುರಿತ ಚರ್ಚೆ ನಡೆದಿತ್ತು. ಅವರು ಮಾತನಾಡುತ್ತಲೇ ಇದ್ದರು. ನನ್ನ ಗಮನವೆಲ್ಲ ಆ ಪಾತ್ರೆಗಳ ಮೇಲೆಯೇ ಇತ್ತು. ಎರಡೂವರೆ ಗಂಟೆಗಳ ಕಾಲ ನಡೆದ ನಮ್ಮ ಚರ್ಚೆ ವ್ಯರ್ಥವೆನಿಸತೊಡಗಿತು. ಬೆಳಕು ನಂದುತ್ತ ಕತ್ತಲಾಗತೊಡಗಿತು. ಪಾತ್ರೆಗಳು ಒಳಗೆ ಹೋಗಲೇ ಇಲ್ಲ. ನಾನು ಹೊರಬಂದೆ. ಹೊಟ್ಟೆಬರಿದಾಗಿತ್ತು. ಮಿದುಳಿನ ಹಸಿವು ಅದಕ್ಕಿಂತಲೂ ಹೆಚ್ಚಾಗಿತ್ತು.

ಬಸ್ಸಿನ ದಾರಿಯುದ್ದಕ್ಕೂ ನನ್ನ ಅಜ್ಜಿ ಹೇಳಿದ ಸಗಣಿ ಮತ್ತು ಆಕಳು ಉಚ್ಚೆಯ ಪ್ರಯೋಗದ ನೆನಪಾಯಿತು:

ಆಕಸ್ಮಿಕವಾಗಿ ದಲಿತನೊಬ್ಬ ಊಟ ಮಾಡುವಾಗ ಮೇಲು ಜಾತಿಯ ಜನರ ಪಾತ್ರೆಗಳನ್ನು ಮುಟ್ಟಿದರೆ, ದನದ ಸಗಣಿಯನ್ನು ಆ ಪಾತ್ರೆಗಳಿಗೆ ಮೆತ್ತಿ ಬೆಂಕಿಯಲ್ಲಿ ಆ

ಪಾತ್ರೆಗಳನ್ನು ಸುಡುವುದು, ಆನಂತರದಲ್ಲಿ ಹುಣಸೆ ರಾಡಿ ಮತ್ತು ಉಪ್ಪಿನ ನೀರಿನಲ್ಲಿ ಅದ್ದಿ ತೆಗೆಯುವುದು. ಈ ರೀತಿ ಸ್ವಚ್ಛ ಮಾಡಿದ ಮೇಲೆ ಆ ಪಾತ್ರೆಯನ್ನು ಆಕಳ ಉಚ್ಚೆಯಲ್ಲಿ ಅದ್ದಿ ಮನೆಯ ಪಾತ್ರೆಗಳೊಂದಿಗೆ ಸೇರಿಸಿಕೊಳ್ಳುತ್ತಿದ್ದರಂತೆ! ಒಬ್ಬ ಅಸ್ಪೃಶ್ಯನ ಸ್ಪರ್ಶಕ್ಕಿಂತ ಆಕಳು ಉಚ್ಚೆಯ ಸ್ಪರ್ಶ ಎಷ್ಟೊಂದು ಹಿತವೆನಿಸುತ್ತದೆಯಲ್ಲವೇ? ಲೋಹದ ಪಾತ್ರೆಗಳಿದ್ದರೆ ಈ ರೀತಿಯಲ್ಲಿ ಪ್ರಯೋಗ. ಮಣ್ಣಿನ ಪಾತ್ರೆಗಳಾದರೆ "ಥೂ" ಕರೆಸಿ ಆ ಪಾತ್ರೆ ಅವರಿಗೆ ಕೊಟ್ಟುಬಿಡುತ್ತಿದ್ದರಂತೆ. ಇಲ್ಲವೇ ಅಂಥವರಿಗಾಗಿಯೇ ಬಳಸುವುದಕ್ಕೆ ನಾಯಿಗಳಿಗಿಟ್ಟಂತೆ ಆ ಮಣ್ಣಿನ ಪಾತ್ರೆ ಬಾಗಿಲ ಹೊರಗಿಡುತ್ತಿದ್ದರಂತೆ, ಹೋಟೆಲ್‌ಗಳಲ್ಲಿ ಕಪ್ಪುಸಾಸರಗಳಿಟ್ಟಂತೆ. ಆಶ್ಚರ್ಯವೆಂದರೆ ಈ ಸಂಪ್ರದಾಯಗಳು ಈಗಲೂ ನಮ್ಮ ನಡುವೆ ಜೀವಂತವಾಗಿವೆ!

ಹೀಗೆ ಎಲ್ಲ ಚಿತ್ರಗಳು ನನ್ನ ಸ್ಮೃತಿ ಪಟಲದ ಮೇಲೆ "ತಾಂಡವ ನೃತ್ಯ" ಮಾಡತೊಡಗಿದವು. ನಾನುಂಡು ತೊಳೆದಿಟ್ಟು ಬಂದ ಪಾತ್ರೆಗಳಿಗೆ ಎಂತಹ ಸ್ಥಿತಿ ಬಂದಿರಬೇಕು ಎಂದು ಕಾಡುತ್ತಿದ್ದಂತೆಯೇ ಬಸ್ಸಿನಿಂದ ಮನೆ ಸೇರಿದೆ. ಈಗ ನೀವೇ ಹೇಳಿ ಇಂಥ ಪ್ರಸಂಗಗಳು ಎದುರಾಗುತ್ತಿರಬೇಕಾದರೆ, ಬಂದ ಔತಣಗಳಿಗೆ ಬಿಚ್ಚು ಮನಸ್ಸಿನಿಂದ ತಕ್ಷಣವೇ ನಾನು ಹೇಗೆ ಒಪ್ಪಿಕೊಳ್ಳಲಿ? ಇಂತಹ ಸಂದರ್ಭಗಳು ಹಲವಾರಿವೆ. ಮಾದರಿಗಾಗಿ ಒಂದನ್ನು ಮುಂದಿಟ್ಟಿದ್ದೇನೆ.

l

l

# ನನ್ನ ಜೀವ ತಿನ್ನುವ ಬಾಳೆಯ ಎಲೆ

ಮಂಗಳೂರಿನ ಈ ಪರಿಸರದಲ್ಲಿ ಬಾಳೆಲೆಗೆ ಎಷ್ಟೊಂದು ಮಹತ್ವವಿದೆ ಎಂದು ಬಲ್ಲವರಿಗೆ ಬಿಡಿಸಿ ಹೇಳಬೇಕಾಗಿಲ್ಲ. ಒಂದು ದಿನ ಇದ್ದಕ್ಕಿದ್ದಂತೆ ನನಗೆ ಬಾಳೆಲೆಯ ಬಗ್ಗೆ ಜ್ಞಾನೋದಯವಾಯಿತು. ಅಂದಿನಿಂದ ಪೀಡಿತವಾಗುತ್ತಿರುವ ನನ್ನ ಮನಸ್ಸು ಇಂದಿನವರೆಗೂ ಬಾಳೆಲೆಯಲ್ಲಿ ಊಟ ಮಾಡಲು ಹೇಸುತ್ತದೆ. ಆ ಕಾರಣಕ್ಕಾಗಿ ಯಾರದಾದರೂ ಮನೆಗೆ ಊಟಕ್ಕೆ ಹೋದಾಗ ಬಾಳೆಲೆ ಬಡಿಸುವ ಮುನ್ನ ನಾನು ತಟ್ಟೆಯನ್ನೇ ಕೇಳುತ್ತೇನೆ. ಯಾಕೆ ಎಂದು ಸಾಕಷ್ಟು ಸ್ನೇಹಿತರು ಪ್ರಶ್ನಿಸಿದರೂ ಹೇಳುವ ವಿಷಯ ಬಾಯಿಯಲ್ಲಿ ಸಾಕಷ್ಟಿದ್ದರೂ ಹೇಳಲಾಗದೆ ಮೌನವಾಗುತ್ತೇನೆ. ಆಗ ಅವರು ಇವನಿಗೆ ಬಾಳೆಲೆಯಲ್ಲಿ ಊಟ ಮಾಡಲು ಬರಲಿಕ್ಕಿಲ್ಲ ಎಂದು ಗ್ರಹಿಸಿಕೊಳ್ಳುತ್ತಿರಬಹುದು. ಕೆಲವರಂತೂ ನೇರವಾಗಿ:

"ಏನು ಇದು ಬ್ರಾಹ್ಮಣೀಕರಣ ಎನ್ನುವ ವಿಚಾರಾನ?" ಎಂದು ಕೇಳಿದವರೂ ಇದ್ದಾರೆ. ಹೌದು, ನನಗೆ ಮೊದಲು ಬಾಳೆಲೆಯಲ್ಲಿ ಊಟ ಮಾಡಲು ಬರುತ್ತಿರಲಿಲ್ಲ. ಊಟ ಮಾಡುವುದು ಬಿಡಿ, ಕೊಟ್ಟ ಬಾಳೆಲೆ ಸರಿಯಾಗಿ ತೊಳೆದುಕೊಳ್ಳಲೂ ಬರುತ್ತಿರಲಿಲ್ಲ. ನಮಗೆ ಅದರ ಅಭ್ಯಾಸವೇ ಇಲ್ಲ. ಮೊದಮೊದಲು, ಮನೆಯಲ್ಲಿ ತಟ್ಟೆ ಇಲ್ಲದಿದ್ದವರು ಬಾಳೆಲೆಯಲ್ಲಿ ಊಟ ಮಾಡುತ್ತಾರೆ. ಎಂಬ ತಿಳುವಳಿಕೆ ನನ್ನದಾಗಿತ್ತು.

ಅದೇ ಮಂಗಳೂರಿಗೆ ಬಂದಾಗ ಬಾಳೆಲೆಯಲ್ಲಿ ಊಟ ಮಾಡುವುದೆಂದರೆ ಸಾಕಷ್ಟು ಖುಷಿ ಎನಿಸುತ್ತಿತ್ತು. ತೆಗೆದುಕೊಂಡ ಬಾಳೆಲೆ ತೊಳೆಯಲು ಹೋದರೆ ಅದು ಸೀಳಿ ನಾಲ್ಕು ಭಾಗವಾಗುತ್ತಿತ್ತು. ನಾನು ಎಷ್ಟೇ ನಿಧಾನವಾಗಿ ತೊಳೆಯಲೆತ್ನಿಸಿದರೂ ಈ ಅನಾಹುತ ನಡೆದು ಹೋಗುತ್ತಿತ್ತು. ಎಲೆ ಕೊಟ್ಟವರು ಮುಖ ನೋಡಿ ದಿಟ್ಟಿಸುತ್ತಿದ್ದರು. ಇದು ಮೊದಲೇ ಹರಿದ ಎಲೆ ಎಂದು ಮುಖದಲ್ಲಿ ಧಾರ್ಷ್ಟ್ಯತನ ತೋರುತ್ತಿದೆ. ಬರಬರುತ್ತ ಅದು ಕರಗತವಾಯಿತು. ಅನಂತರ ಬಾಳೆಲೆಯ ನಾಲ್ಕು ಮೂಲೆಯನ್ನು ಮಡಿಸಿ ತಟ್ಟೆಯಂತೆ ಮಾಡುವ ತಂತ್ರವೂ ಇನ್ನೊಂದು. ಅದನ್ನು ಮಾಡಲು ಹೋಗಿ ನಗೆಗೀಡಾಗಿ ಪ್ರಯತ್ನಿಸಿ ಸೋತದ್ದೇ ಹೆಚ್ಚು. ಅನಂತರ ಬಾಳೆಲೆಯಲ್ಲಿ ಊಟ ಮಾಡುವುದೇ ಹೆಚ್ಚು ಹಿತವೂ ಎನಿಸಿತು, ಜೊತೆಗೆ ಇದು ಆಲಸಿಗಳ ತಂತ್ರವಾಗಿರಬೇಕು ಎಂದು ಎನಿಸದೆ ಇರಲಿಲ್ಲ. ಏಕೆಂದರೆ, ಬಾಳೆಲೆ ಹಾಸುಂಡು ಬೀಸಿ ಒಗೆಯುವುದು. ಅದನ್ನು ತಟ್ಟೆಯಂತೆ ತಿಕ್ಕುವುದಿಲ್ಲ,

ತೊಳೆಯುವುದಿಲ್ಲ. ಅತಿ ಸುಲಭದ ಕೆಲಸ. ಒಂದು ವೇಳೆ ತಟ್ಟೆಯಲ್ಲಿ ಊಟಕ್ಕೆ ಕುಳಿತರೆ, ನಾಲ್ಕು ಚಿಕ್ಕ ಬಟ್ಟಲು ಒಂದು ದೊಡ್ಡ ತಟ್ಟೆ ಬೇಕು. ಅಷ್ಟೆಲ್ಲಾ ತೊಳೆಯುವುದು, ಕೊಂಡು ತರುವುದು ಯಾರಿಗೆ ಬೇಕು? ಎಂದಿರಬೇಕು ಎನ್ನುವ ಸಂದೇಹ. ಈ ಸಂದೇಹ ಬಂದದ್ದು ನಾನು ಮಂಗಳೂರಿನಲ್ಲಿ ಬಾಳೆಲೆ ಬಿಟ್ಟು ಪುನಃ ತಟ್ಟೆಯ ಊಟಕ್ಕೆ ಕೈಹಾಕಿದಾಗಲೇ.

ಕುವೆಂಪು ಅವರ ಮಲೆಗಳಲ್ಲಿ ಮದುಮಗಳು ಕಾದಂಬರಿಯನ್ನು ಪಾಠ ಮಾಡುತ್ತಿದ್ದೆ. ಅದರಲ್ಲಿ ಬಾಳೆಲೆಯಲ್ಲಿಯ ಊಟದ ಪ್ರಸಂಗವಿದೆ. ಕ್ರೈಸ್ತ ಪಾದ್ರಿ ಮನೆಗೆ ಊಟಕ್ಕೆ ಬಂದಿರುತ್ತಾರೆ. ಅವನು ಹೊಲೆಯರಿಗಿಂತ ಕೀಳು ಎಂದು ಅವನಿಗೆ ಜಗಲಿಯ ಮೇಲೆ ಊಟಕ್ಕೆ ಕೂಡ್ರಿಸುವುದೇ? ಯಾವ ಎಲೆಯಲ್ಲಿ ಊಟಕ್ಕೆ ಕೊಡಬೇಕು? ಯಾರು ಊಟಕ್ಕೆ ನೀಡಬೇಕು? ಈ ವಿಷಯಗಳ ಕುರಿತು ಆ ಮನೆಯ ಪಾತ್ರಗಳಲ್ಲಿಯೇ ಚರ್ಚೆ ನಡೆಯುತ್ತದೆ. ನನಗೆ ವಿಸ್ಮಯ ತಂದದ್ದು ಬಾಳೆಲೆಯಲ್ಲಿಯೂ ಮನುಷ್ಯ ಜೀವಿ ಹೇಗೆ ಹಾಯಗಾರಿಕೆಯನ್ನು ಕಾಯ್ದುಕೊಂಡು ಹೋಗುತ್ತಾನೆ ಎನ್ನುವುದು. ಆ ವಿಷಯ ತಂದು ತರಗತಿಯಲ್ಲಿ ಚರ್ಚೆಗೆ ಬಿಟ್ಟೆ. ಅಲ್ಲಿ ಇನ್ನಷ್ಟು ಹೊಸ ಬಗೆಯ ಪ್ರಾದೇಶಿಕವಾದ ವಿಷಯಗಳು ಬೆಳಕಿಗೆ ಬಂದುವು. ಅಡಿಕೆಯ ಹಾಳೆಯಲ್ಲಿಯ ಊಟದ ಬಗೆಯ ಕುರಿತು, ಅಡಿಕೆಯ ಕುರಿತು, ಸಿರಿಯ ಕುರಿತು ಮುಂತಾಗಿ. ಒಂದು ಎಲೆಯಲ್ಲಿಯೇ ಹಲವು ಭಾಗ ಮಾಡಿ ತುದಿಯ ಭಾಗ ಎಲ್ಲರಿಗಿಂತ ಶ್ರೇಷ್ಠ, ಅದು ದೇವರಿಗೆ ಅಥವಾ ಬ್ರಾಹ್ಮಣರಿಗೆ ಸೇರುತ್ತದೆ ಎನ್ನುವುದು. ಎಲ್ಲಕ್ಕಿಂತ ಕೊನೆಯ ಭಾಗ ಹೊಲೆಯರಿಗೆ ಮೀಸಲು ಎನ್ನುವುದು. ಇದು ತಕ್ಷಣ ನನ್ನನ್ನು ಪುರಾಣದ ಕಲ್ಪನೆಗೆ ಕರೆತಂದಿತು. ವಿಷ್ಣುವಿನ ತಲೆಯಲ್ಲಿ ಬ್ರಾಹ್ಮಣರು ಹುಟ್ಟಿದರು. ಅದೇ ರೀತಿ ತೋಳಲ್ಲಿ ಕ್ಷತ್ರಿಯರು, ಹೊಟ್ಟೆಯಲ್ಲಿ ವೈಶ್ಯರು, ಪಾದದಲ್ಲಿ ಶೂದ್ರರು ಎಂಬಂತೆ ಎಲೆಯಲ್ಲಿಯೂ ಒಡೆದು ಹಂಚಿರುವುದು ನೋಡಿದರೆ ಪುರಾಣ ಕಲ್ಪನೆ ಪ್ರತಿಯೊಂದರಲ್ಲಿಯೂ ಹೇಗೆ ಸೂಕ್ಷ್ಮವಾಗಿ ಕೆಲಸ ಮಾಡಿದೆ ಎನಿಸುತ್ತದೆ.

ಬಾಳೆಲೆಯ ಕುರಿತು ತರಗತಿಯಲ್ಲಿ ಚರ್ಚೆಯಾದ ನಂತರ, ಬಿದ್ದು ಮತ್ತೊಂದು ಹೊಸ ಗಾಯ ಮಾಡಿಕೊಂಡ ಅನುಭವವಾಯಿತು. ಅನಂತರ ಮೂರು ವರ್ಷಗಳವರೆಗೆ ನಾನು ಮಂಗಳೂರು ನಗರದಲ್ಲಿ ಇದ್ದು ಕಳೆದ ದಿನಗಳನ್ನು, ಬಾಳೆಲೆಯ ಪ್ರಸಂಗಗಳನ್ನು ಮೆಲುಕು ಹಾಕತೊಡಗಿದೆ. ಯಾರ್‍ಯರ ಮನೆಗೆ ನಾನು ಊಟಕ್ಕೆ ಹೋಗಿದ್ದೆ? ಯಾರ ಮನೆಯಲ್ಲಿ ನನಗೆ ಬಾಳೆಲೆಯ ಕೊನೆಯ ಭಾಗವನ್ನು ಊಟಕ್ಕೆ ಕೊಟ್ಟಿದ್ದರು? ಅವರೂ ಅಂತಹದರಲ್ಲಿಯೇ ಊಟ ಮಾಡುತ್ತಿದ್ದರೆ ಅಥವಾ ನನಗಷ್ಟೇ ಆ ಎಲೆಯಲ್ಲಿ ಊಟಕ್ಕೆ ಹಾಕಿಕೊಟ್ಟಿದ್ದರೋ ಹೀಗೆಲ್ಲ ಪ್ರಶ್ನೆಗಳು ತಲೆಯಲ್ಲಿ ನಾಟ್ಯ ವಾಡತೊಡಗಿದವು. ಆತ್ಮೀಯರನ್ನು ಸಂದೇಹದಲ್ಲಿ ನೋಡುವಂತೆ ಮಾಡಿದವು. ಅವರು ಇನ್ನೊಮ್ಮೆ ಊಟಕ್ಕೆ ಕರೆದರೆ ಪರೀಕ್ಷಿಸೋಣ ಎಂದು ಮನಸ್ಸಿಗೆ ಸಮಾಧಾನ ಹೇಳಿದರೂ ಎದೆಯ ತುಡಿತ ಮಾತ್ರ ಕಡಿಮೆಯಾಗಲಿಲ್ಲ.

ಹಿಂದಿನದನ್ನು ನೆನಪಿಸಿ,

"ಹೌದು ಆ ಮನೆಯಲ್ಲಿ ನಾನು ಆಕಸ್ಮಿಕ ಎಲೆ ಸರಿ ಇಲ್ಲಾ ತಟ್ಟೆ ಕೊಡಿ"

ಎಂದರೂ ಕೊಡದೇ, ಬೇರೆ ಎಲೆ ಕೊಟ್ಟರು ತಟ್ಟೆ ಏಕೆ ಕೊಡಲಿಲ್ಲ?

ಬಹುಶಃ ಅದು ಈ ಕಾರಣಕ್ಕಾಗಿಯೇ ಇರಬೇಕು ಎಂದು ನನ್ನ ಮನಸ್ಸಿನಲ್ಲಿ ಎಷ್ಟೋ ದಿನಗಳವರೆಗೆ ಈ ಯುದ್ಧ ನಿಲ್ಲಲಿಲ್ಲ. ಈಗಲೂ ನಿಂತಿಲ್ಲ. ಇದು ಭೂತದ ದಿನಗಳನ್ನು ನೆನೆದು ನಡೆದದ್ದಾದರೆ, ವರ್ತಮಾನದಲ್ಲಿಯ ಊಟದ ಗಳಿಗೆಗಳನ್ನು ಕಳೆದದ್ದು ಮತ್ತು ಕಳೆಯುತ್ತಿರುವುದು ಇನ್ನೊಂದು ಬಗೆಯದ್ದಾಗಿದೆ.

ತರಗತಿಯಿಂದ ಹೊರಬಂದ ಕೆಲವೇ ಗಂಟೆಗಳ ನಂತರ ಮನಸ್ಸು, ಪೂರ್ವಾಗ್ರಹ ಪೀಡಿತವಾಗಿ ಬಳಲಲು ಪ್ರಾರಂಭವಾಯಿತು. ತಿನ್ನುವುದು ಹೋಟೆಲ್ ಕೂಳು, ಎಲ್ಲರಿಗೂ ಬಡಿಸಿದಂತೆ ಆ ಹೋಟೆಲ್ ಮಾಣಿ ನನಗೂ ಸಾಮಾನ್ಯವಾಗಿ ಬಾಳೆಲೆಯ ಕೊನೆಯ ಭಾಗ ಕೊಟ್ಟರೂ ನನಗೆ ಸಂದೇಹವೇ.

ಇವನಿಗೆ ನನ್ನ ಜಾತಿ ಗೊತ್ತಾಗಿರಬಹುದೇ?

ಮತ್ತೇನು ಯಾವಾಗಲೂ ಇಂತಹ ಎಲೆಯನ್ನೇ ನನ್ನ ಪಾಲಿಗೆ ತಂದಿಡುತ್ತಾನಲ್ಲಾ?

ಒಂದು ದಿನವಾದರೂ ಆ ತುದಿ ಎಲೆ ತಾನಾಗಿಯೇ ನನ್ನ ಸರತಿಗೆ ಬರುವುದಿಲ್ಲವಲ್ಲಾ ಯಾಕೆ? ಆ ಎಲೆಗೂ ನನ್ನ ಜಾತಿ ಗೊತ್ತಾಗಿರಬಹುದೇ?

ಈ ಪ್ರಶ್ನೆಗಳಿಗೆ ಉತ್ತರಿಸಲು ನನ್ನಿಂದಲೂ ಆಗದು ಯಾರಿಂದಲೂ ಆಗದು. ಅವರು ಎಷ್ಟೇ ಪ್ರಾಮಾಣಿಕತೆಯಿಂದ ಉತ್ತರಿಸಿದರೂ ಈ ಪೂರ್ವಾಗ್ರಹ ಪೀಡಿತವಾದ ಮನಸ್ಸು ಒಪ್ಪಬೇಕಲ್ಲಾ? ಅದಾಗುವುದಿಲ್ಲಾ. ಬಹುಶಃ ಇಂತಹ ಅಸ್ಪೃಶ್ಯತನದ ಸೋಂಕಿಲ್ಲದ ಸೋಂಕಿನ ಕೊರೆತಗಳು ನನ್ನ ಉಸಿರಿರುವವರೆಗೂ ಬೆನ್ನ ಬೇತಾಳವಾಗಿ ಕಾಡುತ್ತವೆಯೇ? ಇದರಿಂದ ಬಿಡುಗಡೆ ಎಂಬುದು ಸಾಧ್ಯವೇ ಇಲ್ಲಾ ಎನಿಸುತ್ತದೆ.

ಕೆಲದಿನಗಳ ನಂತರ ನನಗೆ ಈ ಬಾಳೆ ಎಲೆಯ ಸಂಕಟದಿಂದ ಪಾರಾಗಬಹುದು ಎನಿಸಿ ಒಂದು ನಿರ್ಧಾರಕ್ಕೆ ಬಂದೆ. ಅಂದಿನಿಂದ

"ನಾನು ಎಲ್ಲಿಯೇ ಊಟ ಮಾಡಲಿ ತಟ್ಟೆಯಲ್ಲಿಯೇ ಊಟ ಮಾಡುವುದು"

ಎಂದು ನನ್ನ ಮನಸ್ಸಿನಲ್ಲಿ ನಾನೇ ಸಾಕ್ಷಿ ಎನ್ನುವಂತೆ ಪ್ರತಿಜ್ಞೆಮಾಡಿಕೊಂಡೆ. ಆ ಪ್ರತಿಜ್ಞೆ ಎಷ್ಟು, ಎಲ್ಲಿ ಪೂರೈಸಿದ್ದೇನೆ ಎನ್ನುವುದೂ ನನಗೇ ಗೊತ್ತು. ಆದರೆ ನಾನು ತಟ್ಟೆಯಲ್ಲಿಯೇ ಊಟ ಮಾಡುವ ಒಗಟು, ಕುತೂಹಲದ ನನ್ನ ಸ್ನೇಹಿತರಿಗೆ, ಇದು ಆ ಒಗಟನ್ನು ಬಿಡಿಸಬಹುದು ಎಂದುಕೊಂಡಿದ್ದೇನೆ.

ಆದರೆ ಬಾಳೆಲೆಯಲ್ಲಿ ಊಟ ಮಾಡಿದರೆ ಬ್ರಾಹ್ಮಣೀಕರಣಗೊಂಡಂತೆ ಎಂದು ನಾನು ಸರ್ವಥಾ ಬಿಟ್ಟದ್ದಲ್ಲ. ಬಾಳೆ ಎಲೆಯಲ್ಲಿ, ಪತ್ರೊಳಿ ಎಲೆಯಲ್ಲಿ ತಿನ್ನುವುದನ್ನು

ಕೊನೆಯವರೆಗೂ ಮುಂದುವರೆಸಿಕೊಂಡು ಬಂದವರು ಕೆಳ ವರ್ಗದವರೆ ಎನ್ನುವ ಜನಪದ ಕಥೆಗಳಿವೆ. ಮಧ್ಯದಲ್ಲಿ ಈ ಅವಾಂತರ.

ಮನೆಯ ಆಳಿಗೆ ಊಟಕ್ಕೆ ನೀಡುವ ಎಲೆಗಳಲ್ಲಿ ಎಷ್ಟು ವಿಧಗಳಿವೆ ಗೊತ್ತೆ? ಸಂಗ್ರಹಿಸಿ ನೋಡಿ.

l

l

# ನಾನೊಬ್ಬ ಉತ್ತಮ ಕ್ಷೌರಿಕನಾದೆ

ಈಗ ನಾನು ಬರೆಯ ಹೊರಟಿರುವ ಬರವಣಿಗೆ, ನಿಮ್ಮ ಮನರಂಜನೆಗೆ ಒಂದು ಉತ್ತಮ ವಸ್ತುವಾಗುತ್ತದೆ ಎನ್ನುವುದು ನನಗೆ ಚೆನ್ನಾಗಿ ಗೊತ್ತು. ಆದರೆ ನಾನಿದನ್ನು ಮನರಂಜನೆಗಾಗಿ ಬರೆಯುತ್ತಿಲ್ಲ. ಒಬ್ಬ ಓದುಗನಿಗೆ ಚಿಂತನೆಯ ಮಾರ್ಗಕ್ಕೆ ತಂದು ನಿಲ್ಲಿಸಲು ಹಲವಾರು ಬಗೆಯ ತಂತ್ರಗಳಿವೆ. ಕೆಲವರು ನಕ್ಕು ಅಳಿಸುತ್ತಾರೆ. ಇನ್ನೂ ಕೆಲವರು ಅತ್ತು ಅಳಿಸುತ್ತಾರೆ. ಇನ್ನೂ ಕೆಲವರು ತಾವೂ ನಗದೆ ಅಳದೆ ಅಳಿಸುತ್ತಾರೆ. ಇಂತಹ ಕ್ರಮಗಳಲ್ಲಿ ಮೊದಲನೆಯದನ್ನು ಇಲ್ಲಿ ಅನುಸರಿಸುತ್ತಿದ್ದೇನೆ. ಮನರಂಜನೆಯ ಸೀಮಾರೇಖೆಯನ್ನು ನೀವು ಮೀರಿ ಹೊರಬಂದದ್ದೇ ಆದರೆ ನೀವು ಮತ್ತೊಂದು ಲೋಕವನ್ನು ಕಾಣುತ್ತೀರಿ.

ತಲೆಗೆ ಶ್ಯಾಂಪೂ ಹಚ್ಚಿದ್ದಾ?
"ಇಲ್ಲ"
ರೀಟಾ ಹೇರಾಯಿಲ್ ಹಚ್ಚಿದ್ದಾ?
"ಇಲ್ಲ"
ಯಾಕೆ ಸುಳ್ಳು ಹೇಳೋದು?.........ತಲೆಗೆ ಶ್ಯಾಂಪೂ ಹಚ್ಚಿದೆ.
"ಇಲ್ಲಂತ ಹೇಳ್ತೀನಲ್ಲ"
ಮತ್ತೇನು ಹಚ್ಚಿದ್ದು?
ಗ್ರಾಮೋದ್ಯೋಗ ಸಾಬೂನು!

ಎಂದು ಹೇಳಿದಾಕ್ಷಣ ಅವನ ಮುಖ ಇಂಗುತಿಂದ ಮಂಗನಂತಾಯಿತು. ಮತ್ತೆ ಆತ ಮರು ಮಾತನಾಡದೆ ನನಗೆ ಹಿಪ್ಪಿಕಟಿಂಗ್ ಮಾಡಿ ಮುಗಿಸಿದ. ಮತ್ತೆ ನಾಯಿಂದ ಆ ವ್ಯಕ್ತಿ ನನಗೆ ಮಾತನಾಡಿಸಿದ್ದು ಹಣ ಎಣಿಸುವಾಗಲೇ!

ನಾನು ಕಾಲೇಜಿನಲ್ಲಿ ಓದುವ ದಿನಗಳು ಅವು. ನಾಯಿಂದ ಮಲ್ಲಪ್ಪ ಯಾವುದೋ ನಗರಕ್ಕೆ ಹೋಗಿ, ಆಧುನಿಕವಾಗಿ ಕೂದಲು ಕತ್ತರಿಸುವು ವಿದ್ಯೆಯನ್ನು ಕಲಿತು ಬಂದಿದ್ದ. ನಮ್ಮ ಊರಿನಲ್ಲಿ, ನನ್ನ ಕೇರಿಯ ಕೆಲವು ಜನ ಸೇರಿದಂತೆ, ಅವನ ಮೂಗಿಗೆ "ನಾಯಿ ಮೂಗು" ಎಂದು ಕರೆಯುತ್ತಿದ್ದರು. ಇದರರ್ಥ ಅವನ ಮೂಗು ನಾಯಿಯ ಮೂಗಿನ ಹಾಗಿರಬೇಕು ಎಂದು ಊಹಿಸಬೇಡಿ. ನೀವು ಯಾವ "ಸೋಪ್" ಹಚ್ಚಿ ಸ್ನಾನ ಮಾಡುತ್ತೀರಿ?

ಯಾವ "ಶ್ಯಾಂಪೂ" ಹಚ್ಚಿ ತಲೆ ತೊಳೆಯುತ್ತೀರಿ? ತಲೆಗೆ ಹಚ್ಚಲು ಯಾವ ಎಣ್ಣೆಯನ್ನು ಬಳಸುತ್ತೀರಿ? ಎನ್ನುವ ಎಲ್ಲ ಪ್ರಶ್ನೆಗಳಿಗೂ ವಾಸನೆಯ ಮೇಲಿಂದಲೇ ದಡದಡನೇ ಹೇಳಿಬಿಡುತ್ತಿದ್ದ. ಆ ದಿನ ನಾನು ಅವನಿಗೆ ಪರೀಕ್ಷೆ ಮಾಡಲು ಪ್ರಶ್ನಿಸದಿದ್ದರೂ, ಆತನೇ ತನ್ನ ಚಾಣಾಕ್ಷತನವನ್ನು ತೋರಿಸಲು ಹೋಗಿ, ತನ್ನ ಕಾಲ ಮೇಲೆ ತಾನೇ ಕಲ್ಲು ಹಾಕಿಕೊಂಡಿದ್ದ. "ಗ್ರಾಮೋದ್ಯೋಗ ಸಾಬೂನು" ಎಂದರೆ ನಮ್ಮ ಗ್ರಾಮದಲ್ಲಿಯೇ ಬೇವಿನ ಎಣ್ಣೆಯಿಂದ ತಯಾರಿಸಿದ ಅತ್ಯಂತ ಕಡಿಮೆ ಬೆಲೆಗೆ ಸಿಗುವ ಸಾಬೂನು ಅದು. ಅದನ್ನು ಊರ ಜನ ಬಟ್ಟೆ ತೊಳೆಯಲು ಮಾತ್ರ ಬಳಸುತ್ತಿದ್ದರೆ ವಿನಃ ಸ್ನಾನಕ್ಕಾಗಿ ಅಲ್ಲ.

ಮೊದಲು ನಮ್ಮೂರ ನಾಯಿಂದರು ನಮ್ಮನ್ನು ಮುಟ್ಟುತ್ತಿರಲಿಲ್ಲ. ಹೀಗಿದ್ದಾಗ ಅವರು ನಮಗೆ ತಲೆ ಬೋಳಿಸುವುದಂತೂ ದೂರದ ಮಾತಾಗಿತ್ತು. ಈ ದೂರದ ಮಾತೇ ನಮ್ಮ ಮನೆತನದವರಿಗೆ ಆ ಕ್ಷೌರಿಕ ವಿದ್ಯೆಯನ್ನು ಕರಗತ ಮಾಡಿಕೊಳ್ಳುವಂತೆ ಮಾಡಿತ್ತು.

ನಾನು ಆವಾಗ ಮೂರು ನಾಲ್ಕನೆಯ ತರಗತಿಯಲ್ಲಿ ಓದುತ್ತಿದ್ದಿರಬೇಕು. ನಮ್ಮ ಮನೆಯಲ್ಲಿ ಒಂದು ಪುಟ್ಟ ಚರ್ಮದ ಚೀಲವಿತ್ತು. ಅದರಲ್ಲಿ ಎರಡು ಮೂರು ತಲೆ ಬೋಳಿಸುವ ಕತ್ತಿಗಳಿದ್ದವು. ಕೆಲವು ಹಿಡಿಮುರಿದ ಕತ್ತಿಗಳೂ ಇದ್ದವು. ಆ ಚರ್ಮದ ಚೀಲ ಯಾವಾಗಲೂ ನಮ್ಮ ಮನೆಯ ತಲಬಾಗಿಲದ ಒಂದು ಮೂಲೆಯಲ್ಲಿ ಜೋತು ಬಿದ್ದಿರುತ್ತಿತ್ತು. ನಮ್ಮ ಚಿಕ್ಕಪ್ಪ ಇಲ್ಲವೆ ಮಾವ, ನಮ್ಮ ತಲೆ ಬೋಳಿಸುವ ಕೆಲಸವನ್ನು ಮಾಡುತ್ತಿದ್ದರು. ಅವರೇನು ಈ ಕೆಲಸದಲ್ಲಿ ಅಷ್ಟು ನಿಪುಣತೆಯನ್ನು ಸಂಪಾದಿಸಿದವರಲ್ಲ. ನಮ್ಮ ಮನೆಯವರಿಗೆ ಮಾತ್ರ ಇವರು ತಲೆ ಬೋಳಿಸುವ ಕೆಲಸ ಮಾಡುತ್ತಿದ್ದರಿಂದ, ಸಾಮಾನ್ಯವಾಗಿ ತಿಂಗಳಿಗೊಮ್ಮೆ ತಲೆ ಬೋಳಿಸುವ ಅವಕಾಶ ಅವರಿಗೆ ಸಿಗುತ್ತಿತ್ತು. ಹೀಗಾಗಿ ಪರಿಣತಿಯನ್ನು ಸಾಧಿಸುವುದು ಕಷ್ಟದ ಕೆಲಸವೇ ಸರಿ. ಈ ಸ್ಥಿತಿ ನಮ್ಮ ಮನೆತನಕ್ಕೆ ಸಂಬಂಧಿಸಿದ್ದು ಎಂದಲ್ಲ. ನಮ್ಮ ಕೇರಿಯ ಪ್ರತಿಯೊಬ್ಬರ ಮನೆಯಲ್ಲೂ ಒಂದೊಂದು ಕತ್ತಿಯ ಚೀಲ ಇದ್ದೇ ಇರುತ್ತಿತ್ತು. ತಮ್ಮ ಕೆಲಸವನ್ನು ತಾವೇ ಮಾಡಿಕೊಳ್ಳುತ್ತಿದ್ದರು ಎನ್ನಿ.

ನಮ್ಮ ಮಾವ ಅಥವಾ ಚಿಕ್ಕಪ್ಪನ ಕೈಯಲ್ಲಿ, ತಲೆಯನ್ನು ಬೋಳಿಸಲು ನಮ್ಮ ತಲೆಯನ್ನು ಕೊಡುವುದು ಎಂದರೆ, ನೆಲಕ್ಕೆ ಬಿದ್ದು ನೆಗ್ಗಿ ಹೋದ ಕಂಚಿನ ಕೊಡವನ್ನು ರಿಪೇರಿ ಮಾಡಲು ಕೊಟ್ಟಂತೆ! ಆ ಮೊಂಡಾದ ಕತ್ತಿಯನ್ನು ಕಲ್ಲಿಗೆ ತಿಕ್ಕಿ ತಿಕ್ಕಿ ಮಸೆದು ತಲೆ ಬೋಳಿಸುವಾಗ, ತಲೆ ಒಂದೇ ಸಮನೇ ಉರಿಯುತ್ತಿತ್ತು. ಹೊಸತಾಗಿ "ಸಾಣೆ" ಹಿಡಿಸಿದ ಕತ್ತಿ ಇದ್ದರೆ "ಸಾಕಪ್ಪಾ ಸಾಕು!" ತಲೆ ತುಂಬ ಎಲ್ಲೆಂದರಲ್ಲಿ ಕತ್ತಿ "ಹತ್ತಿ" ರಕ್ತವೇ ರಕ್ತ! ನಮ್ಮ ತಲೆಯ ರಕ್ತ ಉಣ್ಣುವವರೆಗೂ ಆ ಕತ್ತಿಗೂ ತೃಪ್ತಿಯಾಗುತ್ತಿರಲಿಲ್ಲವೆಂದು ತೋರುತ್ತದೆ. ಕತ್ತಿ ತಲೆಗೆ ಹತ್ತಿದಾಗ ಅಥವಾ ತಲೆ ಉರಿಯುತ್ತಿದ್ದಾಗ ನಮ್ಮ ಅಳುವು

ಇನ್ನಷ್ಟು ಹೆಚ್ಚಾಗುತ್ತಿತ್ತು. ದುಃಖಿಸುವುದು ಪ್ರಾರಂಭವಾದಾಗ ಕತ್ತಿ "ಕರ್ಕ"ನೇ ತಲೆಯನ್ನು ಕೊರೆದು ಬಿಡುತ್ತಿತ್ತು. ಅಳುವು ಇನ್ನಷ್ಟು ಹೆಚ್ಚಾದಾಗ "ಸುಮ್ಮನಾಗಲೆ" ಎನ್ನುತ್ತ ತಲೆಯನ್ನು ಬೋಳಿಸಿದ ಭಾಗಕ್ಕೆ "ಟಣ್ಣ"ನೇ ಹೊಡೆತ ಬೀಳುತ್ತಿತ್ತು. ಮತ್ತೆ ದುಃಖ ಶಿಖರಕ್ಕೆ ಏರುತ್ತಿತ್ತು. ಸಿಂಬಳ ಸೋರುತ್ತಿತ್ತು. ತಲೆ ಬೋಳಿಸುವುದು ಮುಗಿಯುವುದರೊಳಗೇ ಸತ್ತು ಹುಟ್ಟಿದಂತಾಗುತ್ತಿತ್ತು. ತಲೆ ಬೋಳಿಸಿಕೊಳ್ಳುವುದು ಎಂದರೆ ಅಗ್ನಿ ಪರೀಕ್ಷೆಯೇ ಸರಿ! ಸಮರದಲ್ಲಿ ಸೋತು ಗಾಯಗೊಂಡು ಬಂದ ಕೈದಿಯ ಸ್ಥಿತಿಯೇ ನಮ್ಮದಾಗಿರುತ್ತಿತ್ತು. ಮಣ್ಣಿನೊಂದಿಗೆ ಆಡುವುದೆಂದರೆ ಚೆಲ್ಲಾಟ, ಅಲ್ಲಿಯ ಚೆಲ್ಲಾಟವೇ ಇಲ್ಲಿ ಪ್ರಾಣ ಸಂಕಟ ತರುತ್ತಿತ್ತು. ಕತ್ತಿ ಎಷ್ಟೇ ಹರಿತವಾಗಿದ್ದರೂ, ತಲೆಯಲ್ಲಿ ಬಿದ್ದ ಮಣ್ಣಿಗೆ ಸಿಕ್ಕು ಮೊಂಡಾಗುತ್ತಿತ್ತು.

ಒಂದು ದಿನ ಮುಂಚಿತವಾಗಿಯೇ "ನಾಳೆ ನಿಮ್ಮೆಲ್ಲರ್ದು ತಲೆ ಬೋಳ್ಸತೀನಿ" ಎನ್ನುವ ಸೂಚನೆಯ ಮಾತು ಕೇಳಿದಾಕ್ಷಣವೇ ನಮ್ಮ ಜಂಘಾ ಬಲವೇ ಅಡಗಿ ಹೋಗುತ್ತಿತ್ತು. "ಒಂದು" "ಎರಡಕ್ಕೆ" ಹೋದಂತೆ ಅನುಭವವಾಗುತ್ತಿತ್ತು. ಮುನ್ನವೇ ಸಿಗುವ ಸೂಚನೆಯ ಈ ಸಂದರ್ಭವೇ ತುಂಬ ಭಯಾನಕ ಎನಿಸಿ ಬಿಡುತ್ತಿತ್ತು. ಎಂದಾದರೊಮ್ಮೆ ನಮ್ಮ ಹಿರಿಯರು ಒಂದೆರಡು ಕಡೆಗಳಲ್ಲಿ ತಲೆ ಕಚ್ಚಾಗುವಂತೆ ಬೋಳಿಸಿದರೆ ಅವರಿಗೆ ಹೆಮ್ಮೆಯೋ ಹೆಮ್ಮೆ!

ನನ್ನ ಅಣ್ಣಂದಿರಿಬ್ಬರೂ ಕಾಲೇಜಿಗೆ ಹೋಗುವ ದಿನಗಳು. ನಮ್ಮ ತಂದೆ (ಚಿಕ್ಕಪ್ಪ) ಕೂದಲು ಕತ್ತರಿಸುವ ಒಂದು "ಜೀರೋ ಮಶೀನ್" ತಂದರು ಆ ಮಶೀನ್ ಮೂಲಕ ಕೂದಲು ಕತ್ತರಿಸಲು ನಮ್ಮ ಇಬ್ಬರೂ ಸಹೋದರರಲ್ಲಿಯೇ ಸ್ಪರ್ಧೆ. ಅವರಿಬ್ಬರ ಜಗಳವನ್ನು ನೋಡಲು ನಮಗೆ ಮೋಜು ಎನಿಸುತ್ತಿತ್ತು. ತಂದೆಯವರು ಅದನ್ನು ತುಂಬ ಜಾಗರೂಕತೆಯಿಂದ ಬಳಸಬೇಕು ಎಂದು ಎಚ್ಚರ ನೀಡಿದ್ದರು. ಆದರೆ ಇವರಿಬ್ಬರ ಜಗಳದಲ್ಲಿ ಆ ಮಶೀನ್ ಒಬ್ಬನ ಕೈಯಿಂದ ಕಿತ್ತುಕೊಳ್ಳುವಾಗ ಅದು ಗೋಡೆಗೆ ತಾಗಿ ಅದರ ಹಲ್ಲುಗಳೆಲ್ಲ ಉದುರಿದವು. ಮೊದಲ ಚುಂಬನದಲ್ಲಿಯೇ ಹಲ್ಲು ಕಳೆದುಕೊಂಡವರಂತೆ, ಈ ಮಶೀನ್ ಮೊದಲ ಪ್ರಯೋಗಕ್ಕೆ ಬರುವ ಮುನ್ನವೇ ಹಲ್ಲುಗಳನ್ನು ಕಳೆದುಕೊಂಡಿತು.

ತಂದೆಯವರು ಬೈದು ಅದಕ್ಕೆ ಮತ್ತೊಂದು ಹೊಸ ಹಲ್ಲಿನ ಪ್ಲೇಟು ತಂದು ಹಾಕಿದರು. ಅದರ ಪ್ರಯೋಗ ನಮ್ಮ ತಲೆಯ ಮೇಲೆ ನಡೆದಾಗ, ಆ ಮಾನವ ಮೊಂಡ ಕತ್ತಿಯ ಸಹವಾಸ ಬೇಕಿತ್ತು. ಇದು ಅದಕ್ಕಿಂತಲೂ ಭಯಾನಕವಾಗಿತ್ತು. ನಮ್ಮ ಸಹೋದರರಿಗೆ ಅದನ್ನು ಕೈಯಲ್ಲಿ ಸರಿಯಾಗಿ ಹಿಡಿದು ಒಂದೇ ಗತ್ತಿನಲ್ಲಿ ಅದುಮಿ ಹೊರ ತೆಗೆಯಲು ಬರುತ್ತಿರಲಿಲ್ಲ. ಕತ್ತರಿಸುವುದಕ್ಕೆ ಪ್ರಾರಂಭಿಸಿ ಒಮ್ಮೆಲೇ ಮಶೀನ್ ಮೇಲಕ್ಕೆ ಎತ್ತಿ ಬಿಡುತ್ತಿದ್ದರು. ಆಗ ಹುಲ್ಲು ಕಿತ್ತಿದಂತೆ ಒಮ್ಮೆಲೇ ತಲೆಯ ಕೂದಲು ಕಿತ್ತಲು

ಪ್ರಯತ್ನಿಸುತ್ತಿದ್ದವು. ಮಶೀನ, ಕೂದಲನ್ನು ಬಿಟ್ಟು ಹೊರಗೆ ಬಾರದೆ ಇರುವುದರಿಂದ ಹಿಡಿದು ಜಗ್ಗುತ್ತಿದ್ದರು. ಮಶೀನ್ ಬಾಯಿಗೆ ತಲೆಕೊಟ್ಟು ನಾವು, ಬೊಬ್ಬೆ ಹೊಡೆಯುತ್ತ ಅದರೊಟ್ಟಿಗೆ ಜಾಲಾಡುತ್ತಿದ್ದೆವು.

ಆ ಮಶೀನ್ ತಂದೆಯ ಕೈಯಿಂದ ಅಣ್ಣಂದಿರ ಕೈಗೆ, ಅವರ ಕೈಯಿಂದ ನನ್ನ ಕೈಗೆ ಸೇರಿದಾಗ, ನಾನು ಈ ಕೆಲಸದಲ್ಲಿ ಎಷ್ಟೊಂದು ಪಳಗಿದೆನೆಂದರೆ, ನಾನೂ ಒಬ್ಬ ಉತ್ತಮ ಕ್ಷೌರಿಕನಾದೆ. ನಾನು ಎಂ. ಎ. ಓದುವಾಗ ನನ್ನ ಸ್ನೇಹಿತರು ಹೇಳುತ್ತಿದ್ದರು.

"ಈಗ ಸಂಪೂರ್ಣ ಕನ್ನಡ ಓದಿದವರಿಗೆ
ನೌಕರಿ ಸಿಗೋದಿಲ್ಲ. ಇನ್ನು ಜಾನಪದ ಕನ್ನಡ ಓದಿದ
ವರಿಗೆ ನೌಕರಿ ಸಿಗ್ತಾದ?ಜಾನಪದ ವಿಷಯ ಕಾಲೇಜಿನಲ್ಲಿ
ಇದ್ದರೆ ತಾನೇ ಅವ್ರು ನಮ್ಮನ್ನ ನೌಕರಿಗೆ ತಗೊಳ್ಳದು............?"

ಎಂದು ಪ್ರಶ್ನಿಸುತ್ತಿದ್ದರು. ಅಂತೆಯೇ ಎಂ. ಎ. ಮುಗಿದಾಕ್ಷಣ ನನಗೆ ಕೆಲಸ ಸಿಗಲಿಲ್ಲ. ಯು. ಜಿ. ಸಿ. ಯಿಂದ ಸಂಶೋಧನೆಯನ್ನು ಕೈಗೊಂಡೆ. ಆಮೇಲೆಯೂ ನನಗೆ ಮೇಲಿನ ಪ್ರಶ್ನೆಯೇ ಕಾಡುತ್ತಿತ್ತು. ನನ್ನದು ಎಂ. ಎ. ಸಂಪೂರ್ಣ ಕನ್ನಡ ವಿಷಯ ಅಲ್ಲ. ನಾನು ಜಾನಪದದ ವಿದ್ಯಾರ್ಥಿ. ನನಗೆ ನೌಕರಿ ಸಿಗದಿದ್ದರೆ?" ನನ್ನ ಮನಸ್ಸು ಆಗ ಎಷ್ಟರ ಮಟ್ಟಿಗೆ ನಿರ್ಧಾರಕ್ಕೆ ಬಂದು ನಿಂತಿತ್ತು ಎಂದರೆ,

"PH. D. BARBER SHOP"

ಎಂದು ದೊಡ್ಡದೊಂದು ಬೋರ್ಡು ಹಾಕಿ ಅಂಗಡಿಯನ್ನು ತೆರೆಯೋಣ ಎಂದು ನಿರ್ಧರಿಸಿದ್ದೆ. ಅಷ್ಟರಮಟ್ಟಿಗೆ ನಾನು ಆ ಕೆಲಸದಲ್ಲಿ ಆತ್ಮವಿಶ್ವಾಸವನ್ನು ಹೊಂದಿದವನಾಗಿದ್ದೆ.

ಅಷ್ಟೇ ಏಕೆ? ನಾನು ಎಂ. ಎ. ಓದಲು ಧಾರವಾಡಕ್ಕೆ ಬಂದಾಗ ನನ್ನ ಅಣ್ಣ ಧಾರವಾಡದಲ್ಲಿ ಕ್ಷೌರಿಕರ ಅಂಗಡಿಗೆ ಹೋಗುತ್ತಿರಲಿಲ್ಲ. ನನ್ನಣ್ಣನಿಗೆ ಹಾಸ್ಟೇಲಿನ ಅವನ ರೂಮಿನಲ್ಲಿ ನಾನೇ ಕಟಿಂಗ್ ಮಾಡುತ್ತಿದ್ದೆ. ವಿಷಯ ಯಾರಿಗೂ ಗೊತ್ತಾಗದಿರಲೆಂದು ನನ್ನಣ್ಣ ರೂಮಿನ ಕಿಟಕಿ ಬಾಗಿಲುಗಳನ್ನು ಭದ್ರಪಡಿಸುತ್ತಿದ್ದ. ಒಮ್ಮೆ ಹುಳುಕು ಹೊರಬಿದ್ದಾಗ ಅವನ ಸ್ನೇಹಿತರಿಗೆ ಆಶ್ಚರ್ಯ! ಆಮೇಲೆ ಅವನ ಸ್ನೇಹಿತರೂ ಕಟಿಂಗ್ ಮಾಡಿಸಿಕೊಳ್ಳಲು ಹಂಬಲಿಸಿದರು. ಕತ್ತರಿ ಹಣಿಗೆ ಮತ್ತು ದಾಡಿ ಸೆಟ್ ಇದ್ದರೆ ಸಾಕು, ಕಟಿಂಗ್ ಮುಗಿದು ಹೋಗುತ್ತಿತ್ತು.

ಎಂ. ಎ. ಮುಗಿಸಿ ಧಾರವಾಡದಿಂದ ಊರಿಗೆ ಬಂದಾಗ ನಾಯಿಂದರ ಮಲ್ಲನಲ್ಲಿ ಕಟಿಂಗ್ ಮಾಡಿಸಿಕೊಳ್ಳಲು ಹೋದರೆ, ಆಗ ಆತ "ರೀ" ಎಂದು ಸಂಬೋಧಿಸುತ್ತಾ ಕೇಳುತ್ತಿದ್ದ

ನೀವು ಮೊದ್ಲು ಮನ್ಯಾಗ ಕಟಿಂಗ್ ಮಾಡ್ತಿದ್ರೆಂತ ಹೌದಾ?

"ಹೌದು"

ಈಗ ಯಾರು ಮಾಡ್ತಾರೆ?

"ಯಾರೂ ಇಲ್ಲ"

ಹಂಗಿದ್ರ ಆ ಸಾಮಾನೆಲ್ಲ ಮನ್ಯಾಗ ಇರಬೇಕಲ್ಲಾ ನಮಗರ ತಂದು ಕೊಡ್ರಿ ನಾವಾರ ಬಳ್ಸಕೊತೀವಿ, ಎಂದು ಹೋದಾಗಲೆಲ್ಲ ಕೇಳುತ್ತಿದ್ದ. ಮೊದಲು ನಮ್ಮನ್ನು ಮುಟ್ಟದೇ ಸ್ಪೃಶ್ಯತನವನ್ನು ಕಾಪಾಡಿಕೊಳ್ಳುತ್ತಿದ್ದ ಅವರ ತಂದೆ ಗೂರುತ್ತ ಅಲ್ಲಿಯೇ ಕುಳಿತಿರುತ್ತಿದ್ದರು. ಈ ವ್ಯವಸ್ಥೆಯಲ್ಲಿ ಅವಶ್ಯಕ ಕೆಲಸಗಳಿಂದ ವಂಚಿತನಾದ ಮನುಷ್ಯ ಆ ಅವಶ್ಯಕ ಕೆಲಸಗಳನ್ನು ತಾನಾಗಿಯೇ ಕಲಿತುಕೊಳ್ಳುತ್ತಾನೆ. ಕನ್ನಡಿಯ ಮುಂದೆ ನಿಂತಾಗ, ಕಣ್ಣಿಗೆ ಕತ್ತರಿ ಕಂಡರೆ ನನ್ನ ಕೈ ಈಗಲೂ ಸುಮ್ಮನಿರುವುದಿಲ್ಲ.

l

l

# ನನ್ನಪ್ಪನ ಮಾಸ್ತರ ನೌಕರಿ ಮತ್ತು ಪಂದ್ರಾ ಆಗಸ್ಟ

ನನ್ನಪ್ಪನಿಗೆ ನಡುವಯಸ್ಸಿನಲ್ಲಿಯೇ ಮರ್ಮಾಂಗಕ್ಕೆ ಚೇಳು ಕಡಿದುದರಿಂದ ಮೈಯೆಲ್ಲ ಹಸಿರೇರಿ ಸತ್ತ. ಅಜ್ಜಿ ಹೇಳುತ್ತಿದ್ದಳು, ಮಕ್ಕಳಾಗಲಿಲ್ಲವೆಂದು ಕಂಡ ಕಲ್ಲುಗಳಿಗೆಲ್ಲ ಸುತ್ತಿ, ಹರಕೆ ಹೊತ್ತು ಪ್ರಯೋಜನವಾಗದೆ ಹೋದಾಗ ಬೆಲ್ಲದ ಉಂಡಿಯಲ್ಲಿ ಚೇಳನಿಟ್ಟು, ಚರ್ಮಿತುಪ್ಪ (ಆಡಿನ ಶರೀರದಲ್ಲಿಯ ಕೊಬ್ಬು ಪದಾರ್ಥ) ದಲ್ಲಿ ನುಂಗಿ ಹಡೆದಿದ್ದಳಂತೆ ಆದ್ದರಿಂದ "ಚೇಳಿನಿಂದಲೇ ಹುಟ್ಟಿದ್ದ ಚೇಳಿನಿಂದಲೇ ಸತ್ತ" ಎಂದು ತನ್ನ ಬದುಕಿನ ದಿನಗಳನ್ನು ನಿಟ್ಟುಸಿರಿನೊಂದಿಗೆ ಕಥೆ ಮಾಡಿ ಹೇಳುತ್ತಿದ್ದಳು.

ನನ್ನ ಮನೆಯವರೆಲ್ಲ ಹೇಳುವುದೆಂದರೆ ನಾನು ಹುಟ್ಟಿದಾಗ ಗುಂಗಿಯ ಹುಳು "ಜೀಂ" ಗುಟ್ಟಿದಂತೆ ಸದಾಕಾಲ ಅಳುತ್ತಿದ್ದೆನಂತೆ! ಹಗಲು-ರಾತ್ರಿಗಳ ವ್ಯತ್ಯಾಸವಿರಲಿಲ್ಲ. ಕಣ್ಣುಮುಚ್ಚುತ್ತಿರಲಿಲ್ಲ. ತುಟಿ ಸೇರುತ್ತಿರಲಿಲ್ಲ. ಅತ್ತು ಅತ್ತು ಬಾಯಿ ಬತ್ತಿ ಹೋದರೂ ಅಳುವುದು ನಿಲ್ಲುತ್ತಿರಲಿಲ್ಲ. ಅದಕ್ಕೆ ಅವ್ವ "ಕುತ್ತಿಗಿ ಹಿಸುಕಿ ಕಂದಕದಾಗ ಒಗದ ಬರ್‍ರಿ" ಎಂದು ಬೇಸತ್ತು ಹೇಳುತ್ತಿದ್ದಳಂತೆ! ನನ್ನನ್ನು ಸದಾಕಾಲ ರಮಿಸುವವರು ಅಜ್ಜ ಮತ್ತು ಅಪ್ಪ ಇವರಿಬ್ಬರು. ನಾನು ಹತ್ತು ತಿಂಗಳ ಮಗುವಾಗಿರುವಾಗಲೇ ಅಪ್ಪ ಸತ್ತರು. ಅಪ್ಪ ಸತ್ತಾಗ ಅರ್ಧ ಅಳುವು ನಿಂತದ್ದು. ಅಜ್ಜ ಸತ್ತಾಗ ಪೂರ್ತಿ ಅಳುವು ನಿಂತದ್ದು. ಇದನ್ನು ನೆನೆನೆನಿಸಿ "ಇವರಿಬ್ಬರನ್ನು ನುಂಗಿ ಏನ ಸಾಧಸಾಕ ಹುಟ್ಯಾದೋ ಇದು " ಎಂದು ನನ್ನ ಗಲ್ಲಕ್ಕೆ ಹಲವಾರು ಬಾರಿ ನನ್ನವ್ವ ಸಣ್ಣವನಿದ್ದಾಗ ತಿವಿದಿದ್ದಳಂತೆ. ದೊಡ್ಡವನಾದಾಗಲೂ ನಗುತ್ತಲೇ ಹಂಗಿಸಿದ್ದಾಳೆ.

ನನ್ನಪ್ಪ ಶಾಲೆ ಓದಿದ್ದೆಂದರೆ ಬೆಟ್ಟ ಕುಟ್ಟಿ ಪುಡಿ ಮಾಡಿದ ಸಾಹಸ. ಸಮುದ್ರದ ನೀರು ಕುಡಿದು ನಡೆದ ಸಾಹಸ! ಓದುವಾಗ ಇದ್ದ ಉತ್ಸಾಹ ಹುರುಪು ಹುಮ್ಮಸ್ಸು ನೌಕರಿ ಮಾಡುವಾಗ ಇರಲಿಲ್ಲವಂತೆ. ಅಜ್ಜಿ ಹೇಳುತ್ತಿದ್ದಳು: ಆಗ ಏಳು ರೂಪಾಯಿ ಸಂಬಳವಿರುತ್ತಿತ್ತಂತೆ. ತಿಂಗಳಲ್ಲಿ ಮನೆಗೆ ಮೂರು ರೂಪಾಯಿ ಖರ್ಚುಮಾಡಿ ನಾಲ್ಕು ರೂಪಾಯಿ ತೆಗದಿಡುತ್ತಿದ್ದರಂತೆ!

ನೌಕರಿಯ ನೇಮಕ ಪತ್ರ ಕೈಗೆ ಬಂದಾಗ ಕೇರಿಯೆಲ್ಲಾ ಸುತ್ತಾಡಿ ಹಿರಿಯರಿಗೆಲ್ಲ ಕಾಲಿಗೆ ಬಿದ್ದು ನಮಸ್ಕರಿಸಿ, ನೌಕರಿ ಬಂದಿದೆ ಸೇರುವುದಕ್ಕಾಗಿ ಹೋಗುತ್ತಿದ್ದೇನೆಂದು ಸಾರಿ, ಹಾಜರಾಗಲು ಹೋದನಂತೆ. ಸುಟ್ಟ ಬದನೆಕಾಯಿಯಂತೆ ಮುಖ ಒಣಗಿಸಿಕೊಂಡು

ಮನೆಗೆ ಬಂದದ್ದು ನೋಡಿ ಎಲ್ಲರಿಗೂ ಆಶ್ಚರ್ಯ. ಅಲ್ಲಿ ನಡೆದ ವಿಷಯ ಅಪ್ಪ, ಅಜ್ಜಿ, ಅಜ್ಜ, ಅವ್ವ ಅವರೆದುರು ಹೇಳಿದನಂತೆ.

ಹಾಜರಾಗಲು ಹೋದಾಗ ಮುಖ್ಯ ಗುಮಾಸ್ತರು

"ಇಲ್ಲ ನೀನು ಬೇರೆ ಊರಿಗೆ ಹಾಕ್ಸಕೋ

ಇಲ್ಲ್ಯಾದ್ರ ನಿನಗೆ ಸರಿ ಆಗೋದಿಲ್ಲ"

"ಇಲ್ರೀ ನಾನು ಸರಿಯಾಗಿ ಹೊಂದಿಕೊಂಡ ಹೋಗ್ತೀನಿ"

ಆಮೇಲೆ ಶಾಲೆಯಲ್ಲಿರುವ ಮಾಸ್ತರರೆಲ್ಲ ಸಭೆ ಸೇರಿ ಠರಾವ್ ಮಾಡಿ ಹೇಳಿದರಂತೆ

"ಇಲ್ಲ ಈ ಸಾಲ್ಯಾಗ ನೀ ಸೇರುದು ಸಾಧ್ಯ ಇಲ್ಲ"

"ಸರಕಾರದ ಪತ್ರ ತಂದಿದ್ರ, ಆ ಪತ್ರ ತಗೊಂಡು ಸರಕಾರದವ್ರಿಗೆ ಹೇಳು, ನಾನು ಅಲ್ಲಿ ನೌಕ್ರಿ ಮಾಡೋದಿಲ್ಲ ಅಂತ ಹೇಳಿ, ಬ್ಯಾರೆ ಕಡೆ ಬದ್ಲ ಮಾಡ್ಸಿಕೋ. ಇಲ್ಲಂದ್ರ ಮುಂದ ನೀನೇ ಉಣಬೇಕಾಗತದ........." ಸಾಲಿ ಬಿಡುತನಾ ನಿಂತೆ, ಏನೂ ಪ್ರಯೋಜನಾ ಆಗಲಿಲ್ಲ. "ಕುಂದ್ರು" ಅನ್ನೋ ಕರುಣೆ ಕೂಡಾ ತೋರ್ಸಲಿಲ್ಲ ಎಂದು ನಡೆದದ್ದನೆಲ್ಲ ವಿವರಿಸಿ ಹೇಳಿದನಂತೆ. ಮತ್ತೆ ಏನೆಲ್ಲ ಮಾಡಿ ಬೇರೆ ಊರಿನ ಶಾಲೆಗೆ ಹಾಜರಾಗುವಂತೆ ವ್ಯವಸ್ಥೆ ಮಾಡಿಕೊಂಡು ಬಂದನಂತೆ.

ಅದೊಂದು ಹಳ್ಳಿ, ಊರಿಗೆ ಹತ್ತಿರವಾದುದೇ. ಅಲ್ಲಿ ಶಾಲೆ ಆರಂಭ ಆಗಿ, ಯಾವ ಮಾಸ್ತರೂ ಹೋಗಲಿಕ್ಕಾಗದೆ ಖಾಲಿ ಉಳಿದದ್ದು. ಆ ಶಾಲೆ ಹನುಮಂತ ದೇವರ ಗುಡಿಯಲ್ಲಿ ನಡೆಸುತ್ತಿದ್ದರಂತೆ! ಮಾಸ್ತರು ಇಲ್ಲದ ಗುಡಿ, ಗುಡಿಯೇ ಆಗಿತ್ತು. ಹೋಗಿ ಊರ ಗೌಡರಿಗೆ ಮನವಿ ಮಾಡಿಕೊಂಡಾಗ, ಸರಕಾರದ ಪತ್ರ ನೋಡಿ,

ನಿಮಗ್ಯಾಕ್ರಿ ಮಾಸ್ತರೇ ನೌಕ್ರಿ

ನಮ್ಮ ಹಳ್ಯಾಗ ಸಾಲಿನೇ ಇಲ್ಲ. ಮಕ್ಕಳೂ ಇಲ್ಲ ಅಂದಿದ್ದರಂತೆ! ಅಂತೂ ಹೇಗೋ ಪಾಠ ಮಾಡಲು ಅಲ್ಲಿ ಅನುಮತಿ ದೊರೆತರೂ ಕೆಲವೊಂದು ಕಡ್ಡಾಯದ ನಿಯಮಗಳನ್ನು ಹಾಕಿದ್ದರಂತೆ. (ಹೆಚ್ಚಿನ ವಿವರ ತಿಳಿಯದು)

ದೇವರ ಗುಡಿಯಲ್ಲಿ ಹೋಗುವ ಹಾಗಿಲ್ಲ

ಮರದ ಕೆಳಗೆ ಪಾಠಶಾಲೆ ಆರಂಭಿಸಬೇಕು

ಅಪ್ಪನ ನೌಕರಿ ಆರಂಭ ಆಯಿತು. ಶಾಲೆಗೆ ಮಕ್ಕಳೇ ಇಲ್ಲ! ಶಾಲೆಯಲ್ಲಿ ಮಾಸ್ತರನೂ ಅವನೇ, ಮುಖ್ಯೋಪಾಧ್ಯಾಯನೂ ಅವನೇ. ಕಸಗುಡಿಸುವ ಜವಾನನೂ ಅವನೇ, ಗಂಟೆ ಬಾರಿಸುವ ಸಿಪಾಯಿಯೂ ಅವನೇ, ಕೊನೆಗೆ ವಿದ್ಯಾರ್ಥಿಯೂ ಅವನೇ ಆಗಿದ್ದನಂತೆ! ಸುಮಾರು ಎರಡು ತಿಂಗಳ ಕಾಲ ಮಕ್ಕಳಿಲ್ಲದೆ, ಪಾಠವೂ ಇಲ್ಲದೆ ಹೋಯಿತಂತೆ. ಆದರೆ ಸಂಬಳ ಮಾತ್ರ ತಪ್ಪದೇ ಬರುತ್ತಿತ್ತಂತೆ.

"ಕೆಲಸ ಮಾಡದೇ ಏನು ಪಗಾರ ತಗೊಳುದು" ಎಂದು ಅಜ್ಜಿಯ ಎದುರು ಗೊಣಗುತ್ತಿದ್ದನಂತೆ. ಬೇರೆ ಕೆಲಸ ಹುಡುಕುವ ಹವಣಿಕೆಯಲ್ಲಿಯೂ ಇದ್ದನಂತೆ. ಆದರೆ ಮುಂದೆ ಒಬ್ಬೊಬ್ಬರೇ ಮಕ್ಕಳು ಬರೋದಕ್ಕೆ ಆರಂಭ ಆಗಿ ಶಾಲೆಯೂ ಆರಂಭ ಆಯಿತಂತೆ. ಕೆಲವರು ಕನಿಕರದಿಂದ, ಕೆಲವರು ಮಾಸ್ತರನ ಗುಣಗಾನ ಮಾಡಿ ಮಕ್ಕಳನ್ನು ಕಳ್ಸತಿದ್ರಂತೆ. ಮುಂದೆ ಹನುಮಂತ ದೇವರ ಗುಡಿಯಲ್ಲಿಯೇ ಪಾಠ ಆರಂಭ ಆಗಿ ಬೆಳೀತಾ ಹೋಯಿತಂತೆ.

ನಾನು ಚಿಕ್ಕವನಿದ್ದಾಗ ಸ್ನೇಹಿತರೊಂದಿಗೆ ಓತಿಕ್ಯಾತನ ಬೇಟೆಯಾಡುತ್ತಾ ನಂತರ ಅದನ್ನೂ ಮರೆತು, ಹುಣಸೆ ಚಿಗುರು ಕಾಯಿಗಾಗಿ ಅಲೆಯುತ್ತಾ ಆ ಹಳ್ಳಿಗೆ ಹೋಗಿದ್ದೆ. ಆ ಹಳ್ಳಿಯ ದೇವಸ್ಥಾನದಲ್ಲಿ ನನ್ನಪ್ಪನ ಭಾವಚಿತ್ರ ಇತ್ತು. ಅದೊಂದು ಸಮೂಹದ ಭಾವಚಿತ್ರ.  ಅದು ನನ್ನ ಕೈಗೆ ನಿಲುಕುತ್ತಿರಲಿಲ್ಲ. ಅದನ್ನು ಹಿಡಿಯೋದಕ್ಕೆ ಕೈ ಚಾಚಿ ಸಿಕ್ಕದೆ ಹೋದಾಗ ಮೆಲ್ಲನೆ ಜರೆಯುತ್ತ ಅಳುತ್ತ ಅಲ್ಲೇ ಕುಳಿತಿದ್ದೆ. ಆಗ ಸ್ನೇಹಿತರು ನನ್ನನ್ನು ರಮಿಸಲು ಹುಣಸೆ ಕಾಯಿಗಳನ್ನೆಲ್ಲ ನನ್ನ ಮುಂದೆ ಹಾಕಿ "ಅಳಬೇಡ, ಅಳಬೇಡ" ಎಂದು ರಮಿಸುತ್ತಿದ್ದರು. ಆಗ ನನ್ನ ಸ್ನೇಹಿತನೊಬ್ಬ ಬಾಗಿ ತನ್ನ ಬೆನ್ನು ಕೊಟ್ಟಿದ್ದ. ಅವನ ಬೆನ್ನ ಮೇಲೆ ನಿಂತು ನನ್ನಪ್ಪನ ಭಾವಚಿತ್ರದ ಭಾಗವನ್ನು ಸವರಿ ಸವರಿ ಎಂಥದೋ ಆನಂದ ಅನುಭವಿಸುತ್ತಿದ್ದೆ. ಈ ಸಂದರ್ಭ ಈಗ ಬರೆಯುತ್ತಿದ್ದರೂ ಕಣ್ಣು ನೆನೆದು ಮಂಜಾಗುತ್ತಿದೆ,  ಕಂಠ ತುಂಬಿ ಬರುತ್ತಿದೆ. ಆ ನನ್ನ ಸ್ನೇಹಿತನ ಬೆನ್ನು ಈಗಲೂ ನನ್ನ ಕಾಲಡಿಯಲ್ಲಿ ಇದ್ದಂತೆ ಭಾಸವಾಗುತ್ತಿದೆ.

ನನ್ನಪ್ಪ ಒಬ್ಬ ಸ್ವಾತಂತ್ರ್ಯ ಹೋರಾಟಗಾರ, ರಾಷ್ಟ್ರೀಯ ದಳದಲ್ಲಿ ಸೇರಿ ಹೋರಾಟ ಮಾಡಿದವನು. ಆ ಖಾದಿ ಬಟ್ಟೆಯಲ್ಲಿಯೇ ಎದೆಯುಬ್ಬಿಸಿ ನಿಂತು ತೆಗೆಸಿಕೊಂಡ ಭಾವಚಿತ್ರ ಇಂದಿಗೂ ನಮ್ಮ ಹಳೆಯ ಮನೆಯಲ್ಲಿ ಜೋತಾಡುತ್ತಿದೆ. ಇಲ್ಲಿ ಆತನ ಹೋರಾಟದ ಗಾಥಾ ಬರೆಯಲು ಹೊರಟಿಲ್ಲ. ಅಥವಾ ತೀರಾ ಸ್ವಾರಸ್ಯಕರವಾದ ಮತ್ತು ಪೌರುಷ ಭರಿತವಾದ ಸಂದರ್ಭಗಳನ್ನು ಹೇಳಬಹುದಾಗಿತ್ತಾದರೂ ಅಂಥವೂ ನನಗೆ ತೀರಾ ಮುಖ್ಯವೆನಿಸುತ್ತಿಲ್ಲ.  ನನಗನಿಸಿದ ಒಂದು ಮಹತ್ವದ ಸಂದರ್ಭವನ್ನು ಮುಂದಿಡುತ್ತಿರುವೆ.

ಒಂದು ದಿನ ನನ್ನಪ್ಪ ವಿಜಾಪುರದಿಂದ ನಸುಕಿನಲ್ಲಿಯೇ ಬಂದವನೇ "ಏ ನಮಗ ಸ್ವಾತಂತ್ರ್ಯ ಬಂತು, ಹೋಳಿಗಿ ಮಾಡು ಹೋಳಿಗಿ ಮಾಡು" ಎಂದು ಅವ್ವಾಗೆ ಹೇಳಿ ಹೋಳಿಗೆ ಮಾಡಿಸಿದನಂತೆ. ಅಜ್ಜಿ "ಅಷ್ಟ್ಯಾಕ ಹೋಳ್ಗಿ ಮಾಡೋದು" ಎಂದು ಬೇಸೂರು ಎತ್ತಿದರೂ ಲೆಕ್ಕಿಸದೇ ಹೆಚ್ಚಿಗೆನೇ ಮಾಡಿಸಿ ಕೇರಿಯ ಮನೆ ಮನೆಗೆಲ್ಲ ಹೋಗಿ ಅವರ ಬಾಯಿಯಲ್ಲಿ ಹೋಳಿಗೆ ಇಟ್ಟು ಆ ಸಂಭ್ರಮವನ್ನು ಹಂಚಿಕೊಂಡದ್ದು ಆ ದಿನದ ಮೊದಲನೆಯ ಕಂತಿನ ಕೆಲಸವಾಗಿತ್ತಂತೆ.

ಎರಡನೆಯ ಕಂತಿನ ಕೆಲಸ, ಅದಕ್ಕಿಂತಲೂ ಹುರುಪು ಹುಮ್ಮಸ್ಸಿನಿಂದ ಕೂಡಿದ್ದು.

ಕೇರಿಯ ಎಲ್ಲ ಯುವಕರನ್ನೂ ಕರೆದುಕೊಂಡು ಕೊಡ ಹಗ್ಗದೊಂದಿಗೆ ನೀರಿಗೆ ಹೊರಟರಂತೆ. ಅದು ಮಧ್ಯಾಹ್ನದ ಉರಿ ಬಿಸಿಲು ಬೇರೆ! ಹೋದವರೇ ಮೊದಲು ಮಠದ ಬಾವಿಗೆ ಹಗ್ಗವನ್ನು ಹಾಕಿ ನೀರು ಸೇದಿದರಂತೆ. ಎಲ್ಲ ಜನತೆ "ಅವಕ್ಕಾಗಿ" ಇವರನ್ನೇ ನೋಡುತ್ತಿದ್ದರಂತೆ. ಇವರ ಕುಣಿದಾಟ, ಜಿಗಿದಾಟ ನಿಂತು ನೋಡುವ ಹಾಗೆ ಇರುತ್ತಿತ್ತಂತೆ! ಮೇಲು ಜಾತಿಯ ಜನತೆಗೆ ಆಶ್ಚರ್ಯ, ದಿಗಿಲು ಎರಡೂ ಏಕಕಾಲಕ್ಕೆ ಉಂಟಾಗಿರಬೇಕು. ಬಾವಿಯಿಂದ ನೀರು ಜಗ್ಗಿದ ಈ ಜನ ಮನೆಗೂ ತೆಗೆದುಕೊಂಡು ಹೋಗುತ್ತಿರಲಿಲ್ಲವಂತೆ.

ಬಾವಿಯಿಂದ ನೀರು ಜಗ್ಗುವುದು
ದಬದಬನೆ ನೆಲಕ್ಕೆ ಚೆಲ್ಲುವುದು
ಬಾವಿಯಿಂದ ನೀರು ಜಗ್ಗುವುದು
ದಬದಬನೆ ನೆಲ್ಲಕ್ಕೆ ಚೆಲ್ಲುವುದು

ಹೀಗೆ ಒಂದು ಬಾವಿಯಲ್ಲಿ. ಎರಡು ಬಾವಿಯಲ್ಲಿ ಊರಲ್ಲಿ ಇರುವ ಎಲ್ಲ ಬಾವಿಗಳನ್ನೂ ಮುಟ್ಟಿ ಮುಟ್ಟಿ ಗಡಗಡಿಗೆ ಹಗ್ಗ ಹಾಕಿ ನೀರು ತೆಗೆಯುವುದು, ಚೆಲ್ಲುವುದು, ಆ ಪಂದ್ರಾ ಆಗಸ್ಟದ ದಿನವೆಲ್ಲ ಇದೇ ಕೆಲಸವೇ ಆಗಿ ಹೋಗಿತ್ತಂತೆ ಊರ ಜನವೆಲ್ಲ ಮಿಕ ಮಿಕನೇ ಬಾಯಿ ತೆಗೆದುಕೊಂಡು ಇವರ ಮುಖಗಳನ್ನೇ ನೋಡುತ್ತಿದ್ದರಂತೆ! ಜನರೆಲ್ಲ ದಾರಿಯುದ್ದಕ್ಕೂ ನಿಂತು ನೋಡುತ್ತಿದ್ದರಂತೆ.

ಎಂತಹ ಸಂದರ್ಭವಲ್ಲವೇ ಇದು ? ಸ್ವಾತಂತ್ರ್ಯವೆಂದರೆ ಒಬ್ಬೊಬ್ಬರಿಗೆ ಎಂತಹ ಕಲ್ಪನೆ. ವಿವೇಕಾನಂದರಿಗೆ ತಮ್ಮದೇ ಆದ ಹೊಸನಾಡಿನ ಕಲ್ಪನೆ, ಸರದಾರ್ ವಲ್ಲಭಭಾಯಿ ಪಟೇಲರಿಗೆ ಕ್ಷಾತ್ರ ತೇಜಸ್ಸಿನ ಕಲ್ಪನೆ, ನೆಹರೂಗೆ ಆಧುನೀಕರಣದ ನಾಡಿನ ಕಲ್ಪನೆ, ಗಾಂಧೀಜಿಗೆ ರಾಮರಾಜ್ಯದ ಕಲ್ಪನೆ, ಅಂಬೇಡ್ಕರ್‌ಗೆ ಹಕ್ಕುಗಾರಿಕೆಯ ನಾಡಿನ ಕಲ್ಪನೆ, ನನ್ನಪ್ಪನಂತಹ ಸಾಮಾನ್ಯ ಮನುಷ್ಯರಿಗೆ ಸ್ವಾತಂತ್ರ್ಯದ ನಾಡು ಎಂದರೆ ಕುಡಿಯುವ ನೀರು ತರಲು ನಮಗೆ ಯಾರೂ ಅಡ್ಡಿ ಮಾಡಲಾರರು ಎನ್ನುವ ನಾಡಿನ ಕಲ್ಪನೆ!

ನನ್ನಪ್ಪನ ಎದೆಗೆ ಕುದಿವ ಬಿಸಿನೀರು ಎರಚಿದಂತಾದುದು ಪಂದ್ರಾ ಆಗಸ್ಟದ ದಿನದಂದೆ! ಪಂದ್ರಾ ಆಗಸ್ಟದಂದು ನಡೆದ ಘಟನೆ ಅನಿಶ್ಚಿತತೆಯಿಂದ ಕೂಡಿದ್ದು. ಹೀಗಾಗಿಯೇ ಜನ ಕೇವಲ ನಿಂತು ನೋಡುವಂತಾಗಿ ಹೋಯಿತೆಂದು ತೋರುತ್ತದೆ. ಆದರೆ ಮರುದಿನ ಹಲ್ಲು ಮಸೆಯುವ ಸುದ್ದಿಗಳೇ ಕಿವಿತುಂಬ ಇದ್ದುವಂತೆ. ಕೆಲವರು ಬಾವಿಯ ಗಡಗಡಿಗಳನ್ನೇ ತೆಗೆದಿದ್ದರಂತೆ ಇನ್ನೂ ಕೆಲವರು "ಅವರು ಬರಲಿ ಇವತ್ತು" ಎಂದು ಕಾಯುತ್ತಾ ಕುಳಿತಿದ್ದರಂತೆ!

ಪಂದ್ರಾ ಆಗಸ್ಟದಂದು ಮಾಡಿಸಿ ತಿಂದದ್ದು ಹೋಳಿಗೆಯಲ್ಲವೇ? ದಿನವೂ ಹೋಳಿಗೆ ತಿನ್ನಲು ಸಾಧ್ಯವೇ? ಮರುದಿನ ಅದೇ ಕಂಕು ರೊಟ್ಟಿಯೇ ಗತಿ ಎನ್ನುವಂತೆ ಹಳೆಯ

ದಾರಿಯನ್ನೇ ತುಳಿದು ಬಾಯಿ ಮುಚ್ಚಿಕೊಂಡು ಊರ ಹೊರಗೆ ಇವರಿಗಾಗಿಯೇ ಕಟ್ಟಿಸಿದ ಬಾವಿಯಿಂದ ನೀರನ್ನು ತಂದರಂತೆ! ಇದು ನಮ್ಮ ದೇಶದ ನಲ್ವತ್ತೇಳರ ಸ್ವಾತಂತ್ರ್ಯ! ಇದು ನಮ್ಮಪ್ಪನ ನಾಡಿಗೆ ಸಿಕ್ಕ ಸ್ವಾತಂತ್ರ್ಯ!

l

l

# ಮುಕ್ತಾಯದ ಮುನ್ನ...........

"ಗೌರ್ಮೆಂಟ್ ಬ್ರಾಹ್ಮಣ" ಎನ್ನುವ ಪದವನ್ನು ಯಾವ ಕಾರಣಕ್ಕಾಗಿ ಪ್ರಯೋಗಿಸುತ್ತಿದ್ದರು ಎನ್ನುವುದನ್ನು ಈ ಹಿಂದೆ ಒಂದೆಡೆ ಸಾಂದರ್ಭಿಕವಾಗಿ ಚರ್ಚಿಸಿದ್ದೇನೆ. ಗೌರ್ಮೆಂಟ್ ಬ್ರಾಹ್ಮಣ ಎಂದರೆ "ಅಸ್ಪೃಶ್ಯ" ಎಂದೇ ಅರ್ಥ. ಆದರೆ ಈ ಎರಡೂ ಶಬ್ದಗಳ ಹಿಂದಿರುವ ಧ್ವನಿ ಮಾತ್ರ ಬೇರೆ ಬೇರೆ. ಗೌರ್ಮೆಂಟ್ ಬ್ರಾಹ್ಮಣ ಎಂದು ಕೆಲವರು ವ್ಯಂಗ್ಯವಾಗಿ ಕರೆದಂತೆ " ದೇವರ ಮಕ್ಕಳು" ಎಂದು ಕರೆದದ್ದು ಇದೆ. ಜಾತಿ ಪತ್ರವನ್ನು ಕೊಡುವಾಗ ತಹಶಿಲ್ದಾರರ ಮುದ್ರೆ ಅದರ ಮೇಲೆ ಇರುತ್ತಿತ್ತು. ಅದು ವರ್ತುಳಾಕಾರ ಇರುವುದರಿಂದ "ಗುಂಡು ಸಿಕ್ಕಾ" ಎಂದೂ ಕರೆಯುತ್ತಿದ್ದರು. ಹರಿಜನ, ದಲಿತ, ಆದಿ ದ್ರಾವಿಡ ಹೀಗೆ ಒಂದೊಂದು ಶಬ್ದದ ಹಿಂದೆ ಒಂದೊಂದು ಬಗೆಯ ಧ್ವನಿಗಳಿವೆ. ಆ ಶಬ್ದಗಳಿಂದ ಕರೆದಾಗ ನಮ್ಮ ಎದೆಯಲ್ಲಿ ಒಂದೊಂದು ಬಗೆಯ ಆರೋಹಣ ಅವರೋಹಣದ ತಳಮಳ. ಮನುಷ್ಯನಿಗೆ ಸ್ವಾಭಿಮಾನ ಮೂಡಿದಾಗ ನಿಂದನೆಯ ಪದಗಳಿಗೂ ಎಂಥ ಬಲ ಬರುತ್ತದೆ ಎನ್ನುವುದಕ್ಕೆ "೭೦"ರ ದಶಕದಲ್ಲಿ ಆರಂಭವಾದ ಚಳವಳಿ ಸಾಕ್ಷಿಯಾಗುತ್ತದೆ.

ಈ ಸ್ವರೂಪದ ಬರವಣಿಗೆ ರೂಪುಗೊಳ್ಳಲು ಮುಖ್ಯವಾಗಿ ಎರಡು ಬಿಂದುಗಳು ಕಾರಣ. ಒಂದು ದಲಿತ ಸಂಘರ್ಷ ಸಮಿತಿ, ಎರಡು ನನ್ನಣ್ಣ. ನನ್ನಣ್ಣ ದಲಿತ ಸಂಘರ್ಷ ಸಮಿತಿ, ಸಮುದಾಯಗಳಲ್ಲಿ ಓಡಾಡಿದವ. ಅಲ್ಲಿಯ ಸಮೂಹ ಗೀತೆಯಲ್ಲಿ, ಬೀದಿನಾಟಕಗಳಲ್ಲಿ ಸಕ್ರಿಯವಾಗಿ ಸೇರಿದವ. ಕವನ, ಲೇಖನಗಳನ್ನು ಕದ್ದು ಓದುವ, ನೋಡುವ ಪ್ರವೃತ್ತಿಯಿಂದಲೇ ನಾನು ಆತನ ಕೆಲ ಗುಣಗಳನ್ನು ರೂಢಿಸಿಕೊಂಡೆ.

"ಕಾರ್ಯ" ಕಾದಂಬರಿ ಪ್ರಕಟವಾದಾಗ ಮನೆಯಲ್ಲಿ ಇಬ್ಬರು ಹಿರಿಯ ಸಹೋದರರನ್ನು (ರಾಮಸ್ವಾಮಿ, ಬಸವರಾಜ) ಹೊರತುಪಡಿಸಿ ಇನ್ನುಳಿದವರೆಲ್ಲ ತೆಗಳುವವರೇ. ಆದರೆ ಹಿರಿಯ ಸಹೋದರನ ಮಾತುಗಳು ನನ್ನ ಪಾಲಿಗೆ ಹೆಚ್ಚು ತೂಕ ಬದ್ಧ ಎಂದು ಭಾವಿಸುತ್ತಿದ್ದೆ. ಕಾರಣ, ಈತ ಸಾಮಾಜಿಕ ಪ್ರಜ್ಞೆ, ದಲಿತ ಪ್ರಜ್ಞೆ, ಚಾರಿತ್ರಿಕ ಪ್ರಜ್ಞೆ ಇಂಥ ಪ್ರಜ್ಞಾವಂತ ವಲಯದವನಾಗಿದ್ದ ಎನ್ನುವುದೇ ಆಗಿತ್ತು. ಈಗಿಷ್ಟು ಸ್ಪಷ್ಟವಾಗಿ ಬರೆದಂತೆ ಹಿಂದೆ ನನಗಾಗ ಈ ರೀತಿಯ ಸ್ಪಷ್ಟತೆ ಇರಲಿಲ್ಲ. ಆದರೆ ಆ ವಿಚಾರದ ಕಡೆಗೆ ವಿಶೇಷವಾದ ಆಸಕ್ತಿ ಇತ್ತು. ನನ್ನ ನಾಲ್ಕನೆಯ ಪುಸ್ತಕವಾಗಿ ಕಾರ್ಯ ಕಾದಂಬರಿ ಬರೆದಾಗ

"ನಿಜವಾದ ಜೀವಂತಿಕೆ ಇದರಲ್ಲಿದೆ" ಎಂದು ಹೇಳಿ ಕೆಲವು ಲೋಪದೋಷಗಳನ್ನೂ ಎತ್ತಿ ತೋರಿಸಿದ. ಸೀಮಾತೀತವಾಗಿರುವ ದಲಿತ ಪ್ರಜ್ಞೆಯಿಂದ ಗುರುತಿಸುವ ನನ್ನ ವಿಚಾರ, ಅದನ್ನು ಕಾದಂಬರಿಯಲ್ಲಿ ಕಂಡು ಮೆಚ್ಚಿದ್ದ, ಈತನ ಈ ಬಗೆಯ ಪ್ರೋತ್ಸಾಹ ನಾನು ದಲಿತನಾಗಿದ್ದು, ಮತೀಯ ದಲಿತೀಯತೆಯನ್ನು ಮೀರಿ ನಿಲ್ಲಲು ಸಾಧ್ಯವಾದುದು, ಇಂಥ ವಿಚಾರಕ್ಕೆ ನನ್ನಣ್ಣ ಮೂಲಮಾತ್ರವಾದರೂ ನನಗೆ ನನ್ನತನವನ್ನು ಹಿಗ್ಗಿಸಿಕೊಳ್ಳಲು, ಬೆಳೆಯಲು ಸಹಕರಸಿದವುಗಳೆಂದರೆ ದಲಿತ ಸಂಘರ್ಷ ಸಮಿತಿ ಮತ್ತು ದಲಿತ-ಬಂಡಾಯ ಸಾಹಿತ್ಯ ಸಂಘಟನೆ.

"೭೦"ರ ದಶಕದಲ್ಲಿ ಬ್ರಾಹ್ಮಣ ಪ್ರಜ್ಞೆ, ಶೂದ್ರ ಪ್ರಜ್ಞೆ, ದಲಿತ ಪ್ರಜ್ಞೆ ಹೀಗೆ ಅದು ಪ್ರಜ್ಞೆಗಳ ಸಂತೆಯ ಕಾಲ. ಈ ಸಂತೆಯಲ್ಲಿ ಉಂಡವನೇ ಜಾಣ ಎನ್ನುವಂತೆಯೂ ಇತ್ತು. ಇಲ್ಲಿ ಪತ್ರಿಕೆಗಳೇ ಗಾಳಿಪಟಗಳಾಗಿದ್ದವು. ಎಲೆ ಅಡಿಕೆಯಾಗಿದ್ದವು. ಈ ಬಗೆಯ ಸಾಂಸ್ಕೃತಿಕ ಸಂಘರ್ಷದಲ್ಲಿ ಉಂಡ ಜಾಣರೂ ದಲಿತರೇ, ತಿಂದು ತೇಗಿಸಿಕೊಳ್ಳಲೂ ಆಗದೆ ಸೋತವರೂ ದಲಿತರೇ ಆಗಿದ್ದಾರೆ.

ಸಂಘರ್ಷ ಸಮಿತಿಯಿಂದ ನಾನು ಸಾಕಷ್ಟು ಕಲಿತುಕೊಂಡಿದ್ದೇನೆ. ಸಾರಿಗೆ ವ್ಯವಸ್ಥೆಯೇ ಇಲ್ಲದ ಹಳ್ಳಿಯಲ್ಲಿ ದ. ಸಂ. ಸಮಿತಿ ಶಾಖೆಯ ರಿಬ್ಬನ್ ಕತ್ತರಿಸುವ ಕೆಲಸ, ಹರಿದದ್ದನ್ನು ಜೋಡಿಸುವ, ಬಣ್ಣ ಹೋಗಿದ್ದರೆ ಪುನಃ ಬಣ್ಣ ಕೊಡಲು ಪ್ರಯತ್ನಿಸುವ ಕೆಲಸ. ಇಂಥ ಕೆಲಸಗಳೆಲ್ಲ ಬದುಕಿಗೆ, ನನ್ನ ಅಧ್ಯಯನಕ್ಕೆ ಹೊಸ ತಿರುವನ್ನೇ ಕೊಟ್ಟು, ನನ್ನ ಆಲೋಚನಾ ಕ್ರಮವನ್ನೇ ಬದಲಾಯಿಸಿವೆ. ಇಲ್ಲಿಯ ಸ್ನೇಹಿತರಲ್ಲಿಯೂ ಅಷ್ಟೇ ಕಹಿಕಹಿಯಾದ ಕಾಫಿ ಕುಡಿಸಿದವರೂ ಇದ್ದಾರೆ, ಚಹ ಕುಡಿಸಿದವರೂ ಇದ್ದಾರೆ. ಸಂಘರ್ಷ ಸಮಿತಿ ಆರಂಭದಲ್ಲಿ ಇಟ್ಟುಕೊಂಡು ಬಂದ ಬಿಗುವು ಆನಂತರದಲ್ಲಿ ಉಳಿಸಿಕೊಂಡು ಹೋಗಲು ಸಾಧ್ಯವಾಗಲಿಲ್ಲ. ಜನಸಂಖ್ಯೆ ಆಧಾರಿತ ವಿಚಾರ, ರಾಜಕೀಯ ಪ್ರವೇಶ ವಿಚಾರ, ಎಡಗೈ-ಬಲಗೈ ವಿಚಾರ ಇಂಥವು ಮುಖ್ಯವಾಗಿ, ಸೀಳಿಹೋದರೂ ಅದಕ್ಕೆ ತಾತ್ತ್ವಿಕ ಭಿನ್ನಾಭಿಪ್ರಾಯದ ಲೇಪ ಹೆಗಲೇರಿ ನಿಂತಿತ್ತು.

ಎಡಗೈ ಹಾಗೂ ಬಲಗೈ ಈ ಎರಡೂ ಪಂಗಡಕ್ಕೆ ಸೇರಿದ ನನ್ನಂತವರು ನಡುವೆಯೇ ಅಂತರ್ ಪಿಶಾಚಿಯಾಗಿಯೋ ತ್ರಿಶಂಕುವಾಗಿಯೋ ಜೋತಾಡಬೇಕಾಗಿ ಬಂದುದು ದುರದೃಷ್ಟಕರ ಸಂಗತಿ. ಇದು ಎಲ್ಲಿಯವರೆಗೆ ತಲುಪಿತು ಎಂದರೆ, ಒಮ್ಮೆ "ಡಾ. ಬಿ. ಆರ್. ಅಂಬೇಡ್ಕರ್ ಮತ್ತು ಪ್ರಸ್ತುತತೆ" ಎಂಬ ವಿಷಯದ ಮೇಲೆ ಮಾತನಾಡುತ್ತಿದ್ದೆ. ಎಂದಿನಂತೆ ವಸ್ತುನಿಷ್ಠವಾಗಿಯೇ ಮಾತನಾಡುತ್ತ ಅಲ್ಲಿಯ ಅವಶ್ಯಕ, ಅನವಶ್ಯಕ, ವಿಚಾರಗಳನ್ನು ಚರ್ಚಿಸಿ ಪರಿಷ್ಕರಿಸಬೇಕಾದ ವಿಚಾರಗಳ ಬಗ್ಗೆಯೂ ಮಾತನಾಡಿದೆ. ಅದೊಂದು ಉಡಾಫೆಯ ಉಪನ್ಯಾಸವಾಗಿರಲಿಲ್ಲ. ಆದರೆ ಅಲ್ಲಿ ಪ್ರಬಂಧದ

ವಿಚಾರ ಬದಿಗಿಟ್ಟು, ನನ್ನ ಜಾತಿಗೂ ಅಂಬೇಡ್ಕರ್ ಜಾತಿಗೂ ತಳಕು ಹಾಕಿ, ಇವನು ಜಗಜೀವನರಾಮ ಜಾತಿಯವನು ಅಂಬೇಡ್ಕರ್ ಜಾತಿಯವನಲ್ಲ, ಅದಕ್ಕೆ ಈತ ಹೀಗೆ ಹೇಳ್ತಾನೆ. ಹಿಂದೆ ಜಗಜೀವನರಾಮ ಕೂಡ ಅಂಬೇಡ್ಕರ್ ಹೀಗೆ ಮಾಡಿದ್ದಾನೆ! ಎಂದು ಎಲ್ಲೆಲ್ಲಿಯದೋ ವಿಷಯ ತಂದು ಇನ್ನೆಲ್ಲೋ ತಳಕು ಹಾಕಿ ವೇದಿಕೆಯ ಮೇಲಿದ್ದಾಗಿನಿಂದ ಹಿಡಿದು ವೇದಿಕೆ ಇಳಿದ ಮೇಲೂ ನನಗೆ ಹಾರ-ತುರಾಯಿಗಳ ಜೊತೆಗೆ ಪಂಗನಾಮವೂ ಹಾಕಿದರು. ಅಷ್ಟೇ ಅಲ್ಲ ಅಂದಿನಿಂದ ಸಮಿತಿಯ ಯಾವ ಕೆಲಸಕ್ಕೂ ನನಗೆ ಕರೆಯದೆ ಹೊರಗಿಟ್ಟರು.

ಸ್ವಾರಸ್ಯವೆಂದರೆ ದಲಿತ ಸಂಘರ್ಷ ಸಮಿತಿಯ ಕೆಲ ಸ್ನೇಹಿತರೇ ಮತ್ತೆ ನನ್ನನ್ನು ಕರೆಯಲು ಬಂದದ್ದು. "ದಲಿತ ಜಗತ್ತು" ಅದ್ಭುತವಾದುದು, ಭವ್ಯವಾದುದು, ದಿವ್ಯವಾದುದು ಎಂದು ಗಾಳಿ ಹಾಕಿ ದಲಿತ-ದಲಿತರಲ್ಲಿಯೇ ವಿಷದ ಬೀಜ ಬಿತ್ತಿ, ತೂರಿಕೊಳ್ಳುವವರನ್ನು ಅರಿಯಲು ದ.ಸಂ.ಸ ಸ್ನೇಹಿತರು ತಡಮಾಡಿದರೂ, ಅರಿತುಕೊಂಡದ್ದು ನನಗೆ ಮುಖ್ಯವಾಗಿತ್ತು. ಸಂಘರ್ಷ ಸಮಿತಿಯ ಬಲಕ್ಕಾಗಿಯೇ ತಮ್ಮ ಅಸ್ತಿತ್ವ, ಜೀವನ ಜೀವವನ್ನೂ ಕಳೆದುಕೊಂಡ ಸ್ನೇಹಿತರೂ ನನ್ನ ಕಣ್ಣಲ್ಲಿಯೇ ಇದ್ದಾರೆ. ಇಂಥವರ ಕುರಿತು ಬರೆಯುವ ಒತ್ತಾಸೆಯೂ ಇದೆ. ಇಂಥ ಬಲಾಬಲಗಳು ಏನೇ ಇದ್ದಾಗಲೂ ಎರಡೂ ಸಂಘಟನೆಗಳು ನೇರವಾಗಿ ಮಾತನಾಡುವ ಎದೆಗಾರಿಕೆ, ಸಂಯಮದ ಗೆಲುವು ಇದ್ದುದ್ದನ್ನು ಬಿಚ್ಚು ಮನಸ್ಸಿನಿಂದ ಹೇಳಿಬಿಡುವ, ಹೇಳುವವರ ವಿಷಯವನ್ನು ವ್ಯವಧಾನದಿಂದ ಕೇಳುವುದನ್ನು ಕಲಿಸಿಕೊಟ್ಟಿವೆ. ಈ ಬರವಣಿಗೆಯಲ್ಲಿ ಬಲವಿದೆ ಎಂದು ನಿಮಗನಿಸಿದಲ್ಲಿ ಅದರ ಹಿಂದಿನ ಬೆನ್ನೆಲುಬು ಈ ಮೇಲೆ ಸೂಚಿಸಿದ ಶಕ್ತಿಗಳೇ ಆಗಿವೆ ಎನ್ನುವುದರಲ್ಲಿ ಸಂದೇಹವಿಲ್ಲ.

ಈ ಕೃತಿಯಲ್ಲಿಯ ಒಟ್ಟು ಬರವಣಿಗೆ ನಾನು ಉದ್ಯೋಗಾವಸ್ಥೆಗೆ ಕಾಲಿಡುವವರೆಗೆ ಮಾತ್ರ ಸಂಬಂಧಿಸಿದ್ದು. ಎಂದರೆ ಇದು ಮೊದಲ ಕಂತಿನ ಕೃತಿ. ನಾನು ಅಧ್ಯಾಪಕ ಹುದ್ದೆಗೆ ಸೇರಿದ ನಂತರ ದಲಿತನಾಗಿ ಅನುಭವಿಸಿದ ಅನುಭವಗಳು, ಒಗರಾದ, ಹಣ್ಣಾದ, ಹುಣ್ಣಾದ ಹಾಗೂ ಅಷ್ಟೇ ಆಕ್ರಮಣಕಾರಿ ಸ್ವರೂಪದವೂ ಇವೆ. ಒಂದು ಸಂದರ್ಭವಂತೂ ನನ್ನನ್ನು ಆತ್ಮಹತ್ಯೆಯ ಅಂಚಿನವರೆಗೂ ಕರೆದುಕೊಂಡು ಹೋಗಿತ್ತು. ಇಂಥ ನಿರ್ಧಾರವನ್ನು ತೆಗೆದುಕೊಳ್ಳುವ ಮುನ್ನ ಒಂದು ದೀರ್ಘವಾದ ಪತ್ರವನ್ನೂ ಬರೆದೆ. ಅದನ್ನು ಈ ಕೃತಿಯಲ್ಲಿ ಪ್ರಕಟಿಸುವ ವಿಚಾರ ಮಾಡಿ ಮತ್ತೆ ಹಿಂದೆ ಸರಿದಿದ್ದೇನೆ. ಏಕೆಂದರೆ, ಈ ಬರವಣಿಗೆಯನ್ನು ಪ್ರಕಟಿಸಲು ವೈಯಕ್ತಿಕವಾಗಿ ನನಗೇನೂ ಆತಂಕಗಳಿಲ್ಲ. ಆದರೆ ನನ್ನ ಈರೀತಿಯ ಬಿಚ್ಚು ಬರವಣಿಗೆ ಮತ್ತೊಬ್ಬರ ಬದುಕಿಗೆ ಕೊಡಲಿಯ ಪೆಟ್ಟಾಗಬಾರದೆನ್ನುವುದೇ ಆಗಿದೆ. ಕಹಿಯುಂಡು ಬೆಳೆದ ದೇಹಕ್ಕೆ ವಿಷಕುಡಿದರೂ ಅಮೃತವಾಗುತ್ತದೆ. ಅಂತೆಯೇ ಇಂಥ ಪ್ರಸಂಗಗಳು ನನಗೆ ಮತ್ತಷ್ಟು ಸಹನಾ ಶಕ್ತಿಯನ್ನು ತಂದು ಕೊಟ್ಟಿವೆ. ಮನೆಯಂಗಳದ

ನೀರಿನಲ್ಲಿ ಕಲ್ಲೆಸೆದು ಪರಿಣಾಮ ನೋಡುವುದಕ್ಕಿಂತ, ನನ್ನ ಮನದಂಗಳದ ನೀರಿನಲ್ಲಿಯೇ ಕಲ್ಲೆಸೆದು ಪರೀಕ್ಷಿಸುವಾಸೆ.

"ಬದುಕು ತೆರೆದ ಪುಸ್ತಕದಂತಿರಬೇಕು" ಎಂದು ನನ್ನ ಆತ್ಮೀಯರಲ್ಲಿ ಹೇಳಿ ಚರ್ಚಿಸಿದ್ದೆ. ಆದರೆ ಅದು ಸಾಧ್ಯವಿಲ್ಲ ಎಂದು ವಾದಸಿದವರೇ ಹೆಚ್ಚು. ಅದು ಹೇಗೆ ಸಾಧ್ಯವಿಲ್ಲ? ಹಾಗಿದ್ದರೆ "ಪ್ರಾಮಾಣಿಕತೆ"ಗೆ ಅರ್ಥವೇನು? ಇಂತ ಹಲವಾರು ಪ್ರಶ್ನೆಗಳು ಕಾಡಿದರೂ ಇದನ್ನು ಸುಳ್ಳಾಗಿಸಬೇಕು ಎಂಬ ಛಲ ನನ್ನಲ್ಲಿ ಬೇರೂರಿ, ನನ್ನ ಬದುಕಿನ ಚಿತ್ರವನ್ನೇ ಬೆತ್ತಲಾಗಿಸಿ ನನ್ನವರೆದುರು ಹರಡಿದ್ದೇನೆ. ಆದರೆ ಮೇಲಿನ ಪ್ರಸಂಗ "ಬದುಕು ತೆರೆದಿಟ್ಟ ಪುಸ್ತಕವಲ್ಲ" ಎನ್ನುವ ಮಾತಿಗೆ ರುಜು ಹಾಕುವಂತೆ ಒತ್ತಾಯಿಸುತ್ತಿದೆ. ನಾನು ಆತ್ಮೀಯವಾಗಿ ಬಿಚ್ಚಿಟ್ಟ ಪ್ರಸಂಗಗಳನ್ನು ಅಸ್ತ್ರವಾಗಿಸಿಕೊಂಡು "ಬ್ಲಾಕ್ ಮೇಲ್" ಮಾಡುತ್ತಿರುವ ಸ್ನೇಹಿತರೂ ನನ್ನುಡಿಯಲ್ಲಿಯೇ ಇದ್ದಾರೆ. ಇಂತಹವರನ್ನು ಕಂಡಾಗ 'ಅಯ್ಯೋ' ಎನಿಸುತ್ತದೆ. ಉಗುಳಲೂ ಬಾರದ ನುಂಗಲೂ ಬಾರದ ಪ್ರಸಂಗಗಳು ಇರುವುದರಿಂದಲೇ, ಕೂದಲು ನೆರೆತಾಗ ಸಾವು ಸನಿಹಕ್ಕೆ ಬಂದಾಗ ಆತ್ಮಕಥೆಯಂತಹ ಬರವಣಿಗೆಗೆ ಮುಂದಾಗುತ್ತಾರೆನಿಸುತ್ತದೆ. ಹೆಮ್ಮೆ ತರುವ ಪ್ರಸಂಗಗಳನ್ನು ಹೇಳಿಕೊಳ್ಳುವಂತೆ ಹೇಸಿಕೆ ತರಿಸುವ ಪ್ರಸಂಗಗಳಿದ್ದರೂ ಬಿಚ್ಚಿ ಬರೆಯಬೇಕೆನ್ನುವವ ನಾನು.

l

l

# ಗೌರ್ಮೆಂಟ್ ಬ್ರಾಹ್ಮಣ

## ಕೃತಿಯ ಬಗ್ಗೆ ಆಯ್ದ ಅಭಿಪ್ರಾಯಗಳು :

ಈ ಕೃತಿಯನ್ನು ಕುರಿತು ಪತ್ರಿಕೆಗಳಲ್ಲಿ ಸಾಕಷ್ಟು ವಿಮರ್ಶೆಗಳು ಬಂದಂತೆ, ಪತ್ರಗಳೂ ರಾಶಿಯಂತೆ ಬಂದಿವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಆಯ್ಕೆ ಮಾಡಿ ಕೊಡಲಾಗಿದೆ. ಇದರಿಂದ ಓದುಗರಿಗೆ ಒಂದಿಲ್ಲೊಂದು ರೀತಿಯಲ್ಲಿ ಸಹಾಯವಾಗಬಹುದೆಂಬ ನಂಬಿಕೆ.

### ■ ಈ ಶತಮಾನದ ಕೊನೆಯ ಮುಖ್ಯ ಬರಹದ ದಿಕ್ಕು:

ಅರವಿಂದ ಮಾಲಗತ್ತಿ ಅವರ 'ಗೌರ್ಮೆಂಟ್ ಬ್ರಾಹ್ಮಣ' ಕನ್ನಡದಲ್ಲಿ ಪ್ರಕಟವಾಗುತ್ತಿರುವ ಮೊಟ್ಟ ಮೊದಲ ದಲಿತ ಬದುಕಿನ ಆತ್ಮಕಥೆ. ಈ ಕೃತಿಯು ನೀಡುವ ತಾಜಾ ಅನುಭವ ಮತ್ತು ದಲಿತ ರೂಪಕ ಶಕ್ತಿ ಅಸೀಮವಾದುದು.

ಅರವಿಂದ ಮಾಲಗತ್ತಿ ಅವರು ತಮ್ಮ ಅನುಭವವನ್ನು ಬಿಡಿ ಬಿಡಿಯಾದ ಆಕಾರದಲ್ಲಿ ಕಟ್ಟಿ ಕೊಟ್ಟಿದ್ದಾರೆ. ಈ ಆಕಾರವು ತನಗೆ ತಾನೇ ಸ್ವಯಂಪೂರ್ಣ.... ಇವು ಬಿಡಿಯಾದ ಕಥೆಗಳಂತೆಯೂ ಆತ್ಮಕಥೆಯಂತೆಯೂ ಭಾವಿಸಲು ಅರ್ಹವಾಗಿವೆ. ಕತೆ, ಪ್ರಬಂಧ ಮತ್ತು ಆತ್ಮಕಥೆಗಳಲ್ಲಿ ಇರುವ ಅಂತರದ ಸೂಕ್ಷ್ಮ ಸಂಬಂಧಗಳನ್ನು ಬರಹಗಾರ ತನ್ನ ಜೀವಾಳದಿಂದಲೇ ಅದನ್ನು ಬೇರ್ಪಡಿಸಬೇಕಾಗುತ್ತದೆ. ತನ್ನ ವೈಯಕ್ತಿಕ ಅನುಭವ ತೀವ್ರ ಸಂವೇದ ಶೈಲಿಗೆ ಪ್ರಾಪ್ತವಾದಾಗ ಮಾತ್ರ 'ಆತ್ಮಕಥೆ'ಗೆ ಬೆಂಕಿ ಬಿದ್ದಂತೆ ಆಗುತ್ತದೆ. ಅದು ಒಂದು ರೀತಿಯಲ್ಲಿ ಉರಿಯುವ ಕೆಂಡವಾಗುತ್ತದೆ. ಅದು ನಿಗಿನಿಗಿ ಪ್ರಜ್ವಲಿಸುವ ಬೆಂಕಿ ಹೊಳೆ. ಸಹಸ್ರ ವರ್ಷಗಳ ನಿಗಿನಿಗಿ ಕೆಂಡವು ತನ್ನ ಒಳಗೇ ಸುರಿಯುವ ಬದುಕಾಗಿ ಪರಿಣಮಿಸುತ್ತದೆ....

ನನಗೆ ಅನಿಸುವಂತೆ ತುಸು ಚಂದದ ಬರಹದ ಕಡೆ ವಾಲುತ್ತ, ಆ ಒರಟು ಅನುಭವವನ್ನು ಮರೆಮಾಸುತ್ತಾರೆ... ಇಲ್ಲಿನ ಬಿಡಿ ಬರಹಗಳು ಏಕ ಘಟಕದಲ್ಲಿ ಏಕಾತ್ಮಕವಾಗಿ ಎರಕ ಹೊಯ್ಯುವುದಿಲ್ಲ. ಒಂದು ಘನ ಸ್ಥಿತಿಯ ಬೆಳಕು ಬಂಡೆಯಾಗದಿರುವುದಕ್ಕೆ ಇದೂ ಒಂದು ಕಾರಣವಿರಬಹುದೆಂದು ನನಗೆ ತೋರುತ್ತದೆ

ದಲಿತ ಲೋಕದ ಅನುಭವಗಳು ಈ ಶತಮಾನದ ಕೊನೆಯ ಮುಖ್ಯ ಬರಹಗಳಾಗುತ್ತವೆಂಬ ದಿಕ್ಕನ್ನು ಗೌರ್ಮೆಂಟ್ ಬ್ರಾಹ್ಮಣ ಸಂಕೇತಿಸುತ್ತದೆ....

**ಮಲ್ಲೇಪುರಂ ಜಿ. ವೆಂಕಟೇಶ್**

ಕನ್ನಡ ಪ್ರಭ. ೧೮.೧೨.೯೪

## ■ ಮಾಲಗತ್ತಿ.... ಬರಹದ ದೊಡ್ಡ ಶಕ್ತಿ:

ನಮ್ಮ ನೆಲದಲ್ಲಿ ದಲಿತ ಮಾತ್ರನಿಗೇ ಸಾಧ್ಯವಾಗುವ ವಿಶಿಷ್ಟ ಹೀನಾಯವಾದ ಬಿಡಿ ಬಿಡಿ ಪ್ರಸಂಗಗಳ ಮಾಲಿಕೆಯಿದು.... ಓದುಗರನ್ನು ಬೆಚ್ಚಿ ಬೀಳಿಸುವ, ಆಘಾತ ನೀಡುವ ಅನುಭವಗಳಿಗೇ ಒತ್ತು ಕೊಟ್ಟು ಒಂದೆಡೆ ತಂದಿರುವ ಮಾಲಗತ್ತಿ ಬಹುತೇಕ ಎಲ್ಲೂ ತಾಳ್ಮೆಗೆಡದೆ ಭಾವಾವಿಷ್ಟರಾಗದೆ ನಿರರ್ಥಕ ಸಿಟ್ಟು ಹೊರಹಾಕದೆ ಎದೆ ಬಗೆದು ತೋರುತ್ತ ಚಿಂತನೆಗೆ ಹಚ್ಚುತ್ತಾರೆ.

ಅವರ ಅನುಭವಗಳ ಸಾಚಾತನ ಎಂಥದೆಂದರೆ, ಅವರು ನಿರ್ವಿಕಾರವಾಗಿ ಎತ್ತುವ ಪ್ರಶ್ನೆಗಳೂ ತಲ್ಲಣಕಾರಿಯಾಗೇ ಕಾಣಲು ಸಾಧ್ಯ.

ಮಾಲಗತ್ತಿ ಇತರರ ಮನಸ್ಸನ್ನು ಸಹಾನುಭೂತಿಯಿಂದ ನಿರೀಕ್ಷಿಸುತ್ತಾರೆ ಎಂಬುದೇ ಅವರ ಬರಹದ ದೊಡ್ಡ ಶಕ್ತಿ.

ಲಂಕೇಶ್ ಪತ್ರಿಕೆ

ಎನ್.ಎಸ್. ಶಂಕರ, ಡಿಸೆಂಬರ್ ೯೪.

## ■ ಗೌರ್ಮೆಂಟ್ ಬ್ರಾಹ್ಮಣ:
## ಒಬ್ಬ ವ್ಯಕ್ತಿಯ ಚರಿತ್ರೆಯಲ್ಲ, ಸಮಾಜವೊಂದರ ಚರಿತ್ರೆ:

ಮಾಲಗತ್ತಿ ಅವರು ಕವಿಯಾಗಿ ಕಾದಂಬರಿಕಾರರಾಗಿ ಚರ್ಚೆಗೊಳಗಾಗಿರುವ ಶಕ್ತ ಲೇಖಕರು. ತಮ್ಮ ಕವಿತೆ ಕಾದಂಬರಿಗಳಲ್ಲಿ ಬಳಸಿಕೊಳ್ಳಲಾಗದ ವಿಭಿನ್ನ ಅನುಭವ ಜಗತ್ತನ್ನು ಈ ಆತ್ಮಕಥೆಯ ಬರಹದಲ್ಲಿ ಸಹಜವಾಗಿ, ಪ್ರಖರವಾಗಿ ತೆರೆದು ಇಟ್ಟಿದ್ದಾರೆ. ಹಾಗೆ ನೋಡಿದರೆ ಈ ಕೃತಿ ಒಂದೇ ಸಲಕ್ಕೆ ಬರೆದದ್ದಲ್ಲ. ಆತ್ಮಕತೆಯ ತುಣುಕುಗಳಂತಿರುವ ಇಲ್ಲಿನ ಬಹುತೇಕ ಲೇಖನಗಳನ್ನು ಕಳೆದ ಹತ್ತು ವರ್ಷಗಳಿಂದ ಲೇಖಕರು ಬಿಡಿ ಬಿಡಿಯಾಗಿ ಪ್ರಕಟಿಸಿಕೊಂಡೇ ಬಂದಿರುವರು. ಬಿಡಿಬಿಡಿ ಬರಹಗಳಾಗಿ ಪ್ರಕಟವಾಗಿದ್ದಾಗಲೇ ಇವು ಕನ್ನಡದ ಓದುಗರನ್ನು ತಾಕಿದ್ದವು. ಈಗ ಈ ಲೇಖನಗಳೆಲ್ಲ ಕೃತಿಯಾಗಿ ಬಂದು ಕನ್ನಡದ ಓದುಗರ ಸಂವೇದನೆಯನ್ನು ಅಲ್ಲಾಡಿಸಲು ಅಣಿಯಾಗಿವೆ. ಕನ್ನಡದೊಳಗೆ ನಡೆಯುತ್ತಿರುವ

ಸಂಸ್ಕೃತಿ ಚಿಂತನೆಯಲ್ಲಿ ಅನೇಕ ಚಲನೆಗಳನ್ನು ಮಾಡುವಷ್ಟು ಗೌರ್ಮೆಂಟ್ ಬ್ರಾಹ್ಮಣ ಕೃತಿಯು ಸಮರ್ಥವಾಗಿದೆ.

ಜನಾಂಗವಾದ (racism) ಇರುವ ಸಮಾಜದಲ್ಲಿ ಒಬ್ಬ ಕಪ್ಪು ವರ್ಣೀಯ, ಜಾತಿ ಸಮಾಜವಿದ್ದಲ್ಲಿ ಒಬ್ಬ ಅಸ್ಪೃಶ್ಯ ವ್ಯಕ್ತಿ ತನ್ನ ಆತ್ಮಕಥೆ ಬರೆದಾಗ ಅದು ಒಬ್ಬ ವ್ಯಕ್ತಿಯ ಕಥನವಾಗಿರುವುದಿಲ್ಲ. ಇಡೀ ಒಂದು ಸಮುದಾಯವೇ ಚರಿತ್ರೆಯಲ್ಲಿ ಅಪಮಾನದ, ಬದುಕುಳಿಯಲು ಮಾಡಿದ ಸೆಣಸಾಡಿದ ಕಥಾನಕವಾಗಿರುತ್ತದೆ.... ಈ ಅರ್ಥದಲ್ಲಿ 'ಗೌರ್ಮೆಂಟ್ ಬ್ರಾಹ್ಮಣ' ಕೂಡ ಒಬ್ಬ 'ವ್ಯಕ್ತಿ'ಯ ಚರಿತ್ರೆಯಲ್ಲ; ಮನುಷ್ಯರ ಹಸಿವನ್ನು ಹಸಿವೆಂದರಿಯದ, ಅವರ ಭಾವನೆಗಳನ್ನು ಭಾವನೆಗಳೆಂದು ಗುರುತಿಸಲಾಗದ ಅವರ ಪ್ರೇಮವನ್ನು ಪ್ರೇಮವೆಂದು ಒಪ್ಪಿಕೊಳ್ಳದ ಸಮಾಜವೊಂದರ ನಂಬಿಕೆ ಆಚರಣೆಗಳ ಚರಿತ್ರೆ....

ಮಾಲಗತ್ತಿಯವರದು... ವೇದನೆ ತುಂಬಿದ ದಾರ್ಶನಿಕನಂತೆ ವಿವೇಚನೆ ಮಾಡುವ ಗಂಭೀರ ಬರಹವಾಗಿದೆ. ಕೆಲವೊಮ್ಮೆ ಅವರು ಸಮಾಜದ ವರ್ತನೆಯನ್ನು ವಿಮರ್ಶೆ ಮಾಡುವ ಸಿನಿಕತೆ ಎನಿಸುವ ಆಕ್ರೋಶದ ಅಂಚಿಗೂ ಸರಿಯುವುದುಂಟು. ಅವರ ಬರಹದ ಶಕ್ತಿ ಇರುವುದು ಅತ್ಯಂತ ವಿಶಿಷ್ಟವಾದ ಅನುಭವಗಳಲ್ಲಷ್ಟೇ ಅಲ್ಲ ಆ ಅನುಭವಗಳನ್ನು ನಿರೂಪಿಸಲು ಬಳಸುವ ಚಿತ್ರಮಯ ಭಾಷೆಯಲ್ಲಿ, ಈ ಬರಹಗಳು ಹೀಗಾಗಿ ಒಮ್ಮೆ ಕವಿತೆಯಂತೆ ಮತ್ತೊಮ್ಮೆ ಪ್ರಬಂಧಗಳಂತೆ ಬಹಳ ಸಲ ಕತೆಗಳಂತೆ ಓದಿಸಿಕೊಳ್ಳುತ್ತವೆ. ಮುಟ್ಟಿದರೆ ಮಿಡಿಯುತ್ತವೆ.

**ರಹಮತ್ ತರೀಕೆರೆ**

ಪ್ರಜಾವಾಣಿ ೨೬ ಫೆಬ್ರವರಿ ೯೫.

## ■ ಗಂಭೀರ ಚರ್ಚೆಯ ಅವಶ್ಯಕತೆಯಿದೆ:

ಇಲ್ಲಿನ ಅನೇಕ ಅನುಭವಗಳು ವಿವರಗಳು ಹೊರಗೆ ಬರಲೇ ಬೇಡವೇ ಪ್ರಕಟಿಸುವಾಗಲೇ ಬೇಡವೇ? ಎಂದು ತುಯ್ದಾಟದಲ್ಲಿ ಯಾತನೆ ವೇದನೆಯನ್ನು ಅನುಭವಿಸಿವೆ. ಇಂಥ ಸಂಕೀರ್ಣತೆಯ ಸಂದಿಗ್ಧತೆ ವ್ಯಕ್ತಿ ಕೇಂದ್ರಿತ ನೆಲೆಯದೋ ಅಥವಾ ಸಮಾಜ ಕೇಂದ್ರಿತ ನೆಲೆಯದೋ? ಜೊತೆಗೆ ಇದರಲ್ಲಿ ಯಾವುದು ಪ್ರಧಾನ. ಯಾವುದು ಆನುಷಂಗಿಕ. ಈ ದಿಕ್ಕಿನಲ್ಲಿ ಗಂಭೀರ ಚರ್ಚೆಯ ಅವಶ್ಯಕತೆಯಿದೆ.

**ಪುಸ್ತಕ ಮಾಹಿತಿ (ಹಂಪಿ)**

ಬಿ.ಎಂ. ಪುಟ್ಟಯ್ಯ - ಅಕ್ಟೋಬರ್ ೯೪

## ■ ವಂಚನೆಗೊಳಗಾದವರ ಪ್ರತಿನಿಧಿಯ ಧ್ವನಿ:

ತಾವು ಬರೆದ ಗೌರ್ಮೆಂಟ್ ಬ್ರಾಹ್ಮಣ ಓದಿದೆ. ಸಹಸ್ರಾರು ವರ್ಷಗಳಿಂದ ವಂಚನೆಗೊಳಗಾದ ಪ್ರತಿನಿಧಿಯಾಗಿ, ನೋವು ನಲಿವುಗಳಿಗೆ ಧ್ವನಿಯಾಗಿದೆ ನಿಮ್ಮ ಸಾಹಿತ್ಯ.

**ವಾಯ್ ಎಂ. ಮಾದಾರ್**
ಧಾರವಾಡ ೧೭.೧೨.೯೪

## ■ ಅಸಲೀ ಅನುಭವಗಳು:

ಗೌರ್ಮೆಂಟ್ ಬ್ರಾಹ್ಮಣ ಡಾ. ಅರವಿಂದ ಮಾಲಗತ್ತಿಯವರ ಆತ್ಮಕಥೆ. ಮರಾಠಿಯಲ್ಲಿ ಈ ಮೊದಲು ಪ್ರಕಟವಾದ.... ಮಾದರಿಯಲ್ಲಿ ಬಂದ ಕನ್ನಡದ ಮೊತ್ತ ಮೊದಲ ಆತ್ಮಕಥೆಯಿದು.

ಸ್ವಗತವಾಗಿ ಲೇಖಕರು ನೇರವಾಗಿ ಬೆತ್ತಲಾಗಿಸುವ ಪ್ರತಿಯೊಂದು ಪ್ರಕರಣಗಳು ಅವರ ಅಸಲೀ ಅನುಭವಗಳು-ಶೋಷಣೆ ಅಸ್ಪೃಶ್ಯತೆಯ ಕರಾಳತೆಯನ್ನು ಅರ್ಥಪೂರ್ಣವಾಗಿ ಧ್ವನಿಸುತ್ತವೆ. ಲೇಖಕರು ಮುಕ್ತಾಯದ ಮೊದಲು 'ಬದುಕು ತೆರೆದ ಪುಸ್ತಕದಂತಿರಬೇಕು' ಎಂದರೂ ಬರೆಯಲಾಗದ ಬರೆಯಲಾರದ ಇನ್ನೂ ಅನೇಕ ರಹಸ್ಯಗಳಿವೆ ಎನ್ನುವ ಮೂಲಕ ಕುತೂಹಲ ಕೆರಳಿಸುತ್ತಾರೆ.

**ತರಂಗ ಪತ್ರಿಕೆ**
ದೇರ್ಲ ಡಿಸೆಂಬರ್ ೧೯೯೪

## ■ ಗೌರ್ಮೆಂಟ್ ಬ್ರಾಹ್ಮಣ: ದಲಿತ ಜನಾಂಗದ ಇತಿಹಾಸ

ನಿಮ್ಮ ಪರಿಚಯವಿಲ್ಲದಿದ್ದರೂ 'ಗೌರ್ಮೆಂಟ್ ಬ್ರಾಹ್ಮಣ' ಎಂಬ ಪುಸ್ತಕ ಓದಿ ತುಂಬ ಸಂತೋಷವಾಯಿತು... ಇಲ್ಲಿಯ ಪ್ರಸಂಗಗಳು ದಲಿತ ಜನಾಂಗದ ಸಹೋದರ ಸಹೋದರಿ ಬಂಧು ಬಾಂಧವರ ಒಂದೊಂದು ಇತಿಹಾಸವಾಗಿವೆ.

**ಸಂಪಾದಕರು : ಪಂಪಣ್ಣ ಟಿ.**
ಟೈಗರ್ ಪತ್ರಿಕೆ- ಹೊಸಪೇಟೆ ೨೩.೨.೯೫

## ■ ನಿಮ್ಮನ್ನು ನೋಡಬೇಕು ಮಾತನಾಡಿಸಬೇಕು ಅನಿಸ್ತು:

ಗೌರ್ಮೆಂಟ್ ಬ್ರಾಹ್ಮಣ... ಓದಿ ಮುಗಿಸಿದೆ. ಓದುತ್ತಿದ್ದಂತೆ ನಿಮ್ಮ ಪರಿಚಯವನ್ನು ಮತ್ತಷ್ಟು ಹತ್ತಿರವಾಗಿಸಿಕೊಳ್ಳಬೇಕೆನಿಸುತ್ತಿತ್ತು. ಕೆಲವೊಂದು ಕಡೆ ಖುಷಿಯಾಗುತ್ತಿತ್ತು ಮತ್ತೆ ಸಿಟ್ಟು ಬರುತ್ತಿತ್ತು, ಮತ್ತೆ ಬೇಸರವಾಗುತ್ತಿತ್ತು. ಇದೆಲ್ಲಕ್ಕೂ ಕಾರಣರಾದ 'ಗೌರ್ಮೆಂಟ್ ಬ್ರಾಹ್ಮಣ'ರನ್ನು ನೋಡಬೇಕು, ಮಾತನಾಡಿಸಬೇಕು ಕಡೆ ಪಕ್ಷ ಅವರಿಗೆ ಪತ್ರಿಸಬೇಕು ಅನಿಸ್ತು... ನನ್ನ ಜೀವ ತಿನ್ನುವ ಬಾಳೆ ಎಲೆ, ಸತ್ತ ಕುರಿ... ಓದಿ 'ಅತ್ತೆ' ಸಾರ್.

**ಯೋಗೀಶ್ ಜಿ. ಭಟ್**

ಸಾಗರ, ೮.೧.೯೫

## ■ ರೋಮಾಂಚನಗೊಳಿಸಿದ ಕೃತಿ:

ನನಗಂತೂ ಹೃದಯ ಬಡಿತ ಹೆಚ್ಚಿಸಿ ರೋಮಾಂಚನಗೊಳಿಸಿದ ಕೃತಿಯಿದು... ಈ ಕೃತಿ ಎಲ್ಲ ಕಡೆ ದೊರೆಯುವಂತೆ ಮಾಡಿದರೆ ದಲಿತರಿಗೆ ಬಿಲಿಯನ್ ಡಾಲರ್‌ಗಳಷ್ಟು ಸಹಾಯ ಮಾಡಿದ ಹಾಗೆ ಆಗುವುದರಲ್ಲಿ ಅನುಮಾನವಿಲ್ಲ. ಮಾನವೀಯ ಮೌಲ್ಯಗಳನ್ನು ಎತ್ತಿ ಹಿಡಿಯುವ ಗೌರ್ಮೆಂಟ್ ಬ್ರಾಹ್ಮಣ ನಮ್ಮೆಲ್ಲರ ಮನೆಗೆ ಬೇಕಾಗಿದೆ.

ಹಣ, ರಕ್ತಪಾತ, ಕಾನೂನುಗಳಿಲ್ಲದೆ ಕೇವಲ ಸಾಹಿತ್ಯದ ಮೂಲಕ... ತಾನು ಅನುಭವಿಸಿದ ದುಃಖ ದುಮ್ಮಾನಗಳು ಮತ್ತು ಅಪಮಾನಗಳನ್ನು ಬಿಚ್ಚು ಮನಸ್ಸಿನಿಂದ ಆತ್ಮ ಚರಿತ್ರೆ ಬರೆಯುವುದರ ಮೂಲಕ ಸಮಾಜದ ಎಲ್ಲ ವರ್ಗದ ಜನರ ಮನ ಪರಿವರ್ತನೆಗೊಳಿಸುವ ಉತ್ತಮ ಕೃತಿ.... ದಲಿತರ ನೋವಿನ ಸಂಕೇತವಾಗಿ ಹೊರಬಂದ ಕೃತಿಯಿದು.

**ಎನ್. ವೆಂಕಟೇಶ್**

ತ್ಯಾಗರಾಜನಗರ, ಚಳ್ಳಕೆರೆ ೩೧.೧.೯೪

## ■ Will Power ಗಳಿಸಿಕೊಡುವ ಕೃತಿ:

ನಿಮ್ಮ ಕೃತಿ ಶೋಷಣೆಗೆ ಒಳಗಾದ ದಲಿತ ಹಿಂದುಳಿದ ಮತ್ತು ಎಲ್ಲ ವರ್ಗದ ಜನರಿಗೆ 'ಗೌರ್ಮೆಂಟ್ ಬ್ರಾಹ್ಮಣ' Will Power ಗಳಿಸಿಕೊಡುತ್ತದೆ. ಸಾಹಿತ್ಯದಲ್ಲಿ ಇದೊಂದು ಕ್ರಾಂತಿಕಾರಕ ಬೆಳವಣಿಗೆ... ನಿಮ್ಮ ತನ ಕನ್ನಡಿಗರಿಗೆ ಸ್ಫೂರ್ತಿಯ ಸೆಲೆಯಾಗಲಿ.

**ಎನ್. ವೆಂಕಟೇಶ್**

ಮೈಸೂರು ೧೭.೨.೯೬

## ■ Conclusion ಅಷ್ಟಾಗಿ ಒಪ್ಪುವದಿಲ್ಲ:

ಗೌರ್ಮೆಂಟ್ ಬ್ರಾಹ್ಮಣ ಓದಿದೆ. ಕೊನೆಯ ಎರಡು ಘಟನೆಗಳು ತುಂಬಾ ಹಿಡಿಸಿದವು... ಎಲ್ಲಾ ಪ್ರಕರಣಗಳಲ್ಲಿ ನಿಮ್ಮ ವಿದ್ವತ್ತಿನಿಂದ Conclusion ನೀಡಿರುವುದು ಅಷ್ಟಾಗಿ ಒಪ್ಪುವದಿಲ್ಲ. ಪ್ರಕರಣಗಳ ವಾಸ್ತವ ರೀತಿಯೇ Originality ಮೌಲ್ಯ.

**ಡಿ. ಈರೇಶ್ ನಗರ್ಲೆ**

ಬೆಂಗಳೂರು, ೧೫.೧೨.೯೬

## ■ ನನ್ನ ನೆನಪುಗಳು ತಾಜಾ ಆದವು:

ನಾನು ಹುಟ್ಟಿನಿಂದ ಬ್ರಾಹ್ಮಣನಾದವನು.. ಗೌರ್ಮೆಂಟ್ ಬ್ರಾಹ್ಮಣ ಓದಿ ನನ್ನ ಮನಸ್ಸು ಚಿಂತನೆಗೆ ಒಳಗಾಯಿತು. ನನ್ನ ಬದುಕಿನ ಹಲವಾರು ನೆನಪುಗಳು ತಾಜಾತನದಿಂದ ನಳನಳಿಸಿದವು....

**ಮೋಹನ ಭಟ್**

ಶಿರಸಿ, ೨೮.೧.೯೫

## ■ ಎರಡನೇ ಕಂತಿನ ಕೃತಿಯ ನಿರೀಕ್ಷೆ

'ಮಾನವೀಯ ಮೌಲ್ಯ'ಕ್ಕಾಗಿ ನಡೆಸಿದ ವಿಶಿಷ್ಟ ಶೋಧನೆ ನಿಜಕ್ಕೂ ಪರಿಣಾಮಕಾರಿ.

ನನ್ನ ಮನಸ್ಸಿನೊಳಗೆ ಹಲವು ಬಗೆಯಲ್ಲಿ ಹೊಸ ಚೈತನ್ಯ ನೂತನ ವಿಚಾರ ಮೂಡಿಸಿವೆ. ನಿಮ್ಮ 'ಎದೆಗಾರಿಕೆ' ಹಾಗೂ ಪ್ರಾಮಾಣಿಕ ಪ್ರಯತ್ನಕ್ಕೆ ಈ ಓದುಗನ ತುಂಬು ಹೃದಯದ ಅಭಿನಂದನೆಗಳು. ಎರಡನೇ ಕಂತಿನ ಕೃತಿಯ ನಿರೀಕ್ಷೆಯಲ್ಲಿರುವೆ.

**ನೀ. ಗೂ. ರಮೇಶ್**

೨೦.೮.೯೫

## ■ ಈ ಪುಸ್ತಕ ಏಕೆ ನಿನ್ನ ಹತ್ತಿರ?

... ಸಮುದಾಯ ಎಸ್.ಎಫ್.ಆಯ್ ಹಮಾಲರ ಸಂಘ ಕಟ್ಟಿಕೊಂಡು ಓಡಾಡುವ ನನ್ನಂಥವನನ್ನು ಸಾಮಾಜಿಕ ಕ್ಷೇತ್ರದಲ್ಲಿ ಇನ್ನಷ್ಟು ಎದೆಗಾರಿಕೆಯಿಂದ ಎಚ್ಚರಿಕೆಯಿಂದ ದುಡಿಯಲು ಪ್ರೇರೇಪಿಸಿದೆ.

ದೊಡ್ಡ ಜಾತಿಯಲ್ಲಿ ಹುಟ್ಟಿ... ಜನಿವಾರವನ್ನೇ ಎಸಿದವ... ಸ್ವಜಾತಿಯ ವೈರುಧ್ಯಗಳನ್ನು ಖಂಡಿಸುವುದು ಫ್ಯಾಷನ್ ಮಾಡಿಕೊಂಡಿರುವ ಸಮಾಕಾಲೀನ ಸಂದರ್ಭದಲ್ಲಿ ನಿಮ್ಮ ಕೃತಿ, ನನ್ನಂಥವರನ್ನು ಸ್ವವಿಮರ್ಶೆಗೆ ಹಚ್ಚುತ್ತದೆ ಮತ್ತು ನೈಜತೆಯ ನೆಲೆಗೆ ಬರಲು ಎಚ್ಚರಿಸುತ್ತದೆ!

ನನ್ನ ಸ್ವಂತ ಚಿಕ್ಕ ಗ್ರಂಥಾಲಯಕ್ಕೆ ನಿಮ್ಮ ಕೃತಿ ಸೇರಿಸಿ ಹೆಮ್ಮೆ ಪಡುತ್ತಿದ್ದಾಗಲೇ ಕೆಲವೊಬ್ಬರ ಮುಖ ಸಪ್ಪೆಯಾದರೆ... ನನ್ನ ಮನೆಗೆ ದೊಡ್ಡಪ್ಪ ಅಣ್ಣ ತಾಯಿಯವರನ್ನು ನೋಡಲು ಬರುವ ಅಕ್ಕ ಪಕ್ಕದ ಬ್ರಾಹ್ಮಣರು 'ಈ ಪುಸ್ತಕ ಏಕೆ ನಿನ್ನ ಹತ್ತಿರ' ಎಂದಾಗ ನಾನು ಅದೇ ವೇಗದಲ್ಲಿ ನನ್ನ ಹತ್ತಿರ ಭಗವದ್ಗೀತೆ, ಕೃಷ್ಣಾವತಾರ, ರಾಮಾಯಣಗಳೂ ಇವೆ ಗೌರ್ಮೆಂಟ್ ಬ್ರಾಹ್ಮಣವೂ ಇದೆ ಎಂದು ಹೇಳಿ ಬಾಯಿ ಮುಚ್ಚಿಸಿದ್ದೇನೆ...'

**ಪ್ರಮೋದ್ ತುರ್ವಿಹಾಳ್**
ರಾಯಚೂರು

**ಪ್ರಕಟಿತ ಕೃತಿಗಳು :**

**೧. ಕಾವ್ಯ**

೧. ಮೂಕನಾಗಿ ಬಾಯಿ ಬಂದಾಗ – ೧೯೮೨
೨. ಕಪ್ಪು ಕಾವ್ಯ – ೧೯೮೫
೩. ಮೂರನೆಯ ಕಣ್ಣು – ೧೯೯೬
೪. ನಾದ ನಿನಾದ – ೧೯೯೯
೫. ಅನೀಲ ಆರಾಧನಾ (ಸಂಯುಕ್ತ ಕಾವ್ಯ) – ೨೦೦೨
೬. ಸಿಲಿಕಾನ್ ಸಿಟಿ ಮತ್ತು ಕೋಗಿಲೆ – ೨೦೦೩
೭. ಚಂಡಾಲ ಸ್ವರ್ಗಾರೋಹಣಂ – ೨೦೦೩
೮. ಅರವಿಂದ ಮಾಲಗತ್ತಿಯವರ ಆಯ್ದ ಕವಿತೆಗಳು – ೨೦೦೪
೯. ವಿಶ್ವತೋಮುಖ – ೨೦೧೦
ಹೂ ಬಲುಭಾರ – ೨೦೧೦
೧೦. The Dark Cormos (ಅನುವಾದಿತ ಕವನಗಳು) – ೨೦೦೯

**೨ ಕಥೆ**

ಮುಗಿಯದ ಕತೆಗಳು – ೨೦೦೦

**೩. ಕಾದಂಬರಿ**

ಕಾರ್ಯ – ೧೯೮೮

**೪ ನಾಟಕ**

೧. ಮಸ್ತಕಾಭಿಷೇಕ – ೧೯೮೪
೨. ಸಮುದ್ರದೊಳಗಣ ಉಪ್ಪು – ೧೯೯೯

**೫. ವಿಚಾರ ಮತ್ತು ವಿಮರ್ಶೆ – ಸಂಶೋಧನೆ**

೧. ಕನ್ನಡ ಸಾಹಿತ್ಯ ಮತ್ತು ದಲಿತ ಯುಗ – ೧೯೯೮
೨. ದಲಿತ ಪ್ರಜ್ಞೆ : ಸಾಹಿತ್ಯ, ಸಮಾಜ ಮತ್ತು ಸಂಸ್ಕೃತಿ – ೨೦೦೩
೩. ಸಾಂಸ್ಕೃತಿಕ ದಂಗೆ – ೨೦೦೪
೪. ಬೆಂಕಿ ಬೆಳದಿಂಗಳು – ೨೦೦೬
೫. ದಲಿತ ಸಾಹಿತ್ಯ ಪ್ರವೇಶಿಕೆ – ೧೯೯೬
೬. ಅಂತರ್ಜಾತಿಯ ವಿವಾಹ ಎಷ್ಟು ಪ್ರಗತಿಪರ? – ೧೯೯೬
೭. ಪೂನಾಪ್ಯಾಕ್ಟ್ ಮತ್ತು ದಲಿತರೆತ್ತ ಸಾಗಬೇಕು ? – ೧೯೯೮
೮. ಭೀಮ ನಡೆಯ ಬೆಳಕು – ೨೦೦೬
೯. ಸಾಹಿತ್ಯ ಸಾಕ್ಷಿ – ೨೦೦೯
೧೦. ದಲಿತ ಸಾಹಿತ್ಯ ಪರ್ವ – ೨೦೦೯

**೬. ಆತ್ಮ ಕಥೆ**

೧. ಗೌರ್ಮೆಂಟ್ ಬ್ರಾಹ್ಮಣ – ೧೯೯೪

**೭. ಜಾನಪದ – ಸಂಶೋಧನೆ**

೧. ಆಣೀ ಪೀಣಿ (ಜಾನಪದ ಸಂಶೋಧನೆ) – ೧೯೮೨
೨. ಜಾನಪದ ವ್ಯಾಸಂಗ (ಜಾನಪದ ಸಂಶೋಧನೆ) – ೧೯೮೫
೩. ಜಾನಪದ ಶೋಧ (ಜಾನಪದ ಸಂಶೋಧನೆ) – ೧೯೯೦
೪. ತುಳುವರ ಆಟಿ ಕಳೆಂಜ (ಜಾನಪದ ಸಂಶೋಧನೆ) – ೧೯೯೩
೫. ಜನಪದ ಆಟಗಳು (ವಯಸ್ಕ ಶಿಕ್ಷಣದ ಕೃತಿ) – ೧೯೯೩
೬. ತಾಳಿಕೋಟಿ ದ್ಯಾಮವ್ವ (ವಯಸ್ಕರ ಶಿಕ್ಷಣದ ಕೃತಿ) – ೧೯೯೫
೭. ಕೊರಗ ಜನಾಂಗ ಒಂದು ಅಧ್ಯಯನ (ಸಹ ಬರವಣಿಗೆ) – ೧೯೯೧
೮. ಜಾನಪದ ಅಭಿಯಾನ (ಸಂಶೋಧನಾ ಲೇಖನಗಳು) – ೨೦೦೪

**೮. ಸಂಶೋಧನೆ**

೧. ಭೂತಾರಾಧನೆ–ಸಾಂಸ್ಕೃತಿಕ ಮತ್ತು ಸಾಮಾಜಿಕ ಚಿಂತನೆ – ೧೯೯೧
೨. ದಲಿತ ಸಾಹಿತ್ಯ ಚಳುವಳಿಯ ತಾತ್ವಿಕ ಚಿಂತನೆ – ೧೯೯೧
೩. ಪುರಾಣ–ಜಾನಪದ ಮತ್ತು ದೇಶಿವಾದ – ೧೯೯೮
೪. ಜನಪದ ಆಟಗಳು (ಪಿಎಚ್.ಡಿ ಮಹಾಪ್ರಬಂಧ ಅಪ್ರಕಟಿತ) – ೧೮೯೭

**೯. ಸಂಪಾದನೆ**

೧. ಸಮಾವೇಶ (ಸಹ ಸಂಪಾದನೆ) – ೧೯೮೩
೨. ನಾಲ್ಕು ದಲಿತೀಯ ಕಾದಂಬರಿಗಳು – ೧೯೯೧
೩. ಅಂಬೇಡ್ಕರ್ ವಿಚಾರಧಾರೆ – ೧೯೯೧
೪. ಅಂಬೇಡ್ಕರ್ ವಾದ – ಸಂವಾದ – ೧೯೯೨
೫. ಗೋಮಾಳದಿಂದ ಗಂಗೋತ್ರಿಗೆ – ೧೯೯೩
೬. ದಲಿತ ಸಾಹಿತ್ಯ ನೆಳೆ – ಹಿನ್ನಲೆ – ೧೯೯೭
೭. ಕನ್ನಡ ಗ್ರಂಥೋದ್ಯಮ – ೧೯೯೮
೮. ಜಾನಪದ ಸೈದ್ಧಾಂತಿಕ ಪ್ರಜ್ಞೆ ಮತ್ತು ದೇಶಿವಾದ – ೧೯೯೮
೯. ಜಾನಪದ ಮೂಲ ತತ್ತ್ವಗಳು – ೧೯೯೯
೧೦. ಕಾದಂಬರಿಗಳ ವಿಮರ್ಶೆ – ೨೦೦೦
೧೧. ಮಲೆಯ ಮಹದೇಶ್ವರ – ೨೦೦೦
೧೨. ಬೇವು ಬೆಲ್ಲ (ಸಹ ಸಂಪಾದನೆ) – ೨೦೦೧
೧೩. ದಲಿತ ಮಾರ್ಗ (ವಿಮರ್ಶೆ) – ೨೦೦೨
೧೪. ಅನೀಲ ಆರಾಧನ (ಸಂಯುಕ್ತ ಕಾವ್ಯ) ಕವನ ಸಂಕಲನ – ೨೦೦೨
೧೫. What Gandhi Says about Ambekdar (ಸಹ ಸಂ) – ೨೦೦೦

**೧೦. ಮಾಲಗತ್ತಿ ಅವರ ಸಾಹಿತ್ಯ ಕುರಿತ ಕೃತಿಗಳು**

೧. 'ಕಾರ್ಯ' ವಿಮರ್ಶಾಲೋಕ – ೧೯೮೯
(ಕಾರ್ಯ ಕಾದಂಬರಿಯ ವಿಮರ್ಶೆಯ ಲೇಖನಗಳು)

೨. 'ದಲಿತಜ್ಞ' – ೨೦೦೦
(ಸಾಹಿತ್ಯದ ವಿಚಾರ ಸಂಕಿರಣ ಲೇಖನಗಳು)
ಸಂ. ಡಾ. ಅರ್ಜುನ ಗೊಳಸಂಗಿ

೩. ನೋವು ಹೆತ್ತ ಪ್ರೀತಿ – ೨೦೦೨
(ಗೌರ್ಮೆಂಟ್ ಬ್ರಾಹ್ಮಣ ಕೃತಿಯ ವಿಮರ್ಶಾ ಲೇಖನಗಳ ಸಂಕಲನ)
ಸಂ: ಡಾ. ಅಪ್ಪಗೆರೆ ಸೋಮಶೇಖರ್
ಡಾ. ಮಲ್ಲಿಗೆಹಳ್ಳಿ ನರೇಂದ್ರಕುಮಾರ್

೪. ಪ್ರೊ. ಅರವಿಂದ ಮಾಲಗತ್ತಿ ಅವರ ಮಾರ್ಗ–ಸಾಹಿತ್ಯ – ೨೦೦೬
ಡಾ. ಕೆ. ಕೇಶವಶರ್ಮ

೫. ಪ್ರೊ. ಅರವಿಂದ ಮಾಲಗತ್ತಿ ಅವರ ಸಾಹಿತ್ಯ–ಚಿಂತನೆ – ೨೦೦೫
ಡಾ. ಶಂಕರೇಗೌಡ **(ಪಿ.ಹೆಚ್.ಡಿ. ಮಹಾಪ್ರಬಂಧ)**

೬. ಪ್ರೊ. ಅರವಿಂದ ಮಾಲಗತ್ತಿಯವರ ಕಾವ್ಯಾನುಸಂಧಾ – ೨೦೦೬
ಡಾ. ಕುಶಾಲ ಬರಗೂರು

೭. ಶಾರದೆಯ ಕುಣಿಸಿದ ಕವಿ – ಡಾ. ಅರವಿಂದ ಮಾಲಗತ್ತಿ – ೨೦೦೭
ಎಚ್ಚೆಸ್ಕೆ

೮. ಪಗಡೆಯ ಕೌದಿಯಲಿ ದೀಪಗಳು ಬೆಳಗಿ
(ಅಮಾ ಸಾಹಿತ್ಯದ ಸ್ತ್ರೀವಾದಿ ಅಧ್ಯಯನ)
ಡಾ. ಎಸ್.ಡಿ. ಶಶಿಕಲಾ – ೨೦೦೯

೯. ಕಾವ್ಯಮಂಥನ – ಸಂ. ಅರ್ಜುನ ಗೊಳಸಂಗಿ – ೨೦೦೯

೧೦. ಮಾಲಗತ್ತಿ ಮಾತು ಮಥನ – ಜಿ.ಎಸ್. ಭಟ್ಟ
(ಪ್ರಶ್ನೋತ್ತರಗಳ ಮಾಲಿಕೆಯ ಕೃತಿ) – ೨೦೧೦

೧೧. ವಾದ ವಾಗ್ವಾದ ಸಂವಾದ – ಸಂ. ಬಿಸ್ಲೇಹಳ್ಳಿ ಪ್ರಭು – ೨೦೦೯
(ಸಂದರ್ಶನ ಹಾಗೂ ಸಂವಾದಗಳು)

೧೨. Depiction of poor in the wores of Aravind Malagatti
by - Vijayakumar C.E. – ೨೦೦೮

೧೩. Two versions of dalit growing up : A Comparative
Study of Vasanth Moon's Growing up untouchable
in India and Aravind Malagattis Government

Brahmana.
By - Banshelkar Yashpal Murhari,
M. Phil Thesis Pandicherry University – ೨೦೦೮

**೧೧. ಬೃಹತ್ ಗ್ರಂಥಗಳ ಸಂಪಾದನ ಕಾರ್ಯ**

* ಕನ್ನಡ ವಿಶ್ವಕೋಶ (ಸಂ. ೧೪):
  ಪ್ರಧಾನ ಸಂಪಾದಕ
  ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿ.ವಿ. ೨೦೦೫
* **ಕನ್ನಡ ವಿಶ್ವಕೋಶದ ೧೪ ಸಂಪುಟಗಳು : ಸಿ.ಡಿ. ರೂಪದಲ್ಲಿ**
  ಪ್ರಧಾನ ಸಂಪಾದಕ
  ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ. ೨೦೦೬
* ಕನ್ನಡ ವಿಷಯ ವಿಶ್ವಕೋಶ : ಕರ್ನಾಟಕ (ಪರಿಷ್ಕೃತ)
  ಪ್ರಧಾನ ಸಂಪಾದಕ
  ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿ.ವಿ. ೨೦೦೫
* ಕನ್ನಡ ವಿಷಯ ವಿಶ್ವಕೋಶ : ಜಾನಪದ
  ಪ್ರಧಾನ ಸಂಪಾದಕ
  ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ. ೨೦೦೬
* ಕನ್ನಡ ವಿಷಯ ವಿಶ್ವಕೋಶ : ಪ್ರಾಣಿ ವಿಜ್ಞಾನ
  ಪ್ರಧಾನ ಸಂಪಾದಕ
  ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ. ೨೦೦೬
* ಎಫಿಗ್ರಾಫಿಯಾ ಕರ್ನಾಟಿಕಾ : (ಸಂ–೧೨)
  ಪ್ರಧಾನ ಸಂಪಾದಕ
  ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ. ೨೦೦೬
* ಕುವೆಂಪು ಕೃತಿ ವಿಮರ್ಶೆ:
  ಪ್ರಧಾನ ಸಂಪಾದಕ
  ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ. ೨೦೦೬

* * * *